# ಚೀನಾದಲ್ಲಿ ನನ್ನ ಬಾಲ್ಯ

ಸುಪ್ರಸಿದ್ಧ ಚಿತ್ರಕಾರ

**ಚಿಯಾಂಗ್ ಯೀ**

ಸಚಿತ್ರ ಆತ್ಮಕಥೆ

ಅನುವಾದ :

' ಗೀತಾಪ್ರಿಯ '

**ಗಾಂಧೀ ಸಾಹಿತ್ಯ ಸಂಘ**

ಬೆಂಗಳೂರು-೩.

ಪ್ರಥಮ ಮುದ್ರಣ: ೫೦೦೦.



ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿಸಿದುದು.

**A Chinese Childhood**

BY

Chiang yee



ಬೆಲೆ: 1-50

ಮುದ್ರಣ:

ಶ್ರೀ ಸತ್ಯನಾರಾಯಣ ಪ್ರೆಸ್
ಅರಳೇಪೇಟೆ, : : ಬೆಂಗಳೂರು ೨.

# ಮುನ್ನುಡಿ

ಒಬ್ಬನೇ ಯೋಚಿಸುತ್ತ ಕೂತಾಗ ನನಗೆ ಎಳೆತನದ ಸಂಗತಿಗಳೆಲ್ಲ ನೆನಪಿಗೆ ಬರುತ್ತವೆ. ಸಂತೋಷವಾಗಿ ಕಳೆದು ಹೋದ ಸಂಗತಿಗಳನ್ನು ನೆನೆದರೆ ಒಮ್ಮೊಮ್ಮೆ ನಗೆ ಬರುತ್ತದೆ. ಕೆಲವು ನೆನಪಾದರೆ ಏನೋ ದುಃಖ ವಾಗಿ ಆ ವಿಷಾದ ಘಟನೆ ಈಗ ಕಣ್ಣಿಗೆ ಕಟ್ಟಿದಂತೆ ಅನಿಸುತ್ತದೆ.

ನನ್ನ ಬಾಲ್ಯ ಆದರ್ಶಪ್ರಾಯವಾದದ್ದು, ಹೆಮ್ಮೆಯಿಂದ ಹೇಳಬಲ್ಲೆ. ಚೀನಾ ವಿಶಾಲ ದೇಶ. ಒಂದು ಪ್ರಾಂತಕ್ಕೂ ಇನ್ನೊಂದಕ್ಕೂ ಆಚಾರ ಸಂಪ್ರ ದಾಯಗಳಲ್ಲಿ ವ್ಯತ್ಯಾಸ, ಬಾಳು ಬದುಕಿನಲ್ಲಿ ಭೇದ ಕಾಣುತ್ತವೆ. ಚೀನಾದಲ್ಲಿ ದೊಡ್ಡ ದೊಡ್ಡ ಕುಟುಂಬಗಳು ಎಂದು ತಿಳಿಯುತ್ತಾರೆ. ಕೆಲವು ಕಡೇ ಗಂಡ-ಹೆಂಡತಿ, ಇದ್ದರೆ ಒಂದು ಪಿಳ್ಳೆ ಇಷ್ಟೇ. ಮೂವತ್ತು ನಲವತ್ತು ಜನ ಒಂದೆ ಮನೆಯಲ್ಲಿ ಇರುವುದೂ ಉಂಟು. ಅಂಥ ದೊಡ್ಡ ಕುಟುಂಬದಲ್ಲಿ ನಾನು ಬೆಳೆದೆ. ನಮ್ಮ ಕುಟುಂಬದ ಸಂಗತಿಗಳನ್ನು ಹೇಳಿದರೆ ಸಹ-ವಿದ್ಯಾರ್ಥಿಗಳು ಆಚ್ಚರಿಯಿಂದ ಕೇಳುತ್ತಿದ್ದರು. ದೊಡ್ಡ ಕುಟುಂಬಗಳ ಬದುಕು ಅವರಿಗೆ ವಿಚಿತ್ರವೆನಿಸುತ್ತಿತ್ತು.

ತನ್ನ ತಂದೆ ತಾಯಿ ಬಾಲ್ಯದಲ್ಲೇ ತೀರಿದರು. ನನ್ನ ಕಕ್ಕಂದಿರ ಮಕ್ಕಳು ಅವರ ತಂದೆ ತಾಯಿಗಳ ಬಳಿಗೆ ಹೋಗಿ ಅಕ್ಕರೆ ಅಚ್ಚೆ ಪಡೆಯು ತ್ತಿದ್ದುದನ್ನು ನೋಡಿ ನಾನು ಪಟ್ಟ ದುಃಖವನ್ನೂ ಈಗಲೂ ಮರೆತಿಲ್ಲ. ಈಗಲೂ ನನ್ನ ಬಾಲ್ಯದಲ್ಲಿದ್ದ ಅಂಜುಬುರಕುತನ, ಜೊತೆಯಿಲ್ಲದ ಒಂಟಿತನ, ಇವುಗಳನ್ನು ನೆನೆದು ಸಂತೋಷ-ದುಃಖ ಎರಡೂ ಆಗುತ್ತವೆ. ಅಂತೂ ನನ್ನ ಬಾಲ್ಯ ಸುಖವಾಗೇ ಇತ್ತು.

ಪರಿವರ್ತನೆ ಎಂದರೆ ಗಾಬರಿ. 'ನಾನು ನೋಡಿದ್ದು, ಅರಿತದ್ದು ಈಗ ಏಕೆ ಬದಲಾದವು ?' ಎಂದು ಅಜ್ಜಿಯನ್ನು ಕೇಳುತ್ತಿದ್ದೆ. ಹಿಂದೆ ಇದ್ದಂತೆಯೇ ನಡದಂತೆಯೆ ಯಾವಾಗಲೂ ಇರುವುದಿಲ್ಲವೆಂಬುದನ್ನು ಅರಿಯಬೇಕು ಎಂದು ಆಕೆ ಸಮಾಧಾನ ಹೇಳುತ್ತಿದ್ದಳು. ಆಕೆ ಹೇಳಿದ್ದು ಎಷ್ಟು ಸತ್ಯ !

ನಾನು ಪರದೇಶಗಳಿಗೆ ಹೋದುದನ್ನು ಕೇಳಿದ್ದರೆ ನನ್ನಲ್ಲಿ ಬಂದ ಪರಿವರ್ತನಕ್ಕೆ ನಮ್ಮ ಅಜ್ಜಿ ಆಶ್ಚರ್ಯ ಪಡುತ್ತಿರಲಿಲ್ಲ, ಸಂತೋಷಪಡುತ್ತಿದ್ದಳು ಎಂದು ನನಗನಿಸುತ್ತದೆ. ಆಕೆ ಬದುಕಿದ್ದರೆ ನನ್ನ ವಿದೇಶ ಪ್ರವಾಸಕ್ಕೆ ಒಪ್ಪುತ್ತಿದ್ದಳೋ ಇಲ್ಲವೋ! ಮನುಷ್ಯನ ಬದುಕಿನಲ್ಲಿ ಪರಿವರ್ತನೆಗೆ ಕಾರಣವನ್ನೂ ಫಲವನ್ನೂ ಯಾರು ಹೇಳಬಲ್ಲರು? ವಿಧಿ ಎಂದು ಅನುಭವಿಸಬೇಕಾದ್ದೇ. ನಾನು ಪರಲೋಕದಲ್ಲಿ ಅಜ್ಜಿಯನ್ನು ಸೇರುವ ವೇಳೆಗೆ ಇನ್ನೂ ಎಷ್ಟು ಬದಲಾವಣೆ ಬರಲಿವೆಯೋ ತಿಳಿಯದು.

ಕಳೆದು ಹೋದುದಕ್ಕೆ ಇಷ್ಟು ಚಿಂತೆ ಒಳ್ಳೆಯದೆ? ಇಂಗ್ಲೆಂಡಿನಲ್ಲಿ ಇದ್ದ ಈ ೬ ವರ್ಷ ಆಗಾಗ ಗತಕಾಲದ ಪ್ರಶಂಸೆಯನ್ನೂ ಈಗಿನ ಕಾಲದ ನಿಂದನೆಯನ್ನೂ ಕೇಳಿದೇನೆ. ಗೆಳೆಯರು ಕೆಲವರು "ಆಗಿ ಹೋದದ್ದಕ್ಕೆ ಚಿಂತಿಸಿ ಕಾಲ ಕಳೆಯುವುದಕ್ಕಿಂತ ಆಗಲಿರುವುದನ್ನು ಆಲೋಚಿಸಿದರೆ ಒಳ್ಳೆಯದಲ್ಲವೆ" ಎನ್ನುತ್ತಿದ್ದರು. ನಾನು ಪ್ರಗತಿ–ವಿಕಾಸಗಳಿಗೆ ವಿರೋಧಿಯಲ್ಲ. ಒಂದರಲ್ಲಿ ಕಾಣಬರುವ ಕ್ರಮಾಭಿವೃದ್ಧಿಯನ್ನು ಪರಿಶೀಲಿಸಿ ಅದರ ಭವಿಷ್ಯತ್ತನ್ನು ಆಲೋಚಿಸುವುದು ನನಗೆ ಪರಮಾನಂದ. ಹೊಸದು ಯಾವಾಗಲೂ ಹಳೆಯದಕ್ಕಿಂತ ಉತ್ತಮವೆಂದು ನಾನು ತಿಳಿದಿಲ್ಲ. ಎಳೆಯ ವಯಸ್ಸಿನ ಸುಖ, ಆನಂದ ನೆನಪಿಗೆ ಬಂದಾಗಲೆಲ್ಲಾ ಸವಿಯಾದ ಸವಿನೆನಪು ಬಾರದೆ ಇರದು. ಅದಕ್ಕಿಂತ ಹೆಚ್ಚಿನ ಆನಂದ ಇನ್ನೊಂದಿಲ್ಲ.

ಇದು ಘಟನೆಗಳ ಕ್ರಮದಂತೆ ಬರೆದದ್ದಲ್ಲ. ಇದರಲ್ಲಿನ ಕೆಲವು ಸಂಗತಿ ವಿಲಕ್ಷಣ ಎನಿಸಲೂ ಬಹುದು. ಐದರಿಂದ ಹದಿನೈದು ವರ್ಷದವರೆಗಿನ ನನ್ನ ಬಾಲ್ಯದ, ನಮ್ಮ ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳನ್ನು ಮಾತ್ರವೇ ಬರೆದಿದೇನೆ. ಬರೆದೆನಲ್ಲಾ ಎಂದು ನನಗೆ ಎಷ್ಟೋ ಹೆಮ್ಮೆ.

ಚೀನಾದಲ್ಲಿ ಬೇಗ ಬೇಗ ಎಷ್ಟೋ ಬದಲಾವಣೆ ಆದರೂ ಚೀನಾ ಪ್ರಜೆಗಳ ಬಾಳಿನಲ್ಲಿ ಮಹತ್ತರ ಪರಿವರ್ತನೆ ಆಗಿಲ್ಲ. ೫೦೦೦ ವರ್ಷದಿಂದಲೂ ಚೀನಾದಲ್ಲಿ ಪರಿವರ್ತನೆ ಆಗುತ್ತಲೇ ಇದೆ. ಹಿಂದೆ ಬಂದ ಬದಲಾವಣೆ ಋತುಗಳ ಪರಿವರ್ತನದಂತೆ ಅವ್ಯಕ್ತವಾಗಿ ಇದ್ದರೆ, ಇಂದಿನ ಪ್ರಗತಿ ಸ್ಪಷ್ಟವಾಗಿ ಬಲು ಬೇಗನೆ ಸಾಗುತ್ತಿದೆ. ಪ್ರಗತಿಯ ವೇಗವೇ ಇದಕ್ಕೆ ಕಾರಣ!

—ಚಿಯಾಂಗ್ ಯೀ.

# ಗ್ರಂಥ ಪರಿಚಯ

'ಚೀನಾದಲ್ಲಿ ನನ್ನ ಬಾಲ್ಯ' ಎಂಬ ಈ ಪುಸ್ತಕ ಚಿಕ್ಕವರಿಗೂ ದೊಡ್ಡವರಿಗೂ ಸಹಿತ ಆನಂದ ಕೊಡುವಂಥದು. ಇಬ್ಬರೂ ನಿರಾಡಂಬರ ಜೀವನವನ್ನು ಮೆಚ್ಚುವವರು. ಇದನ್ನು ಚಿಯಾಂಗ್‌ಯೀ 1939 ರಲ್ಲಿ ಬರೆದರು. ಆಗ ದ್ವಿತೀಯ ಜಗತ್ ಸಂಗ್ರಾಮದ ಮೋಡ ಲೋಕದಲ್ಲಿ ಕವಿದಿತ್ತು. ಇದನ್ನು ಓದಿದ ಬುದ್ಧಿವಂತರಿಗೆಲ್ಲಾ ತಮ್ಮ ಬಾಳಿನ ಸಂಪ್ರದಾಯಗಳ ಬಗ್ಗೆ ಇದ್ದ ಸಂಶಯಗಳೆಲ್ಲಾ ಮಾಯವಾಗಿವೆ. ಯುದ್ಧ ಕಾಲದಲ್ಲೂ ಕಣ್ಣೆದುರಿಗೆ ಇದ್ದ ಸಾವು, ಸರ್ವನಾಶಗಳಿಂದ ಕಾಪಾಡಿ ಸ್ವಲ್ಪ ಶಾಂತಿ ಕೊಟ್ಟಿತು ಈ ಪುಸ್ತಕ.

ಈ ಗ್ರಂಥದಲ್ಲಿ 3 ಪೀಳಿಗೆಗಳ 30 ಕ್ಕಿಂತ ಹೆಚ್ಚು ಜನರ ಒಂದು ದೊಡ್ಡ ಕುಟುಂಬದ ದೊಡ್ಡ ಕಥೆ ಇದೆ. ಎಲ್ಲರೂ ಅಜ್ಜನನ್ನು ಹೆಚ್ಚಾಗಿ ಗೌರವಿಸುವುದು, ಆತ ಶಾಂತವಾಗಿ ಬಾಳುವುದು ಮೆಚ್ಚಬೇಕಾದ ಸಂಗತಿ. ಗ್ರಂಥಕರ್ತನ ತಂದೆ ಚಿತ್ರಕಾರ, ಅಣ್ಣ ಕವಿ. ಇವರ ವಂಶದ ಮೂಲ ಪುರುಷ ಮೊದಲು ಒಂದು ರಾಷ್ಟ್ರದ ಗವರ್ನರ್ ಆಗಿ, ಆಮೇಲೆ ಏಕಾಕಿಯಾಗಿ ಒಂದು ಮನೆಯಲ್ಲಿ ಇದ್ದರಂತೆ. ಆ ಮನೆಗೆ ಮೂರೇದಾರಿ. ಒಂದು ಆತನಿಗೆ, ಎರಡು ಇಬ್ಬರು ಸ್ನೇಹಿತರಿಗೆ. ಸಾವಿರ ಜನವಾದರೂ ಆ ಮನೆ ತನಕ್ಕೆ 3 ದಾರಿಯ ಮನೆತನ ಎಂದೇ ಹೆಸರು.

ಈಗಿನ ಭಾರತೀಯ ಕುಟುಂಬ ಜೀವನಕ್ಕೂ ಇದರಲ್ಲಿನ ಚೀನಾ ಕುಟುಂಬ ಜೀವನಕ್ಕೂ ಎಷ್ಟೋ ಹೋಲಿಕೆ ಇದೆ. ಕುಟುಂಬದಲ್ಲಿ ಹಿರಿಯರನ್ನು ಗೌರವಿಸುವುದು ಒಂದು. ಅದರಲ್ಲಿ ವಂಶ ವೃಕ್ಷವನ್ನು ಬರೆದಿಟ್ಟು ಹಿರಿಯರ ಚರಿತ್ರೆಯನ್ನು ಕಿರಿಯರಿಗೆ ತಿಳಿಸುತ್ತಾರೆ. ಅದರಿಂದ ವಂಶ ಚರಿತ್ರೆ ಅಲ್ಲದೆ ಕುಟುಂಬ ಸಂಪ್ರದಾಯ, ಅದರ ಬಾಧ್ಯತೆ ಮುಂದಿನವರಿಗೆ ತಿಳಿಯುತ್ತದೆ. ತಮ್ಮ ಕುಲಾಚಾರಗಳನ್ನು ಬಹಳ ಶ್ರದ್ಧಾ ಭಕ್ತಿಗಳಿಂದ ಕಳಾತ್ಮಕವಾಗಿ ಅವರು ಅನುಸರಿಸುವುದು ನಮಗೆ ಹೊಸ ಸಂಗತಿ. ಬೇರೆ ಬೇರೆ ಋತುಗಳಲ್ಲಿ ಅವರು ನಡಸುವ ಉತ್ಸವಗಳು, ಹಬ್ಬ ಹರಿಸಗಳು ಹಿಂದೆ ಭಾರತೀಯ

ಜೀವನದಲ್ಲಿ ಇದ್ದು, ಈಗ ಮರೆಯಾಗಿ ಹೋಗಿವೆ. ಕಳಾತ್ಮಕ ಆನಂದಮಯ ಜೀವನಕ್ಕೆ ದೂರವಾಗಿ ನಾವು ಈಗ ನಿಸ್ತಬ್ಧ ನಿಸ್ಸಾರ ಬಾಳು ಬಾಳುತ್ತಿದೇವೆ. ಚೀನಾದವರ ಸಂಘ ಜೀವನ, ಆಚಾರ ವ್ಯವಹಾರಗಳಲ್ಲಿ ಒಂದು ಪ್ರತ್ಯೇಕತೆ ಯಿದೆ.

ಈ ಗ್ರಂಥ ಬಹಳ ಮುಖ್ಯವಾದ ಸೂಕ್ಷ್ಮ ಅಭಿಪ್ರಾಯವನ್ನು ಹೇಳುತ್ತದೆ. ಆನಂದಮಯ ಬಾಲ್ಯಜೀವನವನ್ನು ಸ್ಫುರಿಸುವಂತೆ ಮಾಡಿ, ಸಂಪ್ರದಾಯ, ಆಚಾರ ವ್ಯವಹಾರ, ಕಳಾರಾಧನೆ ಮುಂತಾದ ವಿಷಯಗಳಲ್ಲಿ ಹೊಸ ಹೊಸ ಊಹೆಗಳನ್ನು ಹೊರಚಿಮ್ಮಿಸುವ ಈ ಗ್ರಂಥವನ್ನು ನಿಧಾನವಾಗಿ ಓದಬೇಕು.

ಜೆ. ಎಂ. ಲೋಬೋ ಪ್ರಭು.

# ೧. ನನ್ನ ಜನ್ಮಸ್ಥಳ

ನಾನು ಹುಟ್ಟಿದ್ದು ಕಿಯು-ಕಿಯಾಂಗಿನಲ್ಲಿ. ಅದು ಕಿಯಾಂಗ್ಸಿ ಪ್ರಾಂತದಲ್ಲಿ ಒಂದು ಚಿಕ್ಕ ಜಿಲ್ಲಾ ಸ್ಥಳ. ಹ್ಯಾನ್ ಮನೆತನದ ಕಾಲದಿಂದ ಅನೇಕ ಐತಿಹಾಸಿಕ ಘಟನೆಗಳ ರಂಗಸ್ಥಳ ಇದು. ಸುಪ್ರಸಿದ್ಧ ಸೇನಾನಾಯಕ ಚಾ ಯೂಗೆ ಈ ಪಟ್ಟಣ ರಾಜಧಾನಿಯಾಗಿತ್ತು. ಅವನ ಹೆಂಡತಿ ಹಿಯೋ ಷಿಯೋಳ ಹೆಸರಿನಲ್ಲಿ ಒಂದು ಬೀದಿ ಇದೆ. ಚೀನಾದ ಎಲ್ಲಾ ರಾಜವಂಶಗಳಿಗೂ ಕಿಯು-ಕಿಯಾಂಗಿಗೂ ಒಂದಿಲ್ಲೊಂದು ರೀತಿ ಸಂಬಂಧ ಇದೆ. ಕಾರಣ, ಅದು ಇರುವ ಸ್ಥಳ. ಪಶ್ಚಿಮದಲ್ಲಿ ಯಾಂಗ್ಟಿಸಿ ಹೊಳೆ, ದಕ್ಷಿಣಕ್ಕೆ ಸುಪ್ರಸಿದ್ಧ 'ಲೂ' ಪರ್ವತ. ಹಾಗೆಯೇ ಆಗ್ನೇಯದಲ್ಲಿ ಪೊಯಾಂಗ ಮಹಾ ಸರೋವರ. ಚೀನಾ ದೇಶದ ಐದು ಮಹಾ ಸಾಗರಗಳಲ್ಲಿ ಇದೂ ಒಂದು. ಮಿಂಗ್ ಮನೆತನದ ಮೂಲ ಪುರುಷ ಈ ಊರಿನ ಸುತ್ತ ಅನೇಕ ಘನ ಘೋರ ಸಂಗ್ರಾಮಗಳನ್ನು ಮಾಡಿದಾನೆ. ಅದರ ಕುರುಹುಗಳಿನ್ನೂ ಲೂ ಪರ್ವತದಲ್ಲಿ ಕಾಣಬಹುದು. ಆದರೆ ನನಗೆ ಅದರ ಬಗ್ಗೆ ಅಷ್ಟಾಗಿ ಆಸಕ್ತಿ ಇಲ್ಲ.

ಸಾವಿರಾರು ವರ್ಷಗಳಿಂದ ಕವಿಗಳು ಇವನ್ನು ವರ್ಣಿಸಿದಾರೆ, ಕಲಾವಿದರು ಚಿತ್ರಿಸಿದಾರೆ. ನಾಲ್ಕನೇ ಶತಮಾನದಲ್ಲಿ 'ಕೂ ಕೈ-ಚೀ' ಈ ಪರ್ವತದ ಸೌಂದರ್ಯವನ್ನು ಚಿತ್ರಿಸಿದಾನೆ. ಆದರೆ ಅವನು ಚಿತ್ರಿಸಿದ ಚಿತ್ರಗಳಾವೂ ನಮಗೆ ದೊರೆತಿಲ್ಲ. ಕ್ರಿ ಶ. ೯೦೭-೯೬೦ ,ಕಾಲದಲ್ಲಿದ್ದ "ಪಂಚವಂಶಜ"ರ ಚಿತ್ರಕಾರ ಚಿಂಗ್ ಹೂ ಬಿಡಿಸಿದ ಅಮೌಲ್ಯವಾದ "ಲೂ ಪರ್ವತದಲ್ಲಿ ಹಿಮ" ಎಂಬ ಒಂದೇ ಒಂದು ಚಿತ್ರ ಈಗಲೂ ಇದೆ.

೧೯೩೫–೩೬ ರಲ್ಲಿ ಬರ್ಲಿಂಗ್‌ಟನ್‌ನಲ್ಲಿ ನಡೆದ ಚೀನಾ ಕಲೆಯ ಅಂತರ-ರಾಷ್ಟ್ರೀಯ ಪ್ರದರ್ಶನದಲ್ಲಿ ಮಿಂಗ್ ಮನೆತನದ ಶೆಂಗ್-ಚೌ ಹಾಗೂ ಚಿಯಾಂಗ್ ಮನೆತನದ ಕೌ. ಚಿ. ವಾಯ್ ಚಿತ್ರಿಸಿದ ಲೂ ಪರ್ವತದ ಎರಡು ಚಿತ್ರ ಇದ್ದವು. ಇದರಿಂದ ನನ್ನ ಜನ್ಮಸ್ಥಳದ ಪ್ರಾಚೀನ ಕಲಾ ವೈಭವದ ಪರಂಪರೆ ಓದುಗರಿಗೆ ಆದೀತೆಂದು ಭಾವಿಸಿದೇನೆ.

ಯಾಂಗ್ಟ್ಸಿ ನದಿಯ ದಕ್ಷಿಣ ದಂಡೆಯ ಮೇಲಿದ್ದ ಊರಿನಲ್ಲಿ ನಾನು ಜನ್ಮ ತಾಳಿದೆ. ಹದಿನಾಲ್ಕು ವರ್ಷದವನಾಗುವವರೆಗೂ ನನಗೆ ಲೂ ಪರ್ವತವನ್ನು ಯಾರೂ ತೋರಿಸಲಿಲ್ಲ. ೧೯೧೨ರ ಕ್ರಾಂತಿಯ ಕಾಲದಲ್ಲಿ ಲೂ ಪರ್ವತದ ಅಡಿಯಲ್ಲಿಯೇ ವಾಸಿಸಿದ್ದೆವು. ಈ ಕ್ರಾಂತಿಯ ನಂತರವೇ ಚೀನಾ ರಾಜ್ಯ ಪ್ರಜಾಸತ್ತಾತ್ಮಕವಾಯಿತು. ಮನೆಗೆ ತೀರ ಹತ್ತಿರದಲ್ಲಿದ್ದ ನದಿಯ ದಂಡೆಗುಂಟ ನಾನು ಎಷ್ಟೋ ಸಲ ತಿರುಗಾಡಿದೇನೆ. ದಂಡೆಯ ಮೇಲೆ ನಿಂತುಕೊಂಡೇ ನದಿಯಲ್ಲಿ ಸಣ್ಣ ದೊಡ್ಡ ಮೀನುಗಳನ್ನು ನೋಡ ಬಹುದಾಗಿತ್ತು. ಬಿರುಗಾಳಿ ಬೀಸಿದಾಗ ಅಲೆ ಅಲೆಯಾಗಿ ತೇಲುತ್ತಿದ್ದ ಈ ಮೀನುಗಳ ಆ ಸುಂದರ ದೃಶ್ಯವನ್ನು ಮತ್ತೆಲ್ಲಿಯೂ ನಾನು ಕಂಡಿಲ್ಲ. ಯಾಂಗ್ಟ್ಸಿ ನದಿಯ ನೀರಿನ ಬಣ್ಣ ಹಳದಿ. ಹಳದಿ ಮಣ್ಣಿನ ಸಣ್ಣ ಕಣಗಳೇ ನೀರು ಹಾಗಿರಲು ಕಾರಣ.

ಈ ಊರಿನಿಂದ ಇಪ್ಪತ್ತು ಮೈಲಿ ದೂರದಲ್ಲಿದೆ ಪೊಯಾಂಗ್ ಸರೋವರ. ನದಿ–ಸರೋವರಗಳ ಸಂಗಮ ಪ್ರದೇಶ ತುಂಬಾ ಆಕರ್ಷಣೀಯವಾಗಿದೆ. ಚೂರಿಯಿಂದ ಕೊರೆದಂತೆ ಎರಡೂ ಒಂದರ ಬದಿಯಲ್ಲಿ ಒಂದು ಹರಿದು ಬಂದಿವೆ. ಸರೋವರದ ನೀರು ದಟ್ಟ ನೀಲಿ. ನದಿಯ ನೀರು ಹಳದಿ. ಊರಿನ ಸುತ್ತ ಒಂದು ಗೋಡೆ. ಗೋಡೆಯ ದಕ್ಷಿಣದ ಬಾಗಿಲಲ್ಲಿ ಚಿಕ್ಕದೊಂದು ಸುಂದರ ಸರೋವರ ಇದೆ. ಇದರ ಹೆಸರು ಕಾಂಗ್‌ಟಾಂಗ್. ಅದು ಎರಡು ಭಾಗವಾಗಿ, ಒಂದು ಕಲ್ಲಿನ ಸೇತುವೆ ಎರಡನ್ನೂ ಕೂಡಿಸಿದೆ. ಈ ಸರೋವರದಲ್ಲಿ ಅನೇಕ ರಸನಿಮಿಷಗಳನ್ನು ನಾನು ಕಳೆದುದರ ವಿವರವನ್ನು ಮತ್ತೆ ಹೇಳುತ್ತೇನೆ.

ಯಾವ ವಿಶಿಷ್ಟ ವಸ್ತುಗಳೂ ಈ ಊರಲ್ಲಿ ತಯಾರಾಗುವದಿಲ್ಲ. ಆದರೆ ಹೊರಗಿನಿಂದ ಎಲ್ಲ ಪ್ರಕಾರದ ಸರಕುಗಳೂ ಬರುತ್ತವೆ. ಚೀನಾದ

ಪೋರ್ಸಿಲ್ ಪಾತ್ರೆ, ಹತ್ತಿ, ಚಹಾ, ಚೀನಾ ಹುಲ್ಲಿನಿಂದ ಮಾಡಿದ ಬಟ್ಟೆ, ಇತ್ಯಾದಿ. ಯಾವ ಪರದೇಶದವನೇ ಇರಲಿ, ಇಲ್ಲಿನ ಚೀನಾ ಪಿಂಗಾಣಿ ಪಾತ್ರೆಗಳನ್ನು ಮರೆಯಲಾರ. ಊರು ತುಂಬಾ ಚಿಕ್ಕದು. ಒಂದೇ ಒಂದು ಹೆದ್ದಾರಿ. ಆ ಹೆದ್ದಾರಿಯ ಒಂದು ಭಾಗದ ಅಂಗಡಿಗಳಲ್ಲೆಲ್ಲ ಪಿಂಗಾಣಿ ಪಾತ್ರೆಗಳೇ. ಇದಕ್ಕೆ ಕಾರಣ, ಹ್ಯಾಬ್ ಕಾಲದಿಂದಲೂ ಪಿಂಗಾಣಿ ಪಾತ್ರೆಗಳನ್ನು ಮಾಡುತ್ತ ಬಂದ ಚಿಂಗ-ತೆ-ಚೆಬ್ ಇಲ್ಲಿಗೆ ಕೇವಲ ಹದಿನೈದು ಮೈಲಿ. ಅಲ್ಲಿ ತಯಾರಾಗುವ ಪಾತ್ರೆಗಳೆಲ್ಲ ಈ ಊರಿನ ಮಾರ್ಗದಿಂದಲೇ ಚೀನಾ ದೇಶದ ಉಳಿದ ಭಾಗಕ್ಕೂ ಹೊರ ಜಗತ್ತಿಗೂ ಹೋಗಬೇಕು.

ಮೆಟ್ರಿಕ್ ಪಾಸಾಗಿ ಕಾಲೇಜಿನಲ್ಲಿ ಕಲಿಯಲು ನ್ಯಾಕಿಂಗ್ ಪಟ್ಟಣಕ್ಕೆ ನಾನು ಹೋಗುವವರೆಗೂ ಕಿಯು–ಕಿಯಾಂಗಿನಷ್ಟು ಸುಂದರವಾದ ಬೇರೆ ಊರು ಇರಬಹುದೆಂಬ ಕಲ್ಪನೆ ನನಗಿರಲಿಲ್ಲ. "ಹೆತ್ತವರಿಗೆ ಹೆಗ್ಗಣ ಮುದ್ದು" ಎಂಬಂತೆ ಜನ್ಮಸ್ಥಳದ ಅಭಿಮಾನವಿಲ್ಲದವರೇ ಇಲ್ಲ ಎಂದು ನನ್ನ ಅಭಿಪ್ರಾಯ.

೧೯೧೨ರ ಕ್ರಾಂತಿಯ ಮೊದಲು ಊರು ಹೇಗೆ ಇತ್ತೋ ನನಗೆ ನೆನಪಿಲ್ಲ. ಅಷ್ಟೇನೂ ಬದಲಾವಣೆಯಾಗಿಲ್ಲವೆಂದು ಹಿರಿಯರು ಹೇಳಿದ್ದನ್ನು ಕೇಳಿದೇನೆ. ನದಿಯ ದಂಡೆಗುಂಟ ಹಲಕೆಲವು ಪಾಶ್ಚಿಮಾತ್ಯ ಮಾದರಿಯ ಬಂಗಲೆ ಮಾತ್ರ ಆಗಿವೆ. ಪಶ್ಚಿಮದವರು ಈ ಬಂದರನ್ನು ಉಪಯೋಗಿಸಲು ಕ್ರಾಂತಿಯ ಅನಂತರ ಆದ ಕರಾರಿನ ಪರಿಣಾಮ ಈ ಬದಲಾವಣೆ. ಹಳೇ ಪಟ್ಟಣದ ಸುತ್ತ ಒಂದು ಗೋಡೆ ಇದೆ. ಈ ಗೋಡೆಯೇರಿ ಸುತ್ತಿಕೊಂಡು ಕೆಳಗೆ ಕಾಣುವ ಮನೆಗಳನ್ನೂ ಒಳಂಗಳ, ಹಿತ್ತಿಲುಗಳನ್ನೂ ಹಾಗೆಯೇ ಅತಿ ದೂರ ವಿಸ್ತಾರವಾಗಿ ಹರಿವ ಹೊಳೆಯನ್ನೂ ಎದುರಿಗೆ ಕಾಣುವ ಬೆಟ್ಟದ ಸಾಲುಗಳನ್ನೂ ನೋಡಿ ನೋಡಿ ನಾನು ನಲಿದಾಡಿದೇನೆ. ಈ ಗೋಡೆಯನ್ನು ನಿರುಪಯೋಗಿಯೆಂದು ೧೯೨೭ರಲ್ಲಿ ನೆಲಸಮ ಮಾಡಿದರು. ಆದರೆ ಆ ಗೋಡೆಯ ಮೇಲೆ ಮತ್ತೆ ಮತ್ತೆ ನಲಿದಾಡುತ್ತಿದ್ದ ಕನಸನ್ನು ನಾನಿನ್ನೂ ಆಗಾಗ ಕಾಣುತ್ತಿರುತ್ತೇನೆ.

———

# ೨. ಚಿಯಾಂಗ್ ಮನೆತನ

ನನ್ನ ಹನ್ನೆರಡನೆಯ ಹುಟ್ಟಿದ ಹಬ್ಬ. ಹಬ್ಬದ ಊಟ-ಉತ್ಸವ ಮುಗಿದಿವೆ. ಇದರ ವಿಷಯವನ್ನು ವಿಸ್ತಾರವಾಗಿ ಮತ್ತೆ ಬರೆಯುತ್ತೇನೆ. ಸಾಯಂಕಾಲ ತಂದೆಯವರು ತಮ್ಮ ಕೋಣೆಗೆ ನನ್ನನ್ನು ಕರೆಸಿದರು. ನಮ್ಮ ವಂಶಾವಳಿಯ ಪುಸ್ತಕವನ್ನು ನನಗೆ ತೋರಿಸಬಹುದೇ ಎಂದು ಕೇಳಿಬರಲು ನನ್ನನ್ನು ಅಜ್ಜನಕಡೆಗೆ ಕಳಿಸಿಕೊಟ್ಟರು. ಇದೊಂದು ಚೀನಾ ದೇಶದ ರೂಢಿ: ಮಕ್ಕಳಿಗೆ ಇಂತಿಷ್ಟು ವರ್ಷವಾಗುತ್ತಲೆ ಅವರಿಗೆ ವಂಶಾವಳಿಯ ಪುಸ್ತಕ ತೋರಿಸುವುದು, ಅದರ ವಿಷಯ ಹೇಳುವುದು. ಈ ವಯಸ್ಸು ಪ್ರತಿ ಮನೆತನದಲ್ಲೂ ಬೇರೆ ಬೇರೆ. ಅಂತೂ ಹತ್ತು ವರ್ಷದ ಒಳಗಿನವರಿಗೆ ತೋರಿಸುವ ರೂಢಿ ಇಲ್ಲ. ನಮ್ಮ ಅಜ್ಜ ಅನುಮತಿ ಯಿತ್ತು. ನನ್ನ ಅಜ್ಜಿಗೂ ನೋಡಬೇಕೆನಿಸಿತು. ಅದರಂತೆ ಉಳಿದವರಿಗೂ ನೋಡಬೇಕೆನಿಸಿದರೆ ಅನುಕೂಲವಾಗಲಿ ಎಂದು ನನ್ನ ತಂದೆ ನಮ್ಮ ಮನೆಯ ಮಧ್ಯದ ನಡುಮನೆಯಲ್ಲಿ ವಂಶಾವಳಿಯ ಪುಸ್ತಕವನ್ನು ತೋರಿಸಲು ನಿರ್ಧರಿಸಿದರು. ನಮ್ಮ ಪೂರ್ವಜರ ಪವಿತ್ರ ದೇವಾಲಯ ಇರುವುದೂ ಅಲ್ಲಿಯೇ. ತೀರ ಸಣ್ಣವರನ್ನು ಮಾತ್ರ ಬಿಟ್ಟು ಉಳಿದವ ರೆಲ್ಲರೂ ಅಲ್ಲಿಗೆ ಬಂದರು. ಏಕೆಂದರೆ, ನನ್ನ ತಂದೆ ಬಹಳ ಸವಿಯಾಗಿ ಕತೆ ಹೇಳುತ್ತಿದ್ದರು. ಕತೆ ಹೇಳುವ ಕಲೆಯಲ್ಲಿ ಅವರು ಬಲ್ಲಿದರು. ಸ್ವತಃ ಚಿತ್ರಕಾರರಾದ ಅವರು ಯಾರೊಂದಿಗೂ ಹೆಚ್ಚಾಗಿ ಬೆರೆಯದೆ ಶಾಂತಜೀವನವನ್ನು ಸಾಗಿಸುತ್ತಿದ್ದರು. ಚೀನಾ ದೇಶದಲ್ಲಿ ಚಿತ್ರಕಾರ, ಕಲಾವಿದ, ಓದಿಕೊಂಡವ ಎಂದರೆ ತುಂಬಾ ಗೌರವ. ಅವರು ಮನೆತನದ

ಉಳಿದವರಂತೆ ನಿತ್ಯದ ಕೆಲಸದಲ್ಲಿ ಭಾಗವಹಿಸಬೇಕಾದುದಿಲ್ಲ. ಹೀಗಾಗಿ ನನ್ನ ತಂದೆ ಉಳಿದವರೊಂದಿಗೆ ಕೂಡಿ ನಲಿದಾಡಿದಾಗ ಅದೊಂದು ಸಂಭ್ರಮ !

ಅದು ಎಂದೂ ಮರೆಯಲಾಗದ ಮುಚ್ಚಂಜೆ. ನಡುಮನೆಯ ಎಲ್ಲ ದೀಪಗಳನ್ನೂ ಹಚ್ಚಿದರು. ತಂದೆಯವರು ಉಡುಪನ್ನು ಬದಲಿಸಿ ವಂಶಜರ ದೇವಾಲಯದ ಮುಂದೆ ಧೂಪಹಾಕಿ ನಿಚ್ಚಣಿಕೆಯನ್ನೇರಿ, ವಂಶಾವಳಿಯ ಪುಸ್ತಕಗಳ ಮರದಪೆಟ್ಟಿಗೆಯನ್ನು ಭಕ್ತಿಭಾವದಿಂದಲೂ ತುಂಬ ಎಚ್ಚರದಿಂದ ಭಕ್ತಿಯಿಂದಲೂ ಕೆಳಗೆ ತಂದರು. ಅದರಲ್ಲಿ ಮೂವತ್ತು ನಾಲ್ವತ್ತು ಪುಸ್ತಕ. ಅದಕ್ಕೆಂದೇ ಆ ನಡುಮನೆಯ ಮಧ್ಯದಲ್ಲಿರಿಸಿದ ಮರದ ಮೇಜಿನ ಮೇಲೆ ಆ ಪೆಟ್ಟಿಗೆಯನ್ನಿಟ್ಟರು. ಪ್ರತಿಸಲದಂತೆ ಅಜ್ಜಿ ತುಂಬಾ ಮರ್ಯಾದೆಯಿಂದ ಮಂದಿರದ ಕೆಳಗೆ ಒಂದು ಪರದೆಯ ಮುಂದೆ ಕುಳಿತುಕೊಂಡಿದ್ದರು. ಅಜ್ಜ ಬಂದಿರಲಿಲ್ಲ. ತುಂಬ ವಯಸ್ಸು, ದಣಿದಿದ್ದರು. ಮನೆಯ ಉಳಿದ ಜನ ಇಪ್ಪತ್ತು ಇರಬಹುದು. ಬಂದು ಗೋಡೆಯ ಸಾಲಿಗೆ ಕುಳಿತರು. ನಮ್ಮ ತಂದೆ ನಡುವೆ ಮೇಜಿನ ಬಳಿ ಕುಳಿತಿದ್ದರು. ಅವರ ಬಲಕ್ಕೆ ನಾನು ನಿಂತಿದ್ದೆ. ಎಡಗಡೆಗೆ ನನ್ನ ಕಕ್ಕನ ಮಕ್ಕಳಿಬ್ಬರು. ಒಬ್ಬಳು ನನ್ನ ಅಕ್ಕ. ನನಗಿಂತ ಎರಡು ತಿಂಗಳು ದೊಡ್ಡವಳು. ಇನ್ನೊಬ್ಬ ನನ್ನ ತಮ್ಮ; ಎಂಟು ತಿಂಗಳು ಸಣ್ಣವ. ನಮಗಾಗ ಚೀನಾ ಭಾಷೆಯ ಹಲ ಕೆಲವು ಅಕ್ಷರ-ಶಬ್ದ ಓದಲು ಬರುತ್ತಿತ್ತು. ವಂಶಾವಳಿಯ ಗ್ರಂಥಗಳನ್ನು ತೋರಿಸಿ ನಮಗೆ ಪೂರ್ವೇತಿಹಾಸದ ಪರಿಚಯ ಮಾಡಿಕೊಡಲು ತಕ್ಕ ಸಮಯ.

ನಾವು ಹಬ್ಬದ ಉಡುಪು ತೊಟ್ಟಿದ್ದೆವು. ನಾನು ತೋಳಿಲ್ಲದ ಸ್ಯಾಟಿನ್ ಬಟ್ಟೆಯ ನೀಲಿ ಬಣ್ಣದ ಜಾಕೆಟ್ ಹಾಕಿಕೊಂಡಿದ್ದೆ. ಇದನ್ನು ನಮ್ಮ ಭಾಷೆಯಲ್ಲಿ ಪೇಷೀನ್ ಎನ್ನುವರು. ದೊಡ್ಡ ಕೆಂಪು ನಿಲುವಂಗಿಯ ಮೇಲೆ ಇದನ್ನು ತೊಟ್ಟಿದ್ದೆ. ತೋಳಿಲ್ಲದ ಜಾಕೆಟ್ಟು ಅಷ್ಟು ಸಂಪನ್ನ ವಲ್ಲವೆಂದು ನನಗಾಗ ತಿಳಿದಿರಲಿಲ್ಲ. ತೋಳಿರುವ ಕರಿಯ ಬಟ್ಟೆಯ 'ಮಾಕ್ವಾ' ಜಾಕೆಟ್ಟು ಆ ಸಮಯಕ್ಕೆ ತಕ್ಕ ಗೌರವ. ಆದರೆ ನನಗೋ ನೀಲಿಯ ಬಣ್ಣದ ಮೇಲೆ ತುಂಬ ಪ್ರೀತಿ. ಕುಳಿತುಕೊಳ್ಳಲು ನಮಗೆ ಆಸನಗಳಿದ್ದುವಾದರೂ ನಾವು ನಿಂತುಕೊಂಡೇ ನೋಡಲು ಬಯಸಿದೆವು.

ತಂದೆ ಮೊದಲಿನ ಪುಟಗಳನ್ನು ಬೇಗ ಬೇಗ ತಿರುವಿಹಾಕಿದರು. ಹೆಸರಾದವರಿಂದ ಆ ಪುಸ್ತಕದ ಮುದ್ರಣದ ಕಾಲಕ್ಕೆ ಬರೆಸಿದ ಮುನ್ನುಡಿ ಅದು. ಅನಂತರ ಗೊತ್ತಾಯಿತು. ನಮ್ಮ ವಂಶದ ಮೂಲಪುರುಷನ ಹೆಸರು ಬಂದೊಡನೆ ತಂದೆ ತುಂಬಾ ಗಂಭೀರರಾದರು. ತಮ್ಮ ಸ್ವರವನ್ನು ಬದಲಿಸಿದರು. ತುಂಬು ಗೌರವದಿಂದ ಆ ಹೆಸರನ್ನು ಉಚ್ಚರಿಸಿದರು. "ನಮ್ಮ ವಂಶಾವಳಿಯ ಪ್ರಕಾರ ಇವರೇ ನಮ್ಮ ಮೂಲಪುರುಷರು." ಮೂಲಪುರುಷನ ಹೆಸರು 'ಷೂ' ಎಂಬುದನ್ನು ತಂದೆ ಹೇಳಲಿಲ್ಲ. ಕಿರಿಯರು ಹಿರಿಯರನ್ನು ಹೆಸರುಗೊಂಡು ಕರೆಯುವ ವಾಡಿಕೆ ಚೀನಾದಲ್ಲಿಲ್ಲ. ತಂದೆ ಮೂಲಪುರುಷನನ್ನು "ಯುವಾ಼ ಚಿಂಗ್ ಕುಂಗ್" ಎಂದು ಕರೆದರು. ಇದು ನಮ್ಮ ಮೂಲಪುರುಷನ ಇನ್ನೊಂದು ಹೆಸರು. ಕುಂಗ್, ಹಿರಿಯ ರನ್ನು ಕುರಿತು ಉಪಯೋಗಿಸುವ ಗೌರವ ಪದ. ನಮ್ಮ ಮೂಲ ಪುರುಷನ ನಿಜವಾದ ಹೆಸರು "ಚಿಯಾಂಗ್ ಷೂ". ಆದರೆ ನಾವಾರೂ ಈ ಹೆಸರಿನಿಂದ ಕರೆಯುವಂತಿರಲಿಲ್ಲ. ಓದುಗರಿಗೆ ಸರಿಯಾಗಿ ತಿಳಿಯಲೆಂದು ಹೀಗೆ ಹೇಳಿದೇನೆ.

"ಯುವಾ಼ ಚಿನ್ಗ್ ಕುಂಗ್" ತಂದೆಯವರು ಕಥೆ ಮುಂದುವರಿಸುತ್ತ "ಕ್ರಿ. ಪೂ. ೧ನೇ ಶತಮಾನದ ಕೊನೆಯಲ್ಲಿ ಬಾಳಿದರು. ಅವರನ್ನು ಆಗಿನ ಸಾರ್ವಭೌಮ ಈಗಿನದಕ್ಕಿಂತಲೂ ದೊಡ್ಡದಾದ "ಯ಼್ ಚೌ" ಪ್ರಾಂತದ ಸರ್ವಾಧಿಕಾರಿಯನ್ನಾಗಿ ನೇಮಿಸಿದ್ದ" ಎಂದು ಹೇಳಿದರು. ಈ ಸಾರ್ವ ಭೌಮ ದುರ್ದೈವದಿಂದ ಬಹುಕಾಲ ರಾಜ್ಯವಾಳಲಿಲ್ಲ. ತರುವಾಯ ಪಟ್ಟಕ್ಕೆ ಬರುವವರಲ್ಲಿ ತುಂಬಾ ತಿಕ್ಕಾಟ. ಕೊನೆಗೆ ಬಲಾಢ್ಯ ಮಂತ್ರಿ "ವಾಂಗ್ ಮಾಂಗ್" ಯುವರಾಜನ ಪ್ರತಿನಿಧಿಯಾಗಿ ಅಧಿಕಾರ ವಹಿಸಿದ. "ಯುವಾ಼ ಚಿಂಗ್ ಕುಂಗ್" ಈ ವಾಂಗ ಮಾಂಗನ ಅಧಿಕಾರ-ಅಪಹಾರ ವನ್ನು ಮನ್ನಿಸಲಿಲ್ಲ. ದೇಹಾಲಸ್ಯದ ಮೂಲಕ ಕೆಲಸ ಬಿಟ್ಟುಕೊಟ್ಟು ಮೂಲ ಸ್ಥಳವಾದ "ಟೂಲಿಂಗ್"ಗೆ ಹೋದರು. ಅಲ್ಲಿ ಯುವಾ಼ ಚಿಂಗ್ ಕುಂಗ್ ಮನೆ ಬಿಟ್ಟು ಹೊರಗೆ ಬರಲಿಲ್ಲ. ಮನೆಯಮುಂದೆ ಒಂದು ಬಿದಿರು ತೋಪು. ಅದರಲ್ಲಿ ಮೂರು ಕಾಲು ದಾರಿ. ಆತನಿಗೆ ಇಬ್ಬರು ಮಿತ್ರರು- ಚಿಯೂ ಚುಂಗ್, ಯಾಂಗ್‌ಟುಂಗ್. ಅವರ ಹೊರತು ಯಾರನ್ನೂ

ಕಾಣುತ್ತಿರಲಿಲ್ಲ. ಮಿತ್ರರನ್ನು ಕಾಣಲು ತಾನು ಹೋಗುವಾಗ ಒಂದು ಕಾಲುದಾರಿ. ಉಳಿದೆರಡು ಇಬ್ಬರು ಮಿತ್ರರು ತನ್ನನ್ನು ಕಾಣಲು ಬರುವುದಕ್ಕೆ.

ಅರಣ್ಯವಾಸಿ ಋಷಿಗಳಂತಿದ್ದ ಈ ಮೂರು ಜನರ ಚಲನವಲನ ಒಂದು ಕವಿಗೋಷ್ಠಿಯಂತಿತ್ತು. "ಮೂರು ಕಾಲುದಾರಿ ಮನೆ" ಎಂದು ಸಾಹಿತ್ಯದಲ್ಲಿ ತುಂಬಾ ಪ್ರಸಿದ್ಧಿ ಪಡೆಯಿತು. ಯುವಾನ್ ಚಿಂಗ್ ಕುಂಗ್ ಸತ್ಯವಂತ, ಧರ್ಮಿಷ್ಠ. ರಾಜಧಾನಿಯಲ್ಲಿ ಸಭೆ ಸೇರಿದಾಗೆಲ್ಲ ಇವರ ಹೆಸರನ್ನು ಹೇಳುತ್ತಿದ್ದರು. ಇದರಿಂದ "ವಾಂಗ ಮಾಂಗ್" ತುಂಬಾ ಹೆದರುತ್ತಿದ್ದ. ಕುತ್ಸಿತನಾದ ಅವನು ಯುವಾನ್ ಚಿಂಗಕುಂಗರಿಗೆ ಕೇಡು ಮಾಡಲು ಪ್ರಯತ್ನಿಸಿದ. ವಾಂಗಮಾಂಗನೊಡನೆ ಸ್ಪರ್ಧೆ ಬಯಸದೆ ಯುವಾನ್ ಚಿಂಗ್ ಕುಂಗ್, ತಾನೂ ತನ್ನ ವಂಶಜರೂ ಒಕ್ಕಲುತನ ಮಾಡಿಕೊಂಡಿರಬೇಕೆಂದು ನಿರ್ಧರಿಸಿದ. ಅವರ ಸಾಹಿತ್ಯವಾವುದೂ ಪುಸ್ತಕ ರೂಪದಲ್ಲಿ ಸಿಕ್ಕುವದಿಲ್ಲವಾದರೂ ಅವರು ನಮ್ಮ ಮನೆತನಕ್ಕೆ ಹಾಕಿದ ನಿಯಮಗಳೆಲ್ಲ ದೊಡ್ಡ ಅಕ್ಷರಗಳಲ್ಲಿ ನಮ್ಮ ವಂಶಾವಳಿಯ ಪುಸ್ತಕ ದಲ್ಲಿ ಅಚ್ಚಾಗಿವೆ. ನಾಲ್ಕೇ ನಾಲ್ಕು ಶಬ್ದ. "ಪರೋಪಕಾರ", "ಸದ್ವರ್ತನ", "ಪ್ರಾಮಾಣಿಕತನ", "ತಾಳ್ಮೆ". ಈ ನಾಲ್ಕು ಗುಣಗಳನ್ನು ನಮ್ಮ ವಂಶದ ಪ್ರತಿಯೊಬ್ಬನೂ ಮೈಗೂಡಿಸಿಕೊಳ್ಳಬೇಕೆಂದು ಅವರು ವಿಧಿಸಿದ್ದರು. ಅಂದಿನಿಂದ ನಮಗೆ "ಮೂರು ಕಾಲುದಾರಿ ಮನೆತನ" ಎಂಬ ಹೆಸರು ಬಂದಿದೆ.

ಇಷ್ಟು ಹೇಳಿ ತಂದೆಯವರು ಕಥೆ ಹೇಳುವುದನ್ನು ತುಸು ನಿಲ್ಲಿಸಿದರು. ಕೆಲಸದವನೊಬ್ಬ ಒಂದು ಬಟ್ಟಲು ಚಹಾ ತಂದು ಕೊಟ್ಟ. ನಮಗೂ ತಿಂಡಿ ಚಹಾ ದೊರೆತವು. ನಾನೂ ಕಕ್ಕನ ಮಕ್ಕಳೂ 'ಕೇಕ್' ರೊಟ್ಟಿ, ಚಹಾ ತೆಗೆದುಕೊಂಡೆವು. ಆವರೆಗೂ ತಂದೆಯವರು ಹೇಳಿದ್ದನ್ನೆಲ್ಲ ಮೆಲಕಾಡಿಸುತ್ತಿದ್ದೆ. ಯುವಾನ್-ಚಿಂಗ್ ಕುಂಗ್ ಕಾಲಕ್ಕಿಂತ ಪೂರ್ವದ ನಮ್ಮ ವಂಶಾವಳಿ ಸಿಕ್ಕುವದಿಲ್ಲವೆಂದು ತಂದೆ ಹೇಳಿದರು. ಆದರೆ ಚೀನಾ ದೇಶದ ಪೂರ್ವೇತಿಹಾಸದ ಪ್ರಕಾರ ಸಾರ್ವಭೌಮ 'ವು ವಾಂಗ'ನ ತಮ್ಮ "ಚೌ" ಚಿಯಾಂಗ್‌ಪ್ರದೇಶದ ಮಾಂಡಲಿಕನಾಗಿದ್ದ (೧೧೩೪-೧೧೨೦

ಕ್ರಿ. ಪೂ.). ಈ ಮಾಂಡಲಿಕನ ಮಕ್ಕಳು ತಮ್ಮ ರಾಜ್ಯದ ಹೆಸರನ್ನೇ ಮನೆಯ ಹೆಸರಾಗಿ ಇರಿಸಿಕೊಂಡರು. ಕ್ರಮೇಣ ದೇಶದ ತುಂಬಾ ಈ ಮನೆತನ ಹಬ್ಬಿತು. ಅನೇಕ ಚಿಯಾಂಗ್ ಮನೆತನಗಳು ಈಗಲೂ ಇವೆ.

ವಂಶಾವಳಿಯ ಪುಸ್ತಕದ ಪ್ರಕಾರ "ಯುವಾ-ಚಿಂಗ್ ಕುಂಗ್"ರಿಗೆ ಮೂವರು ಗಂಡುಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಗಂಡುಮಕ್ಕಳೆಲ್ಲ ಅತ್ಯುತ್ತಮ ಬೇಸಾಯಗಾರರು. ತಮ್ಮ ವಂಶವನ್ನು ಅಭಿವೃದ್ಧಿಗೊಳಿಸಿದರು. ಇಬ್ಬರು ಹೆಣ್ಣುಮಕ್ಕಳೂ ಕೂಡ ಬೇಸಾಯಗಾರರನ್ನೇ ಮದುವೆಯಾದರು. ನಮ್ಮ ಮನೆತನದ ಆಚಾರದಂತೆ ತಮ್ಮ ಮಕ್ಕಳನ್ನೂ ಬೇಸಾಯಗಾರರಾಗಿ ಬೆಳೆಸಿದರು.

ಪುಟಗಳನ್ನು ಮಗುಚಿಹಾಕುತ್ತ ತಂದೆ ಅಲ್ಲಲ್ಲಿ ಒಬ್ಬೊಬ್ಬ ಪೂರ್ವಜನ ವಿಷಯವಾಗಿ ನಾಲ್ಕು ಮಾತು ಹೇಳುತ್ತಿದ್ದರು. ಕೊನೆಗೊಂದು ಪುಟ ತೆಗೆದು ದೊಡ್ಡ ನಿಟ್ಟುಸಿರು ಬಿಟ್ಟರು.

ಆಗ ಕ್ರಿ. ಶ. ೯೬೦ರ೧೨೭೬ ರ ವರೆಗೂ ಕತೆ ಬಂದಿತ್ತು. ಸುಂಗ್ ಮನೆತನದ ಕಾಲ. ಅದೇ ಕಾಲಕ್ಕೆ ಚೀನಾ ದೇಶದ ಉತ್ತರ ದಿಕ್ಕಿನಿಂದ ಮಂಗೋಲರು ದಾಳಿ ಬಂದಿದ್ದರು. ಆ ಪ್ರದೇಶದಲ್ಲಿ ಅದೇ ಸಮಯಕ್ಕೆ ಪ್ಲೇಗು-ಕಾಲರಾ ಇತ್ಯಾದಿ ರೋಗಗಳು ಗಂಟುಬಿದ್ದವು. ನಮ್ಮ ವಂಶಜರು ಆಗ ಭೂಮಿಯನ್ನು ಮಾರಿ ಚೀನಾದ ಮಧ್ಯಪ್ರದೇಶಕ್ಕೆ ಹೋಗಬೇಕೆಂದು ಗೊತ್ತು ಮಾಡಿದರು. ಕಿಯು-ಕಿಯಾಂಗಕ್ಕೆ ಬಂದು ನೆಲೆಸಿದ ಹಿನ್ನೆಲೆಯೇ ಇದು. ಯಾಂಗ್ಟಿಸೀ ನದಿಯ ಉತ್ತರದಲ್ಲಿ ಭೂಮಿ ಸಾಗು ಮಾಡಿಕೊಂಡು ನಮ್ಮ ಪೂರ್ವಜರು ಅನೇಕ ವರ್ಷ ಕಳೆದರು. ನಮ್ಮ ಮನೆತನದ ಜನರ ಸಂಖ್ಯೆ ಒಂದು ಸಾವಿರಕ್ಕೆ ಮುಟ್ಟಿತು. ಚಿಕ್ಕಚಿಕ್ಕ ಗುಂಪಾಗಿ ಹತ್ತಿರ ಹತ್ತಿರ ಅನೇಕ ಮನೆ ಕಟ್ಟಿಕೊಂಡರು. ಇದೊಂದು ಊರೇ ಆಯಿತು. ಎಲ್ಲರೂ "ಚಿಯಾಂಗ್" ಎಂಬ ಮನೆತನದ ಹೆಸರನ್ನೇ ಇರಿಸಿಕೊಂಡರು. ಹಣ ಕೂಡಿಸಿ ಪೂರ್ವಜರ ಗುಡಿಯೊಂದನ್ನು ಕಟ್ಟಿಸಿಕೊಂಡರು. ಹಾಗೆಯೇ ನಮ್ಮ ವಂಶಜರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಒಂದು ಶಾಲೆಯನ್ನೂ ಮಾಡಿಕೊಂಡರು. ಆ ಶಾಲೆಯ ಹೆಸರು ಚಿಂಯಾಂಗ್ ಮನೆತನದ "ಐ-ಷೂಬ್". ಅಲ್ಲಿಯೇ ನಾವೆಲ್ಲರೂ ಪಾಠ ಕಲಿತದ್ದು.

ನಮ್ಮ ವಂಶದ ೪೭ನೆ ತಲೆಯವನು ನದಿಯ ದಕ್ಷಿಣದ ಭೂಮಿಯನ್ನು ಕೊಂಡ. ಇಂದಿನ ಪಟ್ಟಣ ಇರುವುದು ಇಲ್ಲಿಯೇ. ಈ ಭಾಗದಲ್ಲಿಯೇ ಇವನಿಗೆ ವ್ಯವಹಾರವಿದ್ದುದರಿಂದ ದಕ್ಷಿಣಭಾಗದಲ್ಲೇ ಮನೆ ಕಟ್ಟಿಸಿಕೊಂಡ. ಹಾಗೂ ವರ್ಷಕ್ಕೆ ಒಂದುಸಲ ತನ್ನ ಪೂರ್ವಜರ ಗುಡಿಗೆ ನದಿಯನ್ನು ದಾಟಿಕೊಂಡು ಹೋಗುತ್ತಿದ್ದ. ಈ ಮನೆ ನಮ್ಮ ಮೂಲ ಮನೆಯ ಶಾಖೆಯೆಂದೂ, ವ್ಯವಹಾರದ ಅನುಕೂಲತೆಗಾಗಿ ಮಾಡಿಕೊಂಡ ತಾತ್ಪೂರ್ತಿಕ ಬಿಡಾರವೆಂದೂ ಪರಿಗಣಿಸಲ್ಪಡುತ್ತಿತ್ತು. ನಮ್ಮ ಪ್ರತಿಯೊಂದು ಮನೆಯಲ್ಲೂ ಪೂರ್ವಜರ ಗುಡಿ ಕಟ್ಟಲೇಬೇಕು. ಹಾಗೂ ತಿಂಗಳಲ್ಲಿ ಎರಡುಸಲ ಈ ಗುಡಿಗಳಿಗೆ ಹೋಗಲೇಬೇಕು. ಈ ಬಿಡಾರದ ಮನೆಯಲ್ಲಿಯೇ ನಾವೀಗ ಇರುವುದು ಎಂದು ತಂದೆ ಹೇಳಿದರು. ಮನೆ ಮೊದಲು ಅಷ್ಟೇನೂ ದೊಡ್ಡದಲ್ಲ. ಸುತ್ತಲೂ ದೊಡ್ಡ ತೋಟ. ಈ ಮನೆಯಲ್ಲಿ ಈಗ ಹತ್ತು ತಲೆಮಾರಿನ ಜನರಿದಾರೆ.

ಇಂದಿನ ತಲೆಮಾರಿನವರೆಗೂ ಕತೆಯನ್ನು ಮುಂದುವರಿಸಿ ೫೧ನೆ ತಲೆಯ ವಂಶಜ ಮೂಲಪುರುಷ ಹಾಕಿದ ನಿಯಮಗಳನ್ನು ಉಲ್ಲಂಘಿಸಿ ಮನೆತನಕ್ಕೆ ಕಲಂಕ ತಂದುದನ್ನು ಹೇಳಹತ್ತಿದರು. ಕುಟುಂಬದಲ್ಲಿ ಕಿರಿಯ ಮಗ. ದುರ್ಲಕ್ಷಿಸಲ್ಪಟ್ಟಿದ್ದ. ಸದಾ ಅಡಚಣೆಯಲ್ಲಿ ಬೀಳುತ್ತಿದ್ದ. ಇದರಿಂದ ಹಿರಿಯರಿಗೆ ತುಂಬಾ ನೋವಾಗುತ್ತಿತ್ತು. ಈ ಚಿಕ್ಕವನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲವಾದ್ದರಿಂದ ಇಡೀ ವಂಶಕ್ಕೇ ಅಪಕೀರ್ತಿ ಬಂತು."ಹಿರಿಯರನ್ನು ಹಳಿಯುವುದು ಸರಿಯಲ್ಲವೆಂದು ನನಗೆ ಗೊತ್ತಿದ್ದರೂ ಈ ವಿಷಯ ನಮ್ಮ ಮನೆತನವರಿಗೆಲ್ಲ ಗೊತ್ತಿರಬೇಕೆಂದು ನಿಮ್ಮ ಅಜ್ಜಿಯ ಬಯಕೆ. ಜೊತೆಗೆ ಮನೆತನದ ಯಾವ ಸಣ್ಣ ಹುಳುಕೂ ಹೊರಗಿನವರಿಗೆ ಗೊತ್ತಾಗಬಾರದೆಂಬ ನಿಯಮವನ್ನು ಯಾರೂ ಮರೆಯಕೂಡದು"–ತಂದೆ ಹೇಳಿದರು. (ಇದನ್ನು ಬರೆಯುವಾಗ ನಾನು ಮನೆತನಕ್ಕೆ ದ್ರೋಹ ಬಗೆಯುತ್ತಿದೇನೆ ಅನಿಸುತ್ತಿದೆ).

ಅಂತೂ ನನ್ನ, ನನ್ನ ಕಕ್ಕನ ಮಗಳ ಹೆಸರು ಒಮ್ಮೆ ಬಂದವು. ನನ್ನ ಮೈ ನಿಮಿರಿತು. ವಂಶಾವಳಿಯಲ್ಲಿ ನನ್ನ ಹೆಸರು ಅಚ್ಚಾದುದನ್ನು ನೋಡಿ ನನಗೆ ತುಂಬ ಅಭಿಮಾನವೆನಿಸಿತು. ಉದ್ವೇಗದಿಂದ ನನ್ನ

ಹೆಸರನ್ನು ಚೆನ್ನಾಗಿ ನೋಡಲು ತಂದೆಯವರ ಹತ್ತಿರಕ್ಕೆ ಸರಿದೆ. ಅದು ಅಲ್ಲಿ ಅಚ್ಚಾಗಿತ್ತು. ಅದರ ಮುಂದೆ ನಾನು ಹುಟ್ಟಿದ ತಾರೀಖನ್ನು ಮಾತ್ರ ಹಾಕಲಾಗಿತ್ತು. ಹಿಂದೆ ಸರಿಯಲು ತಂದೆ ಹೇಳಿದರು. ನನಗೆ ಮೂರು ವರ್ಷ ತುಂಬಿದ ಮೇಲೆ ನನ್ನ ಹೆಸರನ್ನಲ್ಲಿ ಸೇರಿಸಲಾಗಿದೆ ಎಂದು ತಂದೆ ವಿವರಿಸಿದರು. ಪ್ರತಿ ಮೂರು ವರ್ಷಕ್ಕೊಂದು ಸಲದಂತೆ ನಮ್ಮ ವಂಶಾವಳಿಯ ಪುಸ್ತಕವನ್ನು ಮುದ್ರಿಸುತ್ತಿದ್ದರು. ಹತ್ತು ವರ್ಷಕ್ಕೊಂದು ಸಲ ಆ ಮೂಲಾಗ್ರವಾಗಿ ವಂಶಾವಳಿ ಅಚ್ಚಾಗುತ್ತಿತ್ತು. ಎಲ್ಲರಿಗೂ ಪ್ರತಿಗಳನ್ನು ಕೊಡುತ್ತಿದ್ದರು. ಇದನ್ನು ಅಚ್ಚು ಮಾಡಿದ ಕಟ್ಟಿಗೆಯ ಅಚ್ಚುಗಳನ್ನೆಲ್ಲ ಪೂರ್ವಜರ ದೇವಾಲಯದಲ್ಲಿ ಕಾದಿರಿಸಿಟ್ಟಿದ್ದರು.

ಬರುವ ವಸಂತದಲ್ಲಿ ನದಿಯ ಆಚೆಗೆ ಇರುವ ನಮ್ಮ ಪೂರ್ವಜರ ದೇವಾಲಯಕ್ಕೆ ನಮ್ಮನ್ನು ಕರೆದುಕೊಂಡು ಹೋಗಲಾಗುವುದೆಂದು ತಂದೆಯವರು ಹೇಳಿದರು.

---



ಬುಟ್ಟಿ ಮಾರುವವನು

# ೩. "ಮೂರುದಾರಿ ಮನೆ"

ಚಿಯಾಂಗ್ ವಂಶದ ಪ್ರತಿಯೊಂದು ಮನೆಗೂ "ಮೂರುದಾರಿ ಮನೆ" ಎಂಬ ಹೆಸರು ಬಿದ್ದಿದೆ. ನಾವಿರುವ ಮನೆಯಲ್ಲಿ ಸುಪ್ರಸಿದ್ಧ ಬರೆಹಗಾರ "ಲಿಯೂ ಯರ್ಗ-ಚಿಯೊ" ಯಾವಾಗಲೋ ಬರೆದ ಹಲಗೆ ನೇತಾಡುತ್ತಿತ್ತು. ಅದರ ಮೇಲೆ "ಮೂರು ದಾರಿ ಮನೆ"ಗೆ ಸರಿಯಾಗಿ ಚೀನಾ ಭಾಷೆಯಲ್ಲಿ "ಸ್ಯಾಽ ಚಿಂಗ್ ಟ್ಯಾಂಗ್" ಎಂದು ಬರೆಯಲಾಗಿತ್ತು.

ಮನೆಯ ಮುಂದಿನ ಮಹಾದ್ವಾರದಲ್ಲಿ ಕಾಗದದಿಂದ ತಯಾರಿಸಿದ ಆಕಾಶಬುಟ್ಟಿ ದೀಪವನ್ನು ತೂಗುಬಿಟ್ಟಿದ್ದೆವು. ಅದರ ಮೇಲೂ ಕೂಡ ಈ ಮೂರು ಶಬ್ದಗಳನ್ನು ಸಣ್ಣ ಅಕ್ಷರಗಳಲ್ಲಿ ಬರೆಯಲಾಗಿತ್ತು. ರಾತ್ರಿಯಲ್ಲಿ ಸದಾ ಉಪಯೋಗಕ್ಕೆಂದು ಸಿದ್ಧವಾಗಿದ್ದ ಅನೇಕ ಕೈ ದೀಪಗಳ ಮೇಲೂ ಈ ಅಕ್ಷರ ಬರೆಯಲ್ಪಟ್ಟಿದ್ದುವು. ವಿಶೇಷ ಸಂದರ್ಭಗಳಿಗಾಗಿ ದೊಡ್ಡ ಕಾಲುದೀಪಗಳಿದ್ದವು. ಮದುವೆಗಳಲ್ಲಿ ಹಬ್ಬಗಳಲ್ಲಿ ಈ ದೀಪಗಳಿಗೆ ಕೆಂಪುಬಣ್ಣದ ಕಾಗದ ಸುತ್ತಿ ಮೇಲೆ ಸುವರ್ಣಾಕ್ಷರಗಳಲ್ಲಿ ಈ ಹೆಸರನ್ನು ಅಂಟಿಸುತ್ತಿದ್ದೆವು. ಶವಸಂಸ್ಕಾರದ ಸಂದರ್ಭಗಳಲ್ಲಿ ಬಿಳೀ ಕಾಗದ, ಅವುಗಳ ಮೇಲೆ ನೀಲಿ ಬಣ್ಣದ ಅಕ್ಷರ. ಈ ದೀಪಗಳಲ್ಲಿ ಉರಿಯುತ್ತಿದ್ದ ಮೇಣ ಬತ್ತಿಗಳನ್ನು ಹಚ್ಚಗೊಡಿರೆಂದು ನಮ್ಮ ಕೆಲಸಗಾರರ "ಮರ್ಜಿ" ಸಂಪಾದಿಸಲು ಪ್ರಯತ್ನಿಸುತ್ತಿದ್ದ ಅನೇಕ ಪ್ರಸಂಗಗಳಿನ್ನೂ ನೆನಪಿವೆ. ದೀಪ ಹಚ್ಚುವುದು ನನಗೆ ತುಂಬಾ ಇಷ್ಟ. ಬೆಂಕಿಯೇ ನಮ್ಮ ಸಂಸ್ಕೃತಿಯ ಮೂಲ. ಅದು ದೇವತೆಗಳ ಸ್ಥಾನವನ್ನು ಪಡೆದ ಕತೆಯನ್ನು ನಮ್ಮ ಅಜ್ಜನ ಬಾಯಿಂದ ಕೇಳಿದ ಮೇಲೆ ನನಗೆ ಅಗ್ನಿಯ

ಬಗ್ಗೆ ಆದರ ಉಂಟಾಗಿತ್ತು. ಐದು ಸಾವಿರ ವರ್ಷಗಳ ಹಿಂದೆ "ಸುಯಿ ಜೆ಼ೕ" ಎಂಬ ಸಾರ್ವಭೌಮ ಕಟ್ಟಿಗೆಗಳಿಂದ ಬೆಂಕಿ ಹುಟ್ಟಿಸುವುದನ್ನು ಸಂಶೋಧಿಸಿ ಚೀನಾ ಜನರಿಗೆ ಅಡಿಗೆ ಮಾಡುವುದನ್ನು ಕಲಿಸಿಕೊಟ್ಟ ಕತೆಯನ್ನು ಅಜ್ಜನ ಬಾಯಿಂದ ಕೇಳಿದ್ದೆ.

ನಮ್ಮ ಮನೆಯನ್ನು ಹೇಗೆ, ಎಂದು ಕಟ್ಟಿದರೆಂದು ನಾನಾರನ್ನೂ ಕೇಳಿಲ್ಲ. ಆದರೆ ಹೀಗಿರಬಹುದು ಎನಿಸುತ್ತಿದೆ. ಎಲ್ಲ ಮನೆಗಳೂ ಒಂದೇ ಅಂತಸ್ತಿನ ಮನೆಗಳಾದ್ದರಿಂದ ಎತ್ತರ ನೋಡಿ ಮನೆಯ ಯೋಗ್ಯತೆ ಗೊತ್ತುಮಾಡಿಕೊಳ್ಳುವದಿಲ್ಲ. ವಿಸ್ತಾರದಿಂದ ಗೊತ್ತುಮಾಡಿಕೊಳ್ಳುತ್ತೇವೆ. ನಮ್ಮ ಮನೆಗೆ ಮೂರು ದೊಡ್ಡ ಒಳ ಅಂಗಳ ಇವೆ. ಅವುಗಳನ್ನು ನಾವು 'ತ್ರೀ಼ ಚಿಂಗ್' ಅಂದರೆ "ಮುಗಿಲು ಬಾವಿ" ಎನ್ನುತ್ತೇವೆ. ಎರಡು ಅಂಗಳ ಗಳಿಗೆ ನಡುವೆದೊಡ್ಡ ನಡುಮನೆ. ಅದಕ್ಕೆ ಎತ್ತರವಾದ ದೊಡ್ಡ ದೊಡ್ಡ ದುಂಡುಕಂಬಗಳ ಆಧಾರ. ಈ ಕಂಬಗಳನ್ನು "ಲೂ" ಪರ್ವತದಿಂದ ಕಡಿದು ತಂದಿದಾರೆ. ಪ್ರತಿಯೊಂದು ನಡುಮನೆಯ ಎರಡೂ ಬದಿಗಳಲ್ಲಿ ನಾಲ್ಕು ದೊಡ್ಡ ಕೋಣೆ. ಇವುಗಳಲ್ಲಿ ನಮ್ಮ ಮನೆಯ ಹಿರಿಯರು ವಾಸಿಸುತ್ತಾರೆ.

ಈ ಕೋಣೆಗಳ ಎಡಬಲಕ್ಕೆ ಮತ್ತೂ ಮೂರು ಕೋಣೆ. ಒಟ್ಟು ನಲವತ್ತೆರಡು ಕೋಣೆ. ಎರಡು ಅಡಿಗೆ ಮನೆ ಬಿಟ್ಟು. ಈ ಅಡಿಗೆ ಮನೆಗಳು ಸಾಮಾನ್ಯ ಮನೆಗಳಿಗಿಂತ ದೊಡ್ಡವು. ಇಲ್ಲಿ ನೀರಿನ ಸಂಗ್ರಹಕ್ಕೆ ದೊಡ್ಡ ತೊಟ್ಟಿಗಳಿವೆ. ಉರವಲಿನ ಸಂಗ್ರಹಕ್ಕೂ ಕೂಡ ಸಾಕಷ್ಟು ವಿಶಾಲ ಸ್ಥಳವಿದೆ. ಕೋಣೆಗಳು ಕೆಲವು ದೊಡ್ಡವು, ಕೆಲವು ಚಿಕ್ಕವು. ಪ್ರತಿಯೊಂದು ಕೋಣೆಯ ಕಿಟಕಿಗಳೂ "ಮುಗಿಲು ಬಾವಿ"ಗಳ ಕಡೆಗೆ ಇರುವುದರಿಂದ ಸಾಕಷ್ಟು ಗಾಳಿ ಬೆಳಕು ಬರಲು ಅವಕಾಶವಿದೆ. ಒಂದೇ ಒಂದು ತೀರ ಚಿಕ್ಕ ಕೋಣೆಗೆ ಮಾತ್ರ ಕಿಟಕಿ ಇಲ್ಲ. ಇದಕ್ಕೆ ಹತ್ತಿ ನಮ್ಮ ಅಜ್ಜಿಯ ಅಂತಃಪುರ. ಇದರ ಸುತ್ತ ಮುತ್ತ ಎಲ್ಲ ಕಡೆಗೂ ಬೇರೆ ಬೇರೆ ಕೋಣೆ. ಈ ಕೋಣೆಗಳಿಗೆಲ್ಲ ಬೆಳಕಿಂಡಿಗಳಿವೆ. ಅವುಗಳಿಗೆಲ್ಲ ವಿಶಿಷ್ಟ ಬಗೆಯ ಗಾಜನ್ನು ಕೂಡಿಸಲಾಗಿದೆ. ನಡುಮನೆಗಳನ್ನು ಬಿಟ್ಟು ಉಳಿದ ಕೋಣೆಗಳಿಗೆಲ್ಲ ಅಟ್ಟಗಳಿವೆ.

ಮಹಾದ್ವಾರದ ಎಡಬದಿಗೆ ಒಂದು ಚಿಕ್ಕ ಕೋಣೆ ಇದೆ–ಬಾಗಿಲು

ಕಾಯುವವನಿಗೆ. ಆದರೆ ಯಾರೂ ಇದ್ದರೆಂಬ ನೆನಪು ನನಗೆ ಇಲ್ಲ. ನಮ್ಮ ಅಜ್ಜನಿಗೆ ಆಡಂಬರವೇ ಗೊತ್ತಿರಲಿಲ್ಲ. ನಾವು ನಿರಾಡಂಬರ ವಾಗಿಯೇ ಇರಬೇಕೆಂದು ಅವರು ಬಯಸುತ್ತಿದ್ದರು. ಅಂತೆಯೇ ಮಕ್ಕಳಿ ಗಾಗಲಿ ಕೆಲಸದವರಿಗಾಗಲಿ ಪ್ರತ್ಯೇಕ ಕೋಣೆ ಇರಲಿಲ್ಲ. ಮಲಗುವ ಕೋಣೆಗಳ ಪಕ್ಕದ ಚಿಕ್ಕ ಚಿಕ್ಕ ಕೋಣೆಗಳಲ್ಲಿ ಹೆಣ್ಣು ಕೆಲಸಗಾರರು, ಅತಿಥಿಗಳ ಕೋಣೆಗಳ ಪಕ್ಕದ ಕೋಣೆಗಳಲ್ಲಿ ಗಂಡು ಕೆಲಸಗಾರರು ಇರುತ್ತಿದ್ದರು.

ಪ್ರತಿಯೊಂದು ನಡುಮನೆಯ ಮುಂಬದಿಗೂ ಎಂಟು ಎಂಟು ಮಡಿಕೆಯ ಬಾಗಿಲು. ಈ ಎಂಟೂ ಬಾಗಿಲುಗಳ ಮೇಲಿನ ಅರ್ಧ ಭಾಗ ಕಟ್ಟಿಗೆಯದು. ಇಲ್ಲಿ ನಕ್ಷೆ, ಸುಳವು ಬಿಡಿಸಲಾಗಿದೆ. ಇವುಗಳ ಮೇಲೆ ನಾವು ತೆಳ್ಳನೆ ಕಾಗದ ಅಂಟಿಸುತ್ತೇವೆ. ಕೆಳಗಿನ ಅರ್ಧ ಭಾಗವನ್ನು ಸಾದಾ ಹಲಗೆಗಳಿಂದ ಮಾಡಿದ್ದಾರೆ. ಇವುಗಳ ಎದುರಿಗೆ ಉದ್ದವಾದ ಒಂದು ಹಲಗೆ. ಅದರ ಮೇಲೆ ತರತರದ ಸಾಮಾನು, ಪಿಂಗಾಣಿ ಗೊಂಬೆ ಗಳು, ಮರದ ಬೊಂಬೆಗಳು, ದೊಡ್ಡ ಹೂದಾನಿಗಳು–ಇತ್ಯಾದಿ. ಗೋಡೆಯ ಮೇಲೆ ಹೂ, ಹಕ್ಕಿಗಳ ಚಿತ್ರಗಳು. ಋತುಗಳು ಬದಲಾದಂತೆ ಈ ಚಿತ್ರಗಳೂ ಬದಲಾಗುವವು. ವಸಂತ ಋತುವಿನಲ್ಲಿ ಹೂಬಿಟ್ಟ ಪೀಚ ಗಿಡಗಳಮೇಲೆ ಪಕ್ಷಿಗಳ ಚಿತ್ರ, ಬೇಸಿಗೆಯಲ್ಲಿ ಕಮಲದ ಹೂವಿನ ಚಿತ್ರ, ಹೀಗೆ. ನಮ್ಮ ಅಜ್ಜನಿಗೆ ಚಿತ್ರಗಳೆಂದರೆ ತುಂಬಾ ಇಷ್ಟ. ತಂದೆಯಂತೂ ಕಲಾವಿದರು– ಚಿತ್ರಕಾರರು. ಕೇಳುವುದೇನು ! ಅವರು ಹೊಸ ಹೊಸ ಚಿತ್ರಗಳನ್ನು ಬಿಡಿಸುತ್ತಿದ್ದರು. ತಂದೆಯವರಿಗಂತೂ ತಿಂಗಳಿಗೊಂದು ಹೊಸ ಚಿತ್ರ ಬೇಕಾಗುತ್ತಿತ್ತು. ಚಿತ್ರಗಳ ಸಂಗ್ರಹದಿಂದ ಕಾಲಕ್ಕೆ ತಕ್ಕ ಚಿತ್ರ ಆರಿಸಿ ಕೊಡುವ ಕೆಲಸ ನನ್ನದು. ನನಗಿದರಿಂದ ತುಂಬಾ ಹೆಮ್ಮೆ ಅನಿಸುತ್ತಿತ್ತು. ತಂದೆ ಚಿತ್ರಗಳ ಕೆಲಸವನ್ನು ಬೇರೆ ಯಾರಿಗೂ ಹೇಳುತ್ತಿರಲಿಲ್ಲ. ನನಗೇ ಹೇಳುತ್ತಿದ್ದರು.

ಪ್ರತಿಯೊಂದು ನಡುಮನೆಯ ಎರಡೂ ಗೋಡೆಗಳ ಮೇಲೆ ಒಂದೇ ಅಳತೆಯ ನಾಲ್ಕು ಚಿತ್ರ. ಆ ಚಿತ್ರಗಳಿಗೆ ತಕ್ಕ ಹೆಸರು. ಚಿತ್ರ ಬಲಕ್ಕೆ, ಅಕ್ಷರ ಎಡಕ್ಕೆ. ಇದಕ್ಕೆ ಕಾರಣವೇನಂದರೂ ಇರಬಹುದು. ನನಗೆ ಗೊತ್ತಿಲ್ಲ.

ತಂದೆಯುವರ ಮಿತ್ರ ಬರೆದ ಚಿಕ್ಕ ನಿಸರ್ಗ ನೋಟದ ಚಿತ್ರವೊಂದು ಅಜ್ಜನ ಕೋಣೆಯಲ್ಲಿ ನೇತಾಡುತ್ತಿತ್ತು. ಅಜ್ಜಿಯ ಕೋಣೆಯಲ್ಲಿ ತಂದೆ ಬಿಡಿಸಿದ ಹೂಗಳ ಚಿತ್ರವೊಂದು ಇತ್ತು. ಅಕ್ಕನ ಹತ್ತಿರ ತಂದೆ ಬರೆದ ಹಕ್ಕಿ-ಹೂಗಳ ನಾಲ್ಕು ಚಿತ್ರ.

ಅಣ್ಣನಿಗೆ ಅಂದವಾದ ಅಕ್ಷರ ಇಷ್ಟ. ಅವನ ಕೋಣೆಯಲ್ಲಿದ್ದ ಪಟಗಳಲ್ಲಿ ನಾಣ್ನುಡಿ ಇಲ್ಲವೆ ಸುಪ್ರಸಿದ್ಧ ಸಾಹಿತಿಯ ಒಂದು ವಾಕ್ಯ. ಹೆಂಗಸರಂತೆ ಹೂವಿನ ಚಿತ್ರ ಹಾಕಿದೀಯ ಎಂದು ತನ್ನ ಮಿತ್ರರ ಟೀಕೆಗೆ ಗುರಿಯಾಗಬಾರದು ಅನ್ನುತ್ತಿದ್ದ. ಅದನ್ನು ಕೇಳಿ ತಂದೆ ನಗುತ್ತಿದ್ದರು.

ತಮ್ಮ ಕೋಣೆಯನ್ನು ಸದಾ ಹೊಸ ಹೊಸ ರೀತಿ ಸಿಂಗರಿಸುವ ಕೆಲಸದಲ್ಲಿ ತಂದೆಗೆ ಯಾವಾಗಲೂ ಬಿಡುವಿಲ್ಲ. ಗೌರವಾನ್ವಿತ ಚಿತ್ರಕಾರರ ಚಿತ್ರಗಳನ್ನು ತಮ್ಮ ಕೋಣೆಯಲ್ಲಿ ತೂಗುಹಾಕಿದ್ದರು. ತಮ್ಮ ಚಿತ್ರಗಳನ್ನು ಹಾಕುತ್ತಿರಲಿಲ್ಲ. ಎಂದಾದರೊಮ್ಮೆ ಹಾಕಿದರೆ ತುಸು ಹೊತ್ತಿನ ಮೇಲೆ ಅವು ಸರಿಯಾಗಿಲ್ಲವೆಂದು ತೆಗೆದುಬಿಡುತ್ತಿದ್ದರು.

ಅತಿಥಿಗಳಿಗಾಗಿ ಒಂದು, ಏನಾದರೂ ಕೆಲಸಕ್ಕೆಂದು ಬಂದ ಜನರಿಗಾಗಿ ಒಂದು, ಎರಡು ಕೋಣೆ ಇದ್ದವು. ದೊಡ್ಡ ಜನರ ಪರಿಚಯ ಪತ್ರ ತಂದ ಅತಿಥಿಗಳೂ ನಮಗೆ ಸಂಬಂಧಿಸಿದ ಆತ್ಮೀಯರೂ ಮುಂದಿನ ಕೈಸಾಲೆಯಲ್ಲಿ ತಂಗುತ್ತಿದ್ದರು. ಮೊದಲಿನ ಎರಡು ಕೈಸಾಲೆಗಳ ಮಧ್ಯೆ ಸಾಕಷ್ಟು ಸ್ಥಳವಿದೆ. ಸಮಾರಂಭಗಳಲ್ಲಿ ಇಲ್ಲಿ ನಾಲ್ಕು ಊಟದ ಮೇಜು ಹಾಕಬಹುದು. ಪ್ರತಿಯೊಂದು ಮೇಜಿಗೂ ಎಂಟು ಜನ ಕುಳಿತುಕೊಳ್ಳಬಹುದು. ಮದುವೆ ಮುಂತಾದ ಸಮಾರಂಭದ ಕಾಲಕ್ಕೆ ಎಂಟೂ ಬಾಗಿಲು ತೆಗೆದರೆ ಮುಂದಿನ ಮಹಾ ದ್ವಾರದಿಂದ ಒಳಗಿನವರೆಗೂ ಕುರ್ಚಿಗಳನ್ನು ಸಾಲಾಗಿ ಹಾಕಬಹುದು.

ಮೂರಡಿ ಎತ್ತರ, ಐದುಅಡಿ ಅಗಲದ ಎರಡು ದೊಡ್ಡದೊಡ್ಡ ನೀರಿನ ಬಾನೆಗಳಿವೆ, ಪಿಂಗಾಣಿಯವು. ಇವುಗಳಲ್ಲಿ ಬಂಗಾರದ ಬಣ್ಣದ ಮೀನು. ನನ್ನನ್ನೆತ್ತಿಕೊಂಡು ಈ ಮೀನು ತೋರಿಸಿರೆಂದು ನಾನು ಅಜ್ಜಿಯನ್ನೂ ಅಕ್ಕನನ್ನೂ ಗೋಳಿಟ್ಟುಕೊಂಡ ನೆನಪು ಇದೆ. ಈ ಅಂಗಳದಲ್ಲಿ ಹುಲ್ಲು ಬೆಳೆಯುತ್ತಿರಲಿಲ್ಲ. ನೆಲಕ್ಕೆ ಕಲ್ಲು ಹಾಸಿದ್ದರು. ಮಳೆ ನೀರು ಹರಿದು

ಹೋಗಲು ಪ್ರತಿ ಮೂಲೆಗೂ ಒಂದು ಮೋರಿ. ಈ ಮೋರಿಗಳನ್ನೂ ಕೂಡ ಸುಂದರವಾಗಿ ಕಾಣುವಂತೆ ಮಾಡಿಸಬೇಕೆಂದು ತಂದೆ ಶಿಲ್ಪಿಗಳನ್ನು ಕರೆಸಿ ಆ ಅಳತೆಗೆ ಸರಿಯಾಗಿ ಏಡಿ, ಕಪ್ಪೆ, ಆಮೆಗಳ ಆಕೃತಿಗಳನ್ನು ಮಾಡಿಸಿದರು. ಇವುಗಳ ಬೆನ್ನು ಅಗಲ. ಮೋರಿ ಮುಚ್ಚಿಕೊಳ್ಳುತ್ತದೆ. ಕಾಲು ಸಂದುಗಳಿಂದ ನೀರು ಹರಿದು ಹೋಗುತ್ತದೆ.

ಇದನ್ನು ನಮ್ಮ ತಾಯಿಯ ತವರು ಮನೆಯವರೂ ಅಕ್ಕನ ಅತ್ತೆ ಮನೆಯವರೂ ಮೆಚ್ಚಿ ಅನುಕರಿಸಿದರು. ಹಿರಿಯರಿಗೆ ಇದು ಮಹತ್ತ್ವದ್ದಲ್ಲ. ಆದರೆ ಕಿರಿಯರಾದ ನಮಗೆ ಈ ಕಲ್ಲಿನ ಪ್ರಾಣಿಗಳ ನೋಟ ಬಲು ಆಕರ್ಷಕ, ಮನೋರಂಜಕ. ಉಳಿದ ಚಿಕ್ಕ ಅಂಗಳಗಳಲ್ಲಿ ತರತರದ ಗಿಡ ಬಳ್ಳಿ ಹೂಗಳನ್ನು ಕಿರು ಬಿದಿರನ್ನು ಬೆಳೆಸಿದ್ದರು. ಚಿಕ್ಕ ಚಿಕ್ಕ ತಾಳೆ ಮರಗಳೂ ಅಲ್ಲಿದ್ದವು.

ದೊಡ್ಡ ಮನೆಯ ಪಕ್ಕದಲ್ಲಿ ಚಿಕ್ಕದೊಂದು ಮನೆ. ಇದರಲ್ಲಿ ಒಂದು ಹಜಾರ. ಅದರ ಎರಡೂ ಬದಿಗಳಲ್ಲಿ ಎರಡು ಎರಡು ಕೋಣೆ. ನನ್ನ ಮೂರನೆಯ ದೊಡ್ಡಪ್ಪ ಅಲ್ಲಿ ವಾಸಿಸುತ್ತಿದ್ದ. ಇದರ ಎದುರಿಗೆ ಇನ್ನೊಂದು ಚಿಕ್ಕ ಕುಟೀರದಲ್ಲಿ ನನ್ನ ನಾಲ್ಕನೆಯ ದೊಡ್ಡಪ್ಪನ ಮಕ್ಕಳು.

ಇದರ ಪಕ್ಕದಲ್ಲಿ ದೊಡ್ಡ ತೋಟ. ದೊಡ್ಡ ಮನೆಗೆ ಸಂಬಂಧಿಸಿದ ತೋಟ. ಅಜ್ಜನ ಓಡಾಟಕ್ಕೆ ದಾರಿ ಮಾಡಿದ್ದರಿಂದ ಬೇರೆಯಾಗಿತ್ತು. ಅಲ್ಲಿ ನೆಲಕ್ಕೆ ಕಲ್ಲು ಹಾಸಿದ್ದರು. ಇದರಿಂದ ನಮಗೆ ಮಕ್ಕಳಿಗೆ ಆಡಲು ವಿಶಾಲ ಸ್ಥಳ ದೊರೆತಂತಾಗಿತ್ತು. ಮುಂಭಾಗದ ಹೆಬ್ಬಾಗಿಲಿನ ಎದುರಿಗೆ ಎತ್ತರವಿಲ್ಲದ ಇಟ್ಟಿಗೆ ಗೋಡೆಯೊಂದು ಇದೆ. ಎದುರಿಗೆ ದೂರದಲ್ಲಿ ಇರುವ "ಲೂ" ಪರ್ವತದ ನೀಲವರ್ಣದ ಸಾಲುಗಳನ್ನು ಬಾಗಿಲಲ್ಲಿ ನಿಂತು ನೋಡಿದರೆ ಬಲು ರಮ್ಯವಾಗಿ ಕಾಣುತ್ತದೆ. ಆದರೆ ದುರ್ದೈವದಿಂದ ನಮ್ಮ ತೋಟದ ಎದುರಿನ ಆ ಬೈಲನ್ನು ಬೇರೊಬ್ಬರು ಕೊಂಡು ಅಲ್ಲಿ ಮೂರು ಅಂತಸ್ತಿನ ಈಗಿನ ಮಾದರಿಯ ಮನೆ ಕಟ್ಟಿಸಿದರು. ಇದರಿಂದ "ಲೂ" ಪರ್ವತದ ಸುಂದರ ದೃಶ್ಯ ಮರೆಯಾಯಿತು. ನಮ್ಮ ಮನೆತನದ ಅಭ್ಯುದಯಕ್ಕೂ ಇದರಿಂದ ತಡೆಯಾಯಿತೆಂಬ ಅಪಶಕುನದ ಮಾತೂ ಊರಲ್ಲಿ ಹಬ್ಬಿತು. ಇದರ ಕೆಟ್ಟ ಪರಿಣಾಮ ತಡೆಯಲು ಆ ಸಣ್ಣ ಇಟ್ಟಿಗೆ

ಗೋಡೆಯನ್ನೇ ಎತ್ತರವಾಗಿ ಕಟ್ಟಿ ಆ ಹೊಸ ಮನೆ ಕಾಣದಂತೆ ಮಾಡಲಾಯಿತು. ಈ ಗೋಡೆಯ ಮೇಲ್ಭಾಗದಲ್ಲಿ ಶಿಲ್ಪಿಗಳು ನಮ್ಮ ವಂಶದ ಮೂಲಪುರುಷನ ಕಾಲದ "ಮೂರು ಸಾಮ್ರಾಜ್ಯ"ಗಳನ್ನು ಕುರಿತು ಪ್ರಚಾರದಲ್ಲಿದ್ದ ಕಲೆಗಳ ಸನ್ನಿವೇಶಗಳನ್ನೂ ಕೆಲವು ನಿಸರ್ಗ ದೃಶ್ಯಗಳನ್ನೂ ಎದ್ದು ಕಾಣುವಂತೆ ಕೊರೆದಿದ್ದರು. ಈ ಗೋಡೆಯ ಮಧ್ಯೆ ನಮ್ಮ ದೊಡ್ಡಪ್ಪ "ಫೂ" ಎಂಬ ಅಕ್ಷರವನ್ನು ಊರಿನ ಸುಪ್ರಸಿದ್ಧ ಅಕ್ಷರ ಶಿಲ್ಪಿಯಿಂದ ಕೊರೆಯಿಸಿದ್ದರು. "ಫೂ" ಎಂದರೆ ಸೌಖ್ಯ. ಹೆಬ್ಬಾಗಿಲಿನ ಎದುರಿಗಿದ್ದ ಈ ದೊಡ್ಡ ಅಕ್ಷರದಿಂದ ನಾವು ಮನೆ ಬಿಟ್ಟು ಹೊರಗೆ ಹೋಗುವಾಗಲೆಲ್ಲ ಸೌಖ್ಯವನ್ನೇ ಎದುರುಗೊಂಡು ಹೋಗುವಂತೆ ಅನಿಸುತ್ತಿತ್ತು.

ಈ ದೊಡ್ಡ ಗೋಡೆಯ ಎಡಬದಿಗೆ ಚಿಕ್ಕದೊಂದು ಮನೆ- ಅಲ್ಲಿ ಒಂದು ದೊಡ್ಡ ತೊಟ್ಟಿ ಹಾಗೂ ಎರಡು ಕೋಣೆ- ಅದು ನಮ್ಮ ಮನೆತನದ ಶಾಲೆ, ಐದು ವರ್ಷವಾಗುವವರೆಗೂ ನನ್ನನ್ನು ಶಾಲೆಗೆ ಕಳಿಸಲಿಲ್ಲ. ಆರು ವರ್ಷದವನಾಗುವ ಮೊದಲು ನನ್ನ ಶಿಕ್ಷಣ ಪ್ರಾರಂಭವಾಗಲಿಲ್ಲವಾದರೂ ನನಗಿಂತ ದೊಡ್ಡವರು ಪಾಠ ಮಾಡುತ್ತಿದ್ದ ನಮ್ಮ ಹಳೆಯ ಗ್ರಂಥಗಳನ್ನು ಕೇಳಿ ನನಗೆ ತುಂಬಾ ಸಂತೋಷವಾಗುತ್ತಿತ್ತು. ಮಧ್ಯದ ತೊಟ್ಟಿಯಲ್ಲಿ ಒಂದು ಪೂಜಾ ಮಂದಿರ, ಅಲ್ಲಿ "ಕಾನ್‌ಫ್ಯುಸಿಯಸ್" ಚಿತ್ರ. ನಮ್ಮ ಗುರುಗಳಿಗೆ ಎರಡು ಕೋಣೆ ಕೊಟ್ಟಿದ್ದರು. ತೊಟ್ಟಿಯ ಎದುರಿಗೆ ಚಿಕ್ಕದೊಂದು ತೋಟ, ಒಳ ಅಂಗಳ ಎನ್ನಬಹುದು. ಮುಂದಿನ ದೊಡ್ಡ ತೋಟದಲ್ಲಿ ಅಡ್ಡಗೋಡೆ ಹಾಕಿ ಬೇರೆ ಮಾಡಿದ ಭಾಗ. ಗುಂಡಗೆ ಚಂದ್ರನಂತಿರುವ ಒಂದು ಬಾಗಿಲಿನಿಂದ ಈ ತೋಟಕ್ಕೆ ಹೋಗಬಹುದು. ಅಲ್ಲಿ ಕಿತ್ತಿಳೆ ಹಣ್ಣಿನ ಜಾತಿಗೆ ಸೇರಿದ 'ಟ್ಸಿಂಗ್' ಗಿಡವಿತ್ತು. ನನ್ನಂತೆ ನನ್ನ ಕಕ್ಕನ ಮಕ್ಕಳೂ ಕೂಡ ಈ ಗಿಡವನ್ನು ಮರೆತಿರಲಾರರು. ಪಾಠಕ್ಕೆ ಕುಳಿತಾಗ ನಮ್ಮ ಕಣ್ಣಿನ ಮುಂದೆ ಈ ಗಿಡವೇ ಇರುತ್ತಿತ್ತು. ಅದರ ಮೇಲೆ ನೆಟ್ಟ ನೋಟದಿಂದ ಬಾಯಿಪಾಠ ಮಾಡುತ್ತಿದ್ದೆವು. ಪಾಠ ಬಾರದಿದ್ದರಂತೂ ಗಿಡದ ಕಡೆಗೇ ಕಣ್ಣು, ಬೇಸಿಗೆಯಲ್ಲಿ ನಮಗದು ನೆರಳು ಕೊಡುತ್ತಿತ್ತು. ಗುರುಗಳು ನಮಗೆ ಬಿಡುವು ಕೊಟ್ಟಾಗ ನಮಗೆ ಆ ಗಿಡದ ನೆರಳಲ್ಲೇ ಆಟ, ವಿಶ್ರಾಂತಿ. ಮೇ ತಿಂಗಳಲ್ಲಿ

ಗಿಡ ಹೂ ಬಿಡುತ್ತಿತ್ತು. ಬೆಳ್ಳನೆ ಹೂ. ನಡುವೆ ಹಳದಿ, ಕೆಳಗೆ ಉದುರಿದ ಹೂಗಳನ್ನು ಗುಡಿಸಲು ಗುರುಗಳು ಹೇಳಿದ್ದರು. ಆ ಕೆಲಸ ನಮಗೆ ಬಹಳ ಕಷ್ಟ. ಬಿರುಗಾಳಿ ಬೀಸಿದರೆ ಹೂವಿನ ಜೊತೆಗೆ ಹಣ್ಣೂ ಬೀಳು ತ್ತಿದ್ದವು. ಪಾಠ ಮುಗಿದೊಡನೆ ಓಡಿಹೋಗಿ ಪೈಪೋಟಿಯ ಮೇಲೆ ನಾವು ಹಣ್ಣನ್ನು ಆರಿಸುತ್ತಿದ್ದೆವು. ಎಲ್ಲ ಬಗೆಯ ಆಟಕ್ಕೂ ಅವನ್ನು ಉಪಯೋಗಿಸುತ್ತಿದ್ದೆವು. ಜವಸರ ಮಾಡುತ್ತಿದ್ದೆವು. ಒಬ್ಬರಿಗೊಬ್ಬರು ಹಿಮದ ಚೆಂಡಿನಂತೆ ತೂರಾಡಿಕೊಳ್ಳುತ್ತಿದ್ದೆವು. ಅಂಕಿ ಎಣಿಸುವುದಕ್ಕೂ ಉಪಯೋಗಿಸಿಕೊಳ್ಳುತ್ತಿದ್ದೆವು. ಗಿಡದ ತುಂಬಾ ಮುಳ್ಳು ಇದ್ದರೂ ದಿಟ್ಟರಾದ ಕಕ್ಕನ ಮಕ್ಕಳು ಆ ಗಿಡ ಹತ್ತಿ ಬಡಿಗೆಯಿಂದ ಹೊಡೆದು ಹಣ್ಣು ಉದುರಿಸುತ್ತಿದ್ದರು. ಹೆಚ್ಚು ವಾಗಿದಂತೆ ಆಕಾರದಲ್ಲಿ ದೊಡ್ಡ ದಾಗುತ್ತಿದ್ದವಲ್ಲದೆ ಅದಕ್ಕೆ ಹಸಿರು-ಹಳದಿ ಬಣ್ಣ ಹೋಗಿ ಕಂದು-ಹಳದಿ ಬಣ್ಣ ಬರುತ್ತಿತ್ತು. ಕಿತ್ತಿಳೆ ಹಣ್ಣಿನ ಗುಣ-ರುಚಿ ಅವಕ್ಕೆ ಇರಲಿಲ್ಲ. ಕಹಿ. ತಿನ್ನಲು ಯೋಗ್ಯವಲ್ಲ. ಪ್ರತಿ ವರ್ಷ ಎರಡು-ಮೂರು ನೂರು ಹಣ್ಣನ್ನು ಅಜ್ಜಿ ಕಾಣಿಕೆ ಕೊಡುತ್ತಿದ್ದಳು.

ಮನೆಯ ಹಿಂದೆ ಮತ್ತೊಂದು ತೋಟ ಇತ್ತು. ಮುಂದಿನ ತೋಟ ಕ್ಕಿಂತ ಚಿಕ್ಕದು. ಅಲ್ಲಿ ಹೊಂಡ ಇರಲಿಲ್ಲ. "ನಮ್ಮ ಮನೆಯ ಮುಂದಿನ ತೋಟದ ಹೊಂಡದ ನೀರು ಚರಂಡಿಯಲ್ಲಿ ಹರಿದು ಯಾಂಗ್ಟ್ಸಿ ನದಿಗೆ ಸೇರುತ್ತದೆ ಎಂದು ಕೇಳಿದ್ದೆ. ಚಹಾ ಮಾಡಲು ಹೊಳೆಯ ನೀರನ್ನೋ, ಬೆಟ್ಟದ ಝರಿಯ ನೀರನ್ನೋ ತರುತ್ತಿದ್ದರು. ನಮ್ಮ ಬಾವಿಯ ನೀರು ಚಹಾಕ್ಕೆ ಅಯೋಗ್ಯ. ಆದರೆ ಉಳಿದ ದಿನಬಳಕೆಗೆ ಸಾಕಾಗುತ್ತಿತ್ತು. ಮೊದಲು ಈ ಬಾವಿ ಮನೆಯೊಳಗೇ ಅಡಿಗೆಮನೆಯ ಹತ್ತಿರ ಇತ್ತು. ಉಳಿದವರಿಗೂ ಈ ಬಾವಿಯ ನೀರನ್ನು ಕೊಡಬೇಕೆಂದು ಅಜ್ಜನಿಗೆ ಅನಿಸಿ ಹಾಗೆ ಮಾಡಿದರು. ಇದರಿಂದ ನೆರೆಹೊರೆಯವರಿಗೇನೋ ತುಂಬಾ ಅನುಕೂಲವಾಯಿತು. ನಮ್ಮ ಕೆಲಸಗಾರರು ಮಾತ್ರ ನಮಗೇ ನೀರು ಸಾಕಷ್ಟು ಸಿಗದಂತಾಯಿತೆಂದು ಗೊಣಗುತ್ತಿದ್ದರು ಬೇಸಗೆಯಲ್ಲಿ ಕೆಲದಿನ ಈ ಬಾವಿ ಬತ್ತಿಹೋಗುತ್ತಿತ್ತು. ನಾವು ರಾತ್ರಿ ನೀರು ಸೇದಿಕೊಳ್ಳ ಬೇಕೆಂದು ಅಜ್ಜಿ ಹೇಳುತ್ತಿದ್ದರು. ಆದಕ್ಕೆ ಕೆಲಸಗಾರರು ಸಮ್ಮತಿಸುತ್ತಿದ್ದಿಲ್ಲ.

ಅದರ ಬದಲು ಬೇಸಿಗೆಯಲ್ಲಿ ಕನಿಷ್ಠಪಕ್ಷ ಎರಡು ಗಂಟೆಯಾದರೂ ನೀರಿಗೆ ಯಾರನ್ನೂ ಬರಗೊಡದಂತೆ ಮಾಡಬೇಕೆಂದು ಕೇಳಿಕೊಳ್ಳುತ್ತಿದ್ದರು. ನೀರು ಸೇದಲು ಬಾರದಂತೆ ಒಂದು ಕಬ್ಬಿಣದ ಕಂಬಿ ಹಾಕಿದ್ದರು. ಅದನ್ನು ನಮಗೆ ಗೊತ್ತಾಗದಂತೆ ಯಾರೋ ಕದ್ದೊಯ್ದರು. ಮುಂದೆ ಒಂದು ಸರಪಣಿ ಹಾಕಿ ಅದಕ್ಕೆ ಕೀಲಿ ಹಾಕಿ ಕಾವಲು ಇರಿಸಬೇಕಾಗಿ ಬಂತು. ಕೆಲವು ಸಲ ನಾನು ಕಾವಲು ನಿಂತಿರುತ್ತಿದ್ದೆ. ನೆರೆಹೊರೆಯ ಜನ ಕೈಯಲ್ಲಿ ಬಕೆಟ್ಟು ಹಿಡಿದು ಬಿಸಿಲಿನಲ್ಲಿ ನೀರಿಗಾಗಿ ನಿಂತುದನ್ನು ನೋಡಿ ಮನಸ್ಸು ತಡೆಯಲಾರದೆ ಕೀಲಿ ತೆಗೆದು ನೀರು ಕೊಡುತ್ತಿದ್ದೆ. ನಮ್ಮ ಕೆಲಸ ಗಾರರಿಗೆ ಇದು ತಿಳಿದುಬಂತು. ನನ್ನ ಕಾವಲಿನಲ್ಲಿ ವಿಶ್ವಾಸವಿಡದಾದರು. ಪರರಿಗೆ ನಮ್ಮ ಕೈಯಲ್ಲಾದ ಸಹಾಯ ಮಾಡಬೇಕು ಎನಿಸಿದರೂ ಪರಿಸ್ಥಿತಿ ಅನುಕೂಲವಾಗಲಿಲ್ಲ.

---



ಬೆಟ್ಟದ ನೀರು ಮಾರುವವನು

# ೪. ಅಂತ್ಯಕ್ರಿಯೆ

ನನಗೆ ಚೆನ್ನಾಗಿ ನೆನಪಿದೆ. ನಮ್ಮ ಮನೆಯಲ್ಲಿನ "ಶವದ ಪೆಟ್ಟಿಗೆ" ಗಳಿಗೆ ಬಣ್ಣ ಕೊಡಲು ಬಂದ ಕೆಲಸಗಾರರಿಗೆ ಅಜ್ಜಿ ಆಜ್ಞೆ ಕೊಡುತ್ತಿದ್ದರು. ಆರು "ಸಾವಿನ ಪೆಟ್ಟಿಗೆ" ನಮ್ಮ ಸಂಗ್ರಹದಲ್ಲಿ ಸಿದ್ಧವಾಗಿ ಇದ್ದವು. ಇವನ್ನು ನಮ್ಮ ನೆಂಟರು ಝುಚುಎನ್ ಪ್ರಾಂತದಿಂದ ತಂದ "ಝುವಾಟಂಗ್" ಮರದಿಂದ ಮಾಡಿದ್ದರು. ಕಿಯು-ಕಿಯಾಂಗ್‌ದಿಂದ "ಝುಚುಎನ್" ಪ್ರಾಂತ ಪಶ್ಚಿಮಕ್ಕೆ ನಾಲ್ಕಾರು ನೂರು ಮೈಲು ದೂರದಲ್ಲಿದೆ. ಆ ಕಾಲಕ್ಕೆ ಸಾರಿಗೆಯ ಸೌಕರ್ಯಗಳೂ ಚೆನ್ನಾಗಿ ಇರಲಿಲ್ಲ. ಮರವನ್ನು ಕಿಯು-ಕಿಯಾಂಗಕ್ಕೆ ತರಲು ನಾಲ್ಕು ತಿಂಗಳು ಹಿಡಿಯುತ್ತಿತ್ತು. ಕಾಲಕ್ಕೆ ಅಷ್ಟು ಮಹತ್ವ ಬಂದಿರಲಿಲ್ಲ ಆಗ.

"ಝುಚುಎನ್" ಗುಡ್ಡಗಾಡು ಪ್ರಾಂತ. ಅಲ್ಲಿ ತರತರದ ಮರ ದೊರೆಯುತ್ತದೆ. "ಝುವಾಟಂಗ್" ಮರ "ಶವದ ಪೆಟ್ಟಿಗೆ"ಗಳನ್ನು ತಯಾರು ಮಾಡಲಿಕ್ಕೆ ಶ್ರೇಷ್ಠವಾದದ್ದು. ನೆಲದಲ್ಲಿ ಹುಗಿದಿಟ್ಟರೂ ಈ ಮರ ನೂರಾರು ವರ್ಷ ಕೆಡದು. ಹಿಂದಿನ ಈಜಿಪ್ತ ದೇಶದ ಜನರು ಸತ್ತವರ ದೇಹವನ್ನು ಕಾದಿಡಬಯಸುತ್ತಿದ್ದಂತೆ ಚೀನೀ ಜನರೂ ಬಯಸು ತ್ತಾರೆ. ಆದರೆ ನಾವು ಈಜಿಪ್ತ ಜನರಂತೆ ಪಿರಮಿಡ್ಡುಗಳನ್ನು ಕಟ್ಟಲು ಹೋಗಲಿಲ್ಲ. ವಿಶಿಷ್ಟ ಜಾತಿಯ ಮರ ಮಾನವ ಮಾಂಸವನ್ನು ಒಂದು ಸಾವಿರ ವರ್ಷದವರೆಗೂ ಕೊಳೆಯದಂತೆ ಇರಿಸಬಲ್ಲದೆಂದೂ, ಒಂದು ಬಗೆಯ ವಜ್ರವನ್ನು ಸತ್ತವನ ಬಾಯಲ್ಲಿ ಹಾಕಿದರೆ ದೇಹ ಕೊಳೆಯದೆಂದೂ ಕೇಳಿದ್ದೇನೆ.

ಭಾವುಕ ಮಗ ತನ್ನ ತಂದೆ ತೀರಿದಾಗ ಇಂತಹದನ್ನೆಲ್ಲಾ ವಿಶ್ವಾಸ ದಿಂದ ಮಾಡುತ್ತಾನೆ. ನನ್ನ ತಂದೆ, ಚಿಕ್ಕಪ್ಪ ಇಬ್ಬರೂ ಝುಚುಎನ್ ಪ್ರಾಂತದಿಂದ ಝುವಾಟಿಂಗ್ ಮರವನ್ನು ತರಿಸಲು ಆಲೋಚಿಸುತ್ತಿದ್ದಾಗ ನಮ್ಮ ಅಜ್ಜ ಅಜ್ಜಿ ಅದು ಬಹಳ ತುಟ್ಟಿ, ಬೇಡ ಎಂದರು. ಆದರೆ ಆ ಮರ ತಂದು ನಮ್ಮ ತೋಟದಲ್ಲಿ ಆರು ಪೆಟ್ಟಿಗೆ ಸಿದ್ಧ ಮಾಡಿದಾಗ ತಮ್ಮ ಅಭಿಪ್ರಾಯವನ್ನು ಬದಲಿಸಿದರು. ಅಜ್ಜನಿಗೆ ತುಂಬ ಸಂತೋಷವಾಯಿತು. ಅಜ್ಜಿಗೆ ಈವರೆಗೂ ಬಾಳಿ ಬದುಕಿದ್ದು ಸಾರ್ಥಕವೆನಿಸಿತು.

ನಾನು ಆರು "ಶವದ ಪೆಟ್ಟಿಗೆ" ನೋಡಿದ ನೆನಪಿಲ್ಲ. ಮೂರು ಪೆಟ್ಟಿಗೆ ಮಾತ್ರ ನೋಡಿದ ನೆನಪು. ಅವನ್ನು ನಮ್ಮ ಶಾಲೆಯ ಪಕ್ಕ ದಲ್ಲಿಯೇ ಭದ್ರವಾಗಿ ಇರಿಸಿ ಕೀಲಿ ಹಾಕಿದ್ದರು. ಅವಕ್ಕೆ ಚೆನ್ನಾಗಿ ಕೆಂಪುಬಣ್ಣ ಹಚ್ಚಿದ್ದರು ಸಿಂಧೂರದ ಬಣ್ಣಕ್ಕೆ ಚೀನಾ ಹೆಸರಾದದ್ದು. ಅದನ್ನು ಇತರ ದೇಶಗಳಲ್ಲಿ ಚೀನಾ-ಕೆಂಪು ಎನ್ನುತ್ತಾರೆ. ಆ ಬಣ್ಣವನ್ನು ಎಷ್ಟು ಹೆಚ್ಚು ಬಳಿದರೆ ಅಷ್ಟು ದೀರ್ಘಕಾಲ ಆ ಮರ ಕೆಡದು. ಈ ಕಾರಣದಿಂದಲೇ ಪ್ರತಿ ಬೇಸಿಗೆಯಲ್ಲಿ ಅಜ್ಜಿ ಈ ಪೆಟ್ಟಿಗೆಗಳಿಗೆ ಚೆನ್ನಾಗಿ ಬಣ್ಣ ಹಾಕಿಸಿಡುತ್ತಿದ್ದಳು. ಬೇಸಿಗೆಯ ಪ್ರಾರಂಭದಲ್ಲಿ ಕಿಯು-ಕಿಯಾಂಗ್ ದಲ್ಲಿ ಬಿಸಿಲು ಕಡಮೆ. ಅಜ್ಜಿ "ಊ ಟಂಗ್" ಎಣ್ಣೆಯನ್ನೂ ಕೆಂಬಣ್ಣ ವನ್ನೂ ಸಾಕಷ್ಟು ಕೊಂಡು ತರಿಸುತ್ತಿದ್ದಳು. ಪೆಟ್ಟಿಗೆಗಳಿಗೆ ಬಣ್ಣ ಕೊಡಲು ಇಬ್ಬರು ಮೂವರು ಬರುತ್ತಿದ್ದರು. ಪೆಟ್ಟಿಗೆಯ ಬಾಗಿಲು ತೆಗೆದು ಇಡುತ್ತಿದ್ದರು, ಪೆಟ್ಟಿಗೆಯ ಒಳಗೆ ಬಿಸಿಲು ಬೀಳುವಂತೆ. ಇದಾದಮೇಲೆ ಬಣ್ಣ ಕೊಡುವ ಕೆಲಸ ಪ್ರಾರಂಭ. ನಮ್ಮ ಪೆಟ್ಟಿಗೆಗಳು ಉದ್ದ. ದೊಡ್ಡವು. ಅವರ ಹಲಗೆ ಒಂದು ಅಡಿ ದಪ್ಪ. ಇಬ್ಬರಾದರೂ ಅದನ್ನು ಅಲುಗಾಡಿಸ ಲಾರರು. ಇಂತಹ ಪೆಟ್ಟಿಗೆಗಳಿಗೆ ಬಣ್ಣ ಹಾಕಲು ಬಹಳ ದಿನ ಬೇಕಾಗು ತ್ತಿತ್ತು. ದಿನಕ್ಕೊಂದು ಸಲ ಅಜ್ಜಿ ಬಣ್ಣ ಕೊಡುವ ಸ್ಥಳಕ್ಕೆ ಹೋಗಿ ಚೆನ್ನಾಗಿ ಪರೀಕ್ಷಿಸಿ ಕೆಲಸಗಾರರೊಂದಿಗೆ ಚರ್ಚಿಸಿ, ಸಲಹೆ ಸೂಚನೆ ಕೊಟ್ಟು ಬರುತ್ತಿದ್ದಳು.

ಬಣ್ಣ ತಯಾರಿಸುವ ವಿಧಾನ ತುಂಬ ಕಷ್ಟದ್ದು. ಕೆಂಪು ಬಣ್ಣದ

ಮಣ್ಣನ್ನು ಚೆನ್ನಾಗಿ ಅರೆದು ಆ ನುಣ್ಣನೆ ಪುಡಿಯನ್ನು ನೀರಿನಲ್ಲಿ ಬೆರೆಸಿ ರೇಶಿಮೆಯ ಬಟ್ಟೆಯಲ್ಲಿ ಸೋಸುತ್ತಿದ್ದರು. ಉಳಿದುದನ್ನು ಮತ್ತೆ ಅರೆಸುತ್ತಿದ್ದರು. ಅನೇಕ ಸಲ ಹೀಗೆ ಮಾಡಬೇಕಾಗುತ್ತಿತ್ತು. ಸೋಸಿದಮೇಲೆ ಬಂದ ಬಣ್ಣದ ರಾಡಿಯನ್ನು ಒಣಗಿಸಿ ಪುಡಿಮಾಡಿ "ವೂ-ಟಂಗ್" ಎಣ್ಣೆಯಲ್ಲಿ ಕಲೆಸುತ್ತಿದ್ದರು. ಕೆಲಸಗಾರರಿಗೆ ಅನುಭವದಿಂದ ಪ್ರಮಾಣಗಳೆಲ್ಲ ತಾವಾಗಿ ಗೊತ್ತಾಗಿದ್ದವು. ಎಣ್ಣೆಯಲ್ಲಿ ಕೂಡಿಸಿದ ಮೇಲೆ ಅದನ್ನು ಸಾಕಷ್ಟು ಸಲ ಕೈಯಾಡಿಸುತ್ತಿದರು. ಈ ಬಣ್ಣ ಕಲೆಸುವುದು ನನಗೆ ತುಂಬಾ ಇಷ್ಟ.

ತಂದೆ ಕೂಡ ತಮ್ಮ ಚಿತ್ರಗಳಿಗೆ ಬೇಕಾದ ಬಣ್ಣವನ್ನು ಇದೇ ರೀತಿ ತಯಾರಿಸಿಕೊಳ್ಳುತ್ತಿದ್ದರು. "ವೂ ಟಂಗ್" ಎಣ್ಣೆಯ ಬದಲು "ಗಮ್" ಉಪಯೋಗಿಸುತ್ತಿದ್ದರು. ಒಂದು ಕಣವೂ ಕೂಡ ಕಾಣದಂತೆ ಈ ಮಣ್ಣು ನುಣ್ಣಗಾಗಬೇಕು. ನಮ್ಮ ಕೆಲಸಗಾರರು ತುಂಬಾ ಜಾಣರು. ಅವರ ಕೆಲಸ ಅಷ್ಟು ಚೆನ್ನಾಗಿತ್ತು.

ಅಜ್ಜಿ ಕೆಲಸಗಾರರೊಂದಿಗೆ ಕೆಲಸ ಮಾಡುತ್ತಿದ್ದಾಗ ಒಂದು ಸಲ ಆಪ್ತರು ಕೆಲವರು ಬಂದರು. ಸಾಯಂಕಾಲದ ಸಮಯ. ನಾನೇ ಅವರನ್ನು ಅಜ್ಜಿ ಇರುವಲ್ಲಿಗೆ ಕರೆದೊಯ್ದೆ. ನನ್ನೊಡನೆ ಬಂದ ಆಪ್ತರಿಗೂ ಅಜ್ಜಿಗೂ ಕ್ಷೇಮ ಸಮಾಚಾರದ ಮಾತು ನಡೆದವು ಆ ಆಪ್ತರಲ್ಲಿ ಒಬ್ಬಳು ಆಗಾಗ "ಹಾ ಫು-ಚಿ" (ಎಷ್ಟು ಸುದೈವಿಗಳು) ಅನ್ನುತ್ತಿದ್ದಳು. ಅವಳು ಆಡಿದ ಒಳ್ಳೇ ಮಾತಿಗೆ ಅಜ್ಜಿ ಕೃತಜ್ಞತೆ ವ್ಯಕ್ತಪಡಿಸಿ "ಸಾವಿನ ಮೊದಲು ಸಾವಿನ ತಯಾರಿ ನಡೆಯುವುದು ಒಳ್ಳೆಯವೆಂದೇ ಹೇಳಬಹುದು. ಸತ್ತ ಮೇಲೆ ಏನಾಗುವದೆಂಬುದನ್ನು ಯಾರುತಾನೆ ಹೇಳಬಲ್ಲರು. ಇರುವಾಗ ಮಾಡುವ ಕೆಲಸ ಸಾಕಷ್ಟಿರುವಾಗ ಸಾವಿನ ವಿಷಯ ಏಕೆ ಚಿಂತಿಸಬೇಕು? ಸಾವಿನ ವಿಚಾರ ಕುರಿತು ಕನ್‌ಫೂಸಿಯಸ್‌ನನ್ನು ಕೇಳಿದಾಗ, "ನನಗೆ ಜೀವನದ ವಿಷಯವೇ ಸಾಕಷ್ಟು ಗೊತ್ತಿಲ್ಲ, ಸಾವಿನ ವಿಷಯ ಗೊತ್ತಾಗಲು ಸಾಧ್ಯವೆ"ಎಂದು ಉತ್ತರ ಕೊಟ್ಟನಂತೆ. ಇದೇರೀತಿ ನಮಗೂ ಅನಿಸುತ್ತಿದೆ. ಸಾವು ತಪ್ಪಿಸಲು ಬಾರದು; ಸದಾ ಕರ್ಮನಿರತ ಜೀವನಕ್ಕೆ ಸಾವೇ ಸರಿಯಾದ ವಿಶ್ರಾಂತಿ. ನನ್ನ ಮಕ್ಕಳು ಈ ಶವದ ಪೆಟ್ಟಿಗೆಗಳನ್ನು

ತಯಾರು ಮಾಡಿಸಲು ಮರ ತರಿಸಬೇಕೆಂದಾಗ ನಮ್ಮಂಥವರಿಗೆ ಅದು ದುಂದುಗಾರಿಕೆ ಎಂದೆ. ಸಾವಿಗಿಂತ ಮೊದಲೇ ಸಾವಿನ ತಯಾರಿಗಾಗಿ ನಮ್ಮ ಅಮೌಲ್ಯ ವೇಳೆ ಹಾಳು ಮಾಡುವುದು ಜಾಣತನವಲ್ಲವೆನಿಸಿತು. ನನ್ನ ಮಾತನ್ನು ಮಕ್ಕಳು ಕೇಳಲಿಲ್ಲ. ಈಗ ಪ್ರತಿವರ್ಷ ಈ "ಶವದ ಪೆಟ್ಟಿಗೆ"ಗಳನ್ನು ನೋಡಿಕೊಳ್ಳುವುದೊಂದು ದೊಡ್ಡ ಕೆಲಸ" ಎಂದು ಬೇಸರ ಗೊಂಡು ಹೇಳಿದಳು.

ನಾನು ಅಡ್ಡಬಾಯಿ ಹಾಕಿ 'ಒಳ್ಳೇ ಕೆಲಸ ಎಂದು ಹೇಳಿದೆಯಲ್ಲ, ಅಜ್ಜಿ' ಎಂದೆ. ನನ್ನ ಈ ಅಧಿಕಪ್ರಸಂಗಕ್ಕೆ ತಕ್ಕ ಪ್ರತಿಫಲ ಕೂಡಲೇ ದೊರೆಯಿತು. ಅಲ್ಲಿಂದ ಆ ಕ್ಷಣಕ್ಕೆ ಹೊರಗೆ ಹಾಕಿಸಿಕೊಂಡೆನಲ್ಲದೆ ಹಿರಿಯರು ಮಾತನಾಡುವಾಗ ನಡುವೆ ಏಕೆ ಬಾಯಿ ಹಾಕಿದ್ದು ಎಂದು ಬೈಸಿಕೊಂಡೆ. ನಾನಿಲ್ಲದಾಗ ಅವರು ಯಾವ ನಿರ್ಣಯಕ್ಕೆ ಬಂದರೋ ನಾನರಿಯೆ. ನಮ್ಮ ಆ ನೆಂಟರಲ್ಲಿ ಒಬ್ಬಳು ತುಂಬಾ ಅತ್ತು ಕರೆದು ಹೋದಳೆಂದು ಅನಂತರ ಗೊತ್ತಾಯಿತು.

ಅವಳು ನಮ್ಮ ಅಜ್ಜಿಯ ಕಕ್ಕನ ಮಗಳು. ವಿಧವೆ. ಅಲ್ಲದೆ ಒಬ್ಬನೇ ಒಬ್ಬ ಪ್ರೀತಿಯ ದಕ್ಷ ಮಗ ಕಳೆದ ವರ್ಷವೇ ತೀರಿಕೊಂಡಿದ್ದನಂತೆ. ಅಜ್ಜಿ 'ಕು ಪೋಪೋ'ಳ ದುಃಖ ಮರುಕಳಿಸದಂತೆ ಸಾಕಷ್ಟು ಜಾಗ್ರತೆ ವಹಿಸಿದ್ದಳು. "ಶವದ ಪೆಟ್ಟಿಗೆ"ಯ ಪ್ರಸಂಗವನ್ನು ಮರೆಸಲು ಬೇರೆ ವಿಷಯಕ್ಕೆ ಅವಳ ಮನಸ್ಸನ್ನು ಸೆಳೆದಿದ್ದಳು. ಆದರೆ ಮಾನವ ಪ್ರಕೃತಿ ಎಂತಹ ಕ್ಷುಲ್ಲಕ ವಿಷಯಕ್ಕೂ ದುಃಖ ತಂದುಕೊಳ್ಳಬಲ್ಲದು. ಇದಕ್ಕೆ "ಕು ಪೋಪೋ" ಅಪವಾದವೇನಲ್ಲ. ತನ್ನ ಮಗ ಬದುಕಿದ್ದರೆ ತನಗೂ ಇಂತಹ ಅಥವಾ ಇದಕ್ಕೂ ಉತ್ತಮ "ಶವದ ಪೆಟ್ಟಿಗೆ" ಸಿಗುತ್ತಿತ್ತಲ್ಲ ಎನಿಸಿರಬೇಕು. ಐಶ್ವರ್ಯವಂತಳಾಗಿಯೂ ಅವಳ ಜೀವನದಲ್ಲಿ ಅತೃಪ್ತಿ ಇತ್ತು. ತಾನು ಇದಕ್ಕೂ ತೃಪ್ತಿಕರವಾಗಿ ಮಾಡಿಕೊಳ್ಳಬಹುದಾಗಿದ್ದರೂ, ತಾನಲ್ಲ ಅದನ್ನು ಮಾಡಿಕೊಳ್ಳುವುದು, ಮಕ್ಕಳು ತನಗೆ ಮಾಡುವ ಕೆಲಸ. ಹಣ ಕೊಟ್ಟು ಬೇಕಾದ್ದನ್ನು ಅವಳು ಕೊಳ್ಳಬಹುದಾಗಿತ್ತು. ಆದರೆ ಮಗ ಮಾಡಿಸಿದ್ದರಲ್ಲಿ ಇರುವ ಪ್ರೀತಿ, ಭಕ್ತಿ ಅದರಲ್ಲಿ ಬರುತ್ತದೆಯೆ? ತನ್ನ ಮಗನೇ ಬದುಕಿದ್ದು ಅಗ್ಗದ ಮರದಿಂದ ಮಾಡಿಸಿದ್ದರೂ ಆ ಭಕ್ತಿ,

ಗೌರವಗಳೇ ಬೇರೆ! ಪಶ್ಚಿಮದಲ್ಲಿ ತೋರಿಕೆಯಲ್ಲಿ ಇದಕ್ಕೆ ವಿರುದ್ಧ ಭಾವ ಕಂಡರೂ ಹಿನ್ನೆಲೆಯಲ್ಲಿ ಈ ಸ್ವಭಾವವೇ ನನಗೆ ಕಂಡುಬಂದಿದೆ.

ಹಿರಿಯರ ಮಾತಿನಲ್ಲಿ ಅಡ್ಡಬಾಯಿ ಹಾಕಿದ್ದೇನೋ ತಪ್ಪು. ಆದರೂ ನಾನು ಸತ್ಯವನ್ನೇ ಆಡಿದ್ದೆ. ಮಕ್ಕಳು ಹಿರಿಯರಿಗೆ ತೋರುವ ಸರಿಯಾದ ಗೌರವ ಇದು ಎಂದೂ ಹೇಳಿದ್ದಳು."ಮಕ್ಕಳಿಗಾಗಿ ತಂದೆ ತಾಯಿ ಎಷ್ಟು ಕಷ್ಟಪಡಬೇಕೋ ಈ ಚಿಕ್ಕ ವಯಸ್ಸಿನಲ್ಲಿ ನಿನಗೆ ತಿಳಿಯದು. ತಂದೆ ತಾಯಿ ಹೇಳಿದ ಮಾತನ್ನು ಮಕ್ಕಳು ಕೇಳರು. ಅದೆಲ್ಲವೂ ತಮ್ಮ ಹಿತ ಕ್ಕಾಗಿಯೇ ಎಂದು ಮುಂದೆ ಅವರಿಗೆ ಗೊತ್ತಾಗುವದು. ಗೊತ್ತಾದ ಮೇಲೆ ತಮ್ಮ ಕೃತಜ್ಞತೆ ತೋರಿಸಲು ಅವರು ತವಕಪಡುತ್ತಾರೆ. ಚಿಕ್ಕಮಕ್ಕಳನ್ನು ಸರಿಯಾಗಿ ನೋಡಿಕೊಂಡು ದೊಡ್ಡವರನ್ನಾಗಿ ಮಾಡುವುದು ತಂದೆತಾಯಿ ಗಳ ಕೆಲಸ. ಅವರು ಮುಪ್ಪಿನವರಾದಾಗ ಅವರನ್ನು ಆದರದಿಂದ, ಪ್ರೀತಿ ಯಿಂದ ನೋಡಿಕೊಳ್ಳುವುದು ಮಕ್ಕಳ ಕರ್ತವ್ಯ. ಇದೇ ಜೀವನ" ಎಂದು ಹೇಳಿದಳು.

ಆದರೇನು ಮಾಡುವುದು! ನನ್ನ ತಾಯಿ ಆಗಲೇ ತೀರಿಹೋಗಿದ್ದಳು. ನಾನಾಗ ತೀರ ಚಿಕ್ಕವನು. ಅಜ್ಜಿಗೆ ಕೊಟ್ಟ ವಚನವನ್ನು ಪಾಲಿಸುವಷ್ಟು ಪ್ರೌಢನಾಗಿರಲಿಲ್ಲ. ರೂಢಿ, ಪರಂಪರೆ ಬದಲಾದರೂ ಪ್ರೀತಿ ವಿಶ್ವಾಸಗಳು ಬದಲಾಗಲಾರವು. ನನಗೆ ಅವಕಾಶ ದೊರೆತಿದ್ದರೆ ನಾನೂ ನಮ್ಮ ಚೀನಾ ದೇಶದ ಹಳೇ ಪದ್ಧತಿಯಂತೆಯೇ ನಮ್ಮ ತಂದೆತಾಯಿಗಳನ್ನು ಭಕ್ತಿಯಿಂದ ನೋಡಿಕೊಳ್ಳುತ್ತಿದ್ದೆ.



ಮಕ್ಕಳ ಪುಸ್ತಕ ಮಾರುವವನು

# ೫. ತೊಂದರೆ ಕೊಡುವ ಕೂದಲು

ಚಿಕ್ಕವನಿರುವಾಗ ನನ್ನ ಕೂದಲು ಸದಾ ನನಗೆ ತೊಂದರೆ ಕೊಡುತ್ತಿತ್ತು. ದಿನಾ ಬೆಳಗ್ಗೆ ತಾಯಿಯ ಬಳಿಗೋ ಕೆಲಸದವಳ ಬಳಿಗೋ ಕೂದಲು ಬಾಚಿಸಿಕೊಳ್ಳಲು ಹೋಗಬೇಕಾಗುತ್ತಿತ್ತು, ನನ್ನ ತಾಯಿಗೆ ಅರ್ಧಾಂಗ ವಾಯು. ಸದಾ ಹಾಸಿಗೆಯಲ್ಲೇ. ಕೆಲಸದವಳು ಎಷ್ಟೇ ಚನ್ನಾಗಿ ಕೂದಲು ಕಟ್ಟುತ್ತಿದ್ದರೂ ಅವಕಾಶ ದೊರೆತಾಗೆಲ್ಲ ತಾನೇ ನನ್ನ ಕೂದಲು ಕಟ್ಟುತ್ತಿದ್ದಳು. ಕೂದಲು ಕಟ್ಟುವ ವಿಷಯ ತಾಯಿಗೆ ತುಂಬಾ ಗೊತ್ತಿತ್ತು. ಕೆಲಸದವಳು ಲೂ ಪರ್ವತದ ಆಕಡೆಯ ಸಿನ್‌ಝು ಜಿಲ್ಲೆಯವಳು. ಅದು ಕಿಯು ಕಿಯಾಂಗಿಗಿಂತ ತುಂಬಾ ಹಿಂದುಳಿದ ಜಿಲ್ಲೆ. ಕಿಯಾಂಗ್ಸಿ ಪ್ರಾಂತದ ಹೆಬ್ಬಾಗಿಲಿನಂತಿದ್ದ "ಕಿಯು ಕಿಯಾಂಗಿ"ನಲ್ಲಿ ನಾಗರಿಕತೆ ಹೆಚ್ಚು. ನೂರಾರು ವರ್ಷಗಳಿಂದ ಇದಕ್ಕೆ ಬಾಹ್ಯ ಸಂಸ್ಕೃತಿಯ ಸಂಪರ್ಕವಿತ್ತು. ಈಗಲೂ ಪೇಕಿಂಗ್ (ಈಗಿನ ಪೇಪಿಂಗ್), ನಾನ್‌ಕಿಂಗ್, ಶಾಂಘಾಯ್ ಅಥವಾ ಇತರ ಪಟ್ಟಣದ ರೀತಿಗಳು-ಬಟ್ಟೆ ಕೂದಲುಗಳಿಗೆ ಸಂಬಂಧಿಸಿದ್ದು - ಕಿಯು-ಕಿಯಾಂಗಿಗೆ ಬಹು ಬೇಗ ಹಬ್ಬುವವು. ಕಿಯಾಂಗ್ಸಿ ಪ್ರಾಂತಕ್ಕೆ ನಾಗರಿಕತೆ ಪ್ರವೇಶಿಸಲು ಇದೇ ದಾರಿ.

"ಸಿನ್ ಝು" ದೊಡ್ಡ ಜಿಲ್ಲೆಯಲ್ಲ. ಐಶ್ವರ್ಯವಂತವೂ ಅಲ್ಲ. ಅಲ್ಲಿಯ ಜನ ಹೆಚ್ಚಾಗಿ ಬೇಸಾಯಗಾರರು, ಪಿಂಗಾಣಿ ಕೆಲಸಗಾರರು. ಸರಳ ಜೀವನ. ನಾಗರಿಕತೆಯ ಮೆರುಗಿನ ಬದುಕನ್ನು ಮೆಚ್ಚರು. ಅಲ್ಲಿನ ಹೆಂಗಸರು "ಕಿಯು-ಕಿಯಾಂಗಿನ" ದೊಡ್ಡ ಮನೆತನಗಳಲ್ಲಿ ಕೆಲಸಕ್ಕೆ ಇದ್ದಾರೆ. ನಮ್ಮ ಕೆಲಸದವಳೂ ಅಲ್ಲಿಯವಳೇ. ನಮ್ಮೊಡನೆ ಇಪ್ಪತ್ತು

ವರ್ಷಗಳಿಂದ ಇದ್ದು ಹೊರ ಜಗತ್ತಿನೊಡನೆ ಸಂಪರ್ಕವೂ ಸಾಕಷ್ಟು ಬಂದಿದ್ದರೂ ಅವಳದು ಹಳೇ ಪದ್ಧತಿಯೇ. ಇದರಿಂದ ಅವಳು "ಕಿಯು ಕಿಯಾಂಗ್" ಹೆಂಗಸಲ್ಲ, ಬೇರೆ ಎಂದು ತಿಳಿಯುತ್ತಿತ್ತು. ನಮಗವಳು ತೀರ ವಿಚಿತ್ರವಾಗಿ ಕಂಡರೂ ಅವಳನ್ನು ನೋಡಿ ನಗುವ ಧೈರ್ಯ ಇರಲಿಲ್ಲ. ಅವಳ ನಿಷ್ಠೆಯ ಸೇವೆ ಅವಳಿಗೊಂದು ಗೌರವ ತಂದಿತ್ತು.

ಚೀನಾದಲ್ಲಿ ಮಗು ಹುಟ್ಟಿದ ಕೆಲವು ತಿಂಗಳಲ್ಲಿ ಅದರ ಮೃದುವಾದ ಕೆಂಪು ಬೆರೆತ ಕಪ್ಪಿನ ಹುಟ್ಟುಗೂದಲನ್ನು ಬೋಳಿಸಿಬಿಡುವರು. ಕೂದಲು ಕಪ್ಪಾಗಿ ದಪ್ಪವಾಗಿ ಬೆಳೆಯಬೇಕೆಂಬುದೇ ಉದ್ದೇಶ್ಯ. ಅಲ್ಲದೆ ಮುಂದೆ ಕೂದಲು ಉದುರುವುದಿಲ್ಲವಂತೆ. ಎರಡನೇ ಸಲ ಕೂದಲು ತೆಗೆಯಿಸುವಾಗ ಹಣೆಯ ಮೇಲ್ಭಾಗದಲ್ಲೋ ತಲೆಯ ಹಿಂಭಾಗದಲ್ಲೋ ತುಸು ಕೂದಲನ್ನು ಬಿಡುತ್ತಿದ್ದರು. ಕೆಲವು ಸಲ ಎರಡೂ ಕಿವಿಗಳ ಮೇಲೆ ಹಿಡಿ ಹಿಡಿ ಕೂದಲು ಬಿಡುತ್ತಾರೆ. ಹಿಂದೆ ಮುಂದೆ ೩-೪ ಸ್ಥಳಗಳಲ್ಲಿ ಹಿಡಿ ಕೂದಲು ಬಿಡುವುದೂ ಉಂಟು. ತಲೆಯ ಮೇಲ್ಭಾಗದ ಮಧ್ಯ ಬೋಳಿಸಿ ಸುತ್ತಲೂ ದುಂಡಗೆ ಕೂದಲು ಬಿಡುವುದೂ ಉಂಟು. ಸಾಮಾನ್ಯವಾಗಿ ಗಂಡು ಹುಡುಗರಿಗೆ ಒಂದೆರಡು ಹಿಡಿ ಕೂದಲನ್ನು ಬಿಟ್ಟರೆ ಹೆಣ್ಣು ಹುಡುಗಿಯರಿಗೆ ತುಂಬಾ ತೆರತೆರನಾಗಿ ಕೂದಲು ಬಿಡುವುದುಂಟು.

ಅದೇಕೋ ಗೊತ್ತಿಲ್ಲ, ನನಗೆ ಮೂರುಕಡೆ ಕೂದಲು ಬಿಟ್ಟಿದ್ದರು. ಎರಡೂ ಕಿವಿಗಳ ಮೇಲೆ, ಹಿಂದುಗಡೆ. ದಿನವೂ ನಾನು ತಾಯಿಯ ಮುಂದೆ ನಿಂತು ಹೆಳಲು ಹಾಕಿಸಿಕೊಳ್ಳುವ ತೊಂದರೆ ಅನುಭವಿಸಲೇ ಬೇಕಾಗುತ್ತಿತ್ತು. ಅಂದ ಚಂದದ ರಿಬ್ಬನ್ ಕಟ್ಟುತ್ತಿದ್ದುದರಿಂದ ಕೂದಲು ತುಂಬಾ ಚಂದ ಕಾಣುತ್ತಿರಬೇಕು. ಆದರೆ ಅದರಿಂದ ನನಗೇನಾಗಬೇಕು? ಅನೇಕಸಲ ತಪ್ಪಿಸಿಕೊಂಡು ಹೋಗುವಾಗ ತಾಯಿಯ ಕೈಗೆ ಸಿಕ್ಕಿಬಿದ್ದು ಚೆನ್ನಾಗಿ ಕೆನ್ನೆಯಮೇಲೆ ಹೊಡೆಸಿಕೊಂಡ ನೆನಪೂ ಇದೆ.

ಈಗಲೂ ನಾನು ಕೂದಲನ್ನು ಬ್ರಷ್ಷಿನಿಂದ ಹಿಕ್ಕಿಕೊಳ್ಳುವಾಗ ತಾಯಿಯ ನೆನಪಾಗಿ, ಹೆಚ್ಚು ವಿಧೇಯನಾಗಿ ಇರಲೇಬೇಕಾಗಿತ್ತು ಅನಿಸುತ್ತಿದೆ. ಈ ನನ್ನ ತಪ್ಪನ್ನು ತಿದ್ದಿಕೊಳ್ಳುವದಕ್ಕೆಂದು ಒಳ್ಳೇ ಆಜ್ಞಾಧಾರಕ ಮಗನಾಗಿ ಸೇವೆಗೈಯಬೇಕೆನಿಸುವ ಹೊತ್ತಿಗಾಗಲೇ

ತಾಯಿ ಇಲ್ಲದಾಗಿದ್ದಳು. ತಾಯಿ ಹೇಗೆ ಕಾಣುತ್ತಿದ್ದಳೆಂಬ ನೆನಪೂ ಈಗ ನನಗೆ ಇಲ್ಲ.

ಕೂದಲು ನನಗೆ ಎಷ್ಟು ಕಷ್ಟ ಕೊಡುತ್ತಿದ್ದವೆಂದರೆ: ಹಿರಿಯರಿಂದ ಅನೇಕ ಆಟಗಳನ್ನು ಕಲಿತೆವು. ಎಷ್ಟೋ ಸಲ ಕೂಡಿ ಆಡುತ್ತಿದ್ದೆವು. ಆಟಗಳಿಗೆ ಇಲ್ಲದ ಆಡಂಬರದ ಸಾಮಾನು ಬೇಕಾಗುತ್ತಿರಲಿಲ್ಲ. ಒಂದು ಹಾಡಿನ ಮೇಳಕ್ಕೆ ಕೈ ಕಾಲು ಆಡಿಸುತ್ತ ಆಡುತ್ತಿದ್ದೆವು. ಈ ಆಟಗಳನ್ನು ಹಿರಿಯರು ಮೆಚ್ಚುತ್ತಿರಲಿಲ್ಲ. ವಯಸ್ಸಿನಲ್ಲಿ ಹಿರಿಯರಾದ ಹುಡುಗರು ಈ ಆಟಗಳನ್ನು ಬೇರೆ ಮನೆಯಲ್ಲಿ ಕಲಿತು ಬಂದು ನಮಗೆ ತೋರಿಸುತ್ತಿದ್ದರು. ನಮ್ಮ ಮನೆಯಲ್ಲಿ ಓಡುವದಕ್ಕೆ ಸಾಕಷ್ಟು ವಿಶಾಲ ಸ್ಥಳವಿದ್ದುದರಿಂದ ನಾನು ಹೆಚ್ಚಾಗಿ ಕೋಲು-ಕುದುರೆ ಆಟ ಆಡುತ್ತಿದ್ದೆ.

ಈ ಆಟದಲ್ಲಿ ಕುದುರೆ ಒಂದು ಬಿದಿರು ಕೋಲು. ಉಳಿದ ಮಕ್ಕಳಿಗಿಂತ ನಾನು ಗಿಡ್ಡ, ತೆಳುವು. ಆದುದರಿಂದ ನನ್ನ ಕೋಲು ಚಿಕ್ಕದು. ಕೋಲನ್ನು ಎರಡೂ ಕಾಲುಗಳ ಮಧ್ಯ ಇರಿಸಿಕೊಂಡು ಎಡಗೈಯಿಂದ ಅದರ ಮುಂದಿನ ತುದಿ ಹಿಡಿದು ಬಲಗೈಯಲ್ಲಿ ಚಾಟಿ ಹಿಡಿದು ಕುದುರೆ ನಡೆಸುತ್ತಿರುವಂತೆ ಮಾಡುತ್ತಿದ್ದೆ. ಕುದುರೆ ಜೋರಾಗಿ ಹೋಗಲಿ ಎಂದು ಕೂಗುತ್ತಿದ್ದೆ. ಕೋಲು-ಕುದುರೆ ಏರಿದ ಕೇವಲ ೩-೪ ಚಿಕ್ಕ ಸವಾರರು ನಾವು, ನಿಜವಾದ ಕುದುರೆಯನ್ನೇರಿ ಹೊರಟ ಸೈನಿಕರ ಒಂದು ಪಡೆಗಿಂತ ಹೆಚ್ಚು ಶಬ್ದ ಮಾಡುತ್ತಿದ್ದೆವು ನಮ್ಮ ದಾರಿಯ ಮಧ್ಯೆ ಯಾರೂ ಬರುವಂತಿರಲಿಲ್ಲ. ಕೋಲಿನ ತುದಿಗೆ ಕಟ್ಟಿಕೊಳ್ಳಲು ಕಾಗದದ "ಕುದುರೆ ಮುಖ" ಕೊಂಡು ಕೊಡಲು ಹಿರಿಯರು ಸಿದ್ಧರಿದ್ದರು. ಆದರೆ ನಮ್ಮ ತಂದೆ ಬಡಿಗರನ್ನು ಕರೆಯಿಸಿ ಹತ್ತು ಕುದುರೆ ಮುಖ ಮಾಡಿಸಿಕೊಟ್ಟರು! ಅವು ಕುದುರೆಯಂತೆ ಕಾಣಿಸುತ್ತಿರಲಿಲ್ಲ. ನಮ್ಮ ಆಟಕ್ಕೆ ಸಾಕಿತ್ತು.

ಇದೇ ಆಟವನ್ನು ಇನ್ನೊಂದು ರೀತಿ ಆಡುತ್ತಿದ್ದೆವು. ನನ್ನೊಬ್ಬ ಕಕ್ಕನ ಮಗ ಈ ಆಟವನ್ನು ನಮಗೆ ಕಲಿಸಿದ. ಎಲ್ಲಿಯೋ ನೋಡಿ ಬಂದಿರಬೇಕು. ಆಟನಲ್ಲಿ ನನಗೆ ಮೂರು ಜುಟ್ಟುಗಳಿದ್ದುದರಿಂದ ನಾನು ಕುದುರೆ ಮುಖವಾಗುತ್ತಿದ್ದೆ. ಇನ್ನೊಬ್ಬರು ತುಸು ಗಟ್ಟಿಯಾಗಿದ್ದವರು ನನ್ನ ಬೆನ್ನಹಿಂದೆ ಬಾಗಿ ನಿಂತು ಕೈಗಳಿಂದ ನನ್ನ ಭುಜ ಹಿಡಿಧು

ಕುದುರೆಯು ವೈ ಆಗುತ್ತಿದ್ದರು. ಮತ್ತೊಬ್ಬ ಈ ಕುದುರೆ ಏರಿ ಸವಾರ ನಾಗುತ್ತಿದ್ದ. ನನ್ನ ಹಿಂದಿನ ಜುಟ್ಟಿಗೆ ದಾರ ಕಟ್ಟಿ ಹಿಡಿದು ಅದನ್ನು ಲಗಾಮಿನಂತೆ ಉಪಯೋಗಿಸುತ್ತಿದ್ದರು. ಎರಡೂ ಬದಿಯ ನನ್ನ ಜುಟ್ಟು ಅಥವಾ ಜುಲಪಿ ಕುದುರೆಯ ಕಿವಿ. ಸವಾರಿ ಮಾಡುವ ಸರದಾರನಿಗೇನೋ ಈ ಆಟ ತುಂಬಾ ತಮಾಷೆ. ಆದರೆ ಕುದುರೆಯಾದವನಿಗೂ ಮುಖ ವಾಗಿದ್ದ ನನಗೂ ಚಿತ್ರಹಿಂಸೆ. ಉಳಿದವರು ಪಾಳಿಯ ಪ್ರಕಾರ ಸವಾರಿ ಮಾಡುತ್ತಿದ್ದರು. ನನಗೆ ಮಾತ್ರ ಸವಾರಿ ಮಾಡುವ ಸಂದರ್ಭ ಬರುತ್ತಲೇ ಇರಲಿಲ್ಲ. ಆದ್ದರಿಂದ ನಾನು ಈ ಆಟ ಬೇಡ ಎಂದೇ ಹಟ ಹಿಡಿಯುತ್ತಿದ್ದೆ.

ನನ್ನ ಸುದೈವಕ್ಕೆ ನಮ್ಮ ಕಕ್ಕನೊಬ್ಬ ಈ ಗೋಳನ್ನು ನೋಡಿ ಈ ಆಟ ಆಡಕೂಡದೆಂದು ನಿಲ್ಲಿಸಿಬಿಟ್ಟ. ನನ್ನ ಕಷ್ಟಕ್ಕಿಂತ ಹೆಚ್ಚಾಗಿ ಸವಾರಿ ಮಾಡುವವರು ಬಿದ್ದು ಪೆಟ್ಟು ತಿಂದಾರು ಎಂದು ನಿಲ್ಲಿಸಿದರು. ಇದನ್ನು ಬರೆಯುವಾಗ ಕೂಡ ಆ ಹಿಂಸೆಯ ನೆನಪಾಗಿ ಅದನ್ನು ಕಡಮೆ ಮಾಡಿಕೊಳ್ಳಲು ನನ್ನ ಕೈ ಹಿಂದಕ್ಕೆ ಹೋಗುತ್ತವೆ.

ತಾಯಿ ತೀರಿಹೋದ ಮೇಲೆ ಅಕ್ಕ ನನಗೆ ಜಡೆ ಹಾಕತೊಡಗಿದಳು. ಜುಟ್ಟು ಹೆಚ್ಚು ಬೆಳೆಯಿತು. ಏಳು ವರ್ಷದವನಾದಾಗ ಮೂರು ಜಡೆಗಳ ಬದಲು ಮೂರನ್ನೂ ಕೂಡಿಸಿ ಒಂದೇ ಜಡೆಯಾಯಿತು. ಆಮೇಲೆ ಕೇವಲ ಎರಡು ವರ್ಷಗಳ ನಂತರ ಚೀನಾ ದೇಶದಲ್ಲಿ ಕ್ರಾಂತಿಯಾಯಿತು. ಮಂಚೂ ವಂಶವನ್ನು ಉರುಳಿಸುವ ಚಳುವಳಿ "ಕಿಯು-ಕಿಯಾಂಗಿ"ಗೂ ಮುಟ್ಟಿತು. ನಮ್ಮ ಮನೆಯ ಹಿರಿಯರೆಲ್ಲ ದಂಗೆ, ದರೋಡೆ, ಕೊಲೆ, ಸುಲಿಗೆಗಳಾಗಬಹುದೆಂದು ಮುದುಕರಾದ ಅಜ್ಜ, ಅಜ್ಜಿ, ದೊಡ್ಡಪ್ಪ, ದೊಡ್ಡಮ್ಮ ಎಲ್ಲರನ್ನೂ ಚಿಕ್ಕ ಮಕ್ಕಳನ್ನೂ ಹಳ್ಳಿಗೆ ಕಳಿಸಿಕೊಟ್ಟರು. ನಮ್ಮ ಪರಂಪರೆಯಂತೆ ನನಗೆ ಹತ್ತು ವರ್ಷವಾಗುವವರೆಗೂ ಮನೆ ಬಿಟ್ಟು ಹೊರಗೆಲ್ಲಿಗೂ ಕಳಿಸಲು ಬರುವಂತಿರಲಿಲ್ಲ. ಆದರೆ ಈ ವಿಶೇಷ ಪ್ರಸಂಗ ದಲ್ಲಿ ಒಂಭತ್ತು ವರ್ಷಕ್ಕೇ ನನ್ನನ್ನು ಹೊರಗೆ ಕಳಿಸಬೇಕಾಗಿ ಬಂತು. ಹಳ್ಳಿಯಲ್ಲಿ ನಮಗೆ ಮನೆ ಇರಲಿಲ್ಲ. ನಮ್ಮ ಹೊಲಗಳನ್ನು ಮಾಡುವ ರೈತನೊಬ್ಬನ ಮನೆಯನ್ನು ನಮಗಾಗಿ ತೆರವು ಮಾಡಿಸಲಾಯಿತು. ನಮ್ಮಲ್ಲಿ ಕೆಲವರು ಹತ್ತಿರದ ಇನ್ನೊಂದು ಹಳ್ಳಿಗೆ ಹೋದರು. ಲೂ

ಪರ್ವತದ ಅಡಿಯಲ್ಲಿದ್ದವರ ಜೊತೆಯಲ್ಲಿ ನಾನಿದ್ದೆ. ಇಲ್ಲಿಯೇ ನನಗೆ ಹಳ್ಳಿಯ ಜೀವನದ ಸವಿ ಕಂಡದ್ದು. ಅದಿನಿಂದ ಇಂದಿನವರೆಗೂ ನನಗೆ ನಿಸರ್ಗವೆಂದರೆ ಆನಂದ.

ಕ್ರಾಂತಿ ಏಕಾಯಿತೋ ನಮಗೆ ತಿಳಿಯದು. ಆದರೆ ಒಂದರಿಂದ ನಮಗೆ ಸಂತೋಷವಾಯಿತು. ನಮ್ಮ ಜುಟ್ಟು ಕತ್ತರಿಸಬೇಕೆಂದು ಅಪ್ಪಣೆ ಯಾಯಿತು. ಒಬ್ಬ ಹಜಾಮನನ್ನು ಈ ಕೆಲಸಕ್ಕಾಗಿ ಹಳ್ಳಿಯ ಮನೆಗೆ ಕಳಿಸಿಕೊಟ್ಟಳು ಅಜ್ಜಿ. ಈ ಉತ್ಸವದ ಆಚರಣೆಗೆಂದು ಪಟಾಕಿಯನ್ನೂ ಕಳಿಸಿದ್ದಳು. ನಮಗೆ ಮೃಷ್ಟಾನ್ನ ಭೋಜನ ದೊರೆಯಿತು. ಜುಟ್ಟು ಕತ್ತರಿಸಿದ ಮೇಲೆ ನಾನು ಕನ್ನಡಿಯಲ್ಲಿ ನೋಡಿಕೊಂಡಾಗ ನನ್ನ ಮುಖ ತೀರಾ ವಿಚಿತ್ರವಾಗಿ ಕಂಡಿತು. ಆದರೆ ದಿನಾ ಬೆಳಿಗ್ಗೆ ನಾನು ಪಡಬೇಕಾ ಗಿದ್ದ ಚಿತ್ರಹಿಂಸೆ ತಪ್ಪಿತಲ್ಲ ಎಂದು ಕ್ರಾಂತಿಯನ್ನು ಸ್ವಾಗತಿಸಿದೆವು.

ಊರಿನ ಗೋಡೆಯೊಳಗಡೆ ಇದ್ದ ಜನರೆಲ್ಲ ತಮ್ಮ ಜುಟ್ಟು ಕತ್ತರಿಸಿ ಕೊಂಡರೆಂದು ಕೇಳಿದೆವು. ಇಲ್ಲದಿದ್ದರೆ ಜುಟ್ಟು ಕತ್ತರಿಸಿಹಾಕಲು ಕ್ರಾಂತಿ ವೀರರು ಕತ್ತರಿ ಹಿಡಿದು ಸಿದ್ಧವಾಗಿ ನಿಂತಿದ್ದರು. ಹಳ್ಳಿಯಿಂದ ಪಟ್ಟಣ ದೊಳಕ್ಕೆ ಬರುವ ಜನರ ಜುಟ್ಟು ಕತ್ತರಿಸಿದೆಯೋ ಇಲ್ಲವೋ ನೋಡಲು ಊರ ಸುತ್ತಲಿದ್ದ ಗೋಡೆಯ ಎಲ್ಲಾ ಬಾಗಿಲುಗಳಲ್ಲಿ ಇಬ್ಬಿಬ್ಬರನ್ನು ಕಾವಲು ನಿಲ್ಲಿಸಲಾಗಿತ್ತು.

ನಮ್ಮ ರೈತರು ಕಟ್ಟಿಗೆ ಮಾರಿಕೊಂಡು ಬರಲು ದಿನವೂ ಪಟ್ಟಣಕ್ಕೆ ಬರುತ್ತಿದ್ದರು. ಅವರೂ ತಮ್ಮ ಜಡೆ ಕಳೆದುಕೊಂಡರು. ಅವರಲ್ಲಿ "ಶುನ್‌ಷಿನ್" ಎಂಬ ಒಕ್ಕಲಿಗ ಪೂರ್ವಾಚಾರ ಪ್ರಿಯ. ದಿನಾ ಬೆಳಿಗ್ಗೆ ಪಟ್ಟಣಕ್ಕೆ ಹೋಗಿ ಬರುತ್ತಿದ್ದ. ಜಡೆ ಕತ್ತರಿಸುವರೆಂದು ಕೇಳಿ ಅವನು ಪಟ್ಟಣಕ್ಕೆ ಹೋಗಲು ತುಂಬಾ ಬೇಸರಪಟ್ಟುಕೊಂಡ. ಕೊನೆಗೊಮ್ಮೆ ಪಟ್ಟಣಕ್ಕೆ ಹೋಗಲೇಬೇಕಾಯಿತು. ತಿರುಗಿ ಬರುವಾಗ ಕತ್ತರಿಸಿದ ಜಡೆಯನ್ನು ಕೈಯಲ್ಲಿ ಹಿಡಿದುಕೊಂಡು ದೊಡ್ಡ ದನಿ ತೆಗೆದು ಅಳುತ್ತ ಮನೆಗೆ ಬಂದ. ನಾವದನ್ನು ನೋಡಿ ಆಗ ತುಂಬಾ ನಕ್ಕೆವು. ಈ ಪರಿ ತುಂಬಾ ತೊಂದರೆ ಕೊಡುವ ಕೂದಲನ್ನು ಕತ್ತರಿಸಿದರೆ ದುಃಖವೇಕೆ ಎಂದು ನಾನು ಕೇಳಿದೆ. ಅದಕ್ಕೆ ಅವನು ಕನಫೂಷಿಯಸ್ ತನ್ನ ಶಿಷ್ಯ

ಟ್ಸೆಂಗ್ ಟೂಗೆ ಹೇಳಿದ ಪ್ರಕಾರ "ತಂದೆ ತಾಯಿಗಳಿಂದ ನಮಗೆ ದೊರೆತ ದೇಹಕ್ಕೆ-ಕೂದಲಿಗೆ ಯಾವ ಅಪಾಯವೂ ಆಗದಂತೆ ಇಟ್ಟುಕೊಳ್ಳಬೇಕು. ಇಟ್ಟುಕೊಳ್ಳದಿದ್ದರೆ ಅವರಿಗೆ ಅವಿಧೇಯರಾಗಿದ್ದಂತೆ" ಎಂದು ಹೇಳಿದನ್ನು ಹೇಳಿದ. "ಶುನ್‌ಷಿನ್" ಕಲಿತವನಲ್ಲ. ಆದರೆ ನಿತ್ಯದ ಮಾತುಕತೆಗಳಲ್ಲಿ ಕಾನ್‌ಫೂಷಿಯಸ್ಸನ, ಆತನ ಶಿಷ್ಯರ ಹೇಳಿಕೆಗಳನ್ನು ಸದಾ ಉದಹರಿಸುತ್ತಿದ್ದ. ಅವು ಅವನಿಗೆ ಗೊತ್ತಿದ್ದವು. ಅವನು ಅವುಗಳಂತೆ ತಪ್ಪದೇ ನಡೆಯಲು ಪ್ರಯತ್ನಿಸುತ್ತಿದ್ದ.

ನಾನು ಈ ರೀತಿ ಹೆಳಲು ಹಾಕಿಸಿಕೊಳ್ಳಲು ಬೇಸರಪಟ್ಟರೆ ನನ್ನ ಅಕ್ಕನೂ ಕಕ್ಕನ ಹೆಣ್ಣು ಮಕ್ಕಳೂ ಸಂತೋಷದಿಂದ ಗಂಟೆ ಗಂಟೆ ಇದಕ್ಕೆ ಕಾಲ ಕಳೆಯುತ್ತಿದ್ದರು. ಒಂದುದಿನ ಕೇಳಿದೆ: ಹೆಳಲು ಹಾಕಿಸಿಕೊಳ್ಳುವಾಗ ಕೂದಲು ನೋಯುವುದಿಲ್ಲವೆ? ಅದಕ್ಕವಳು "ಇದು ನೋವೇ? ಆದಷ್ಟು ಚೆನ್ನಾಗಿ ಅಂದವಾಗಿ ಕಾಣುವಂತೆ ಕೂದಲು ಬಾಚಿಕೊಂಡು ಹೆಳಲು ಹಾಕಿಸಿಕೊಳ್ಳಬೇಕೆಂದು ನನಗೆ ಅನಿಸುತ್ತದೆ" ಎಂದಳು. ದಿನವೂ ಕೂದಲು ತೊಳೆದುಕೊಳ್ಳಲು ನಮ್ಮಕ್ಕ ಒಂದು ಬಗೆಯ ಎಣ್ಣೆಯನ್ನು ಬಳಸುತ್ತಿದ್ದಳು. ಏನೋ ಬೇರುಗಳನ್ನು ನೀರಿನಲ್ಲಿ ನೆನೆಹಾಕಿ ಆ ಎಣ್ಣೆಯನ್ನು ಮಾಡುತ್ತಿದ್ದಳು. ಕೂದಲು ಬಾಚಿಕೊಂಡಾದ ಮೇಲೆ ಅಕ್ಕ ಬ್ರಷ್ಷಿನಿಂದ ಈ ಎಣ್ಣೆ ಹಚ್ಚಿ ಮತ್ತೆ ಬಾಚಿಕೊಳ್ಳುತ್ತಿದ್ದಳು. ಆಮೇಲೆ ಹೆಳಲು ಹಾಕಿಕೊಳ್ಳುತ್ತಿದ್ದಳು. ನಾನು ಚಿಕ್ಕ ಹುಡುಗ. ಜಡೆಯ ಮಾದರಿಗಳೆಷ್ಟೋ ನನಗೆ ಗೊತ್ತಿಲ್ಲ.

ಮನೆಮನೆಗೆ ಹೋಗಿ ಅಂದವಾಗಿ ಜಡೆ ಹಾಕುವ ಹೆಂಗಸರೂ ಕೆಲವರು ಇದ್ದರು. ಕಾಲಕ್ಕೆ ತಕ್ಕಂತೆ ಅವರು ಅಲಂಕಾರ ಮಾಡುತ್ತಿದ್ದರು. ಗಂಡಸರಿಗೆ ತಿಂಗಳಲ್ಲಿ ಎರಡು ಮೂರು ಸಲ ಕ್ಷೌರದವನು ಬರುತ್ತಿದ್ದ. ಜಡೆ ಹಾಕುವ ಕಲೆಯನ್ನು ಬಲ್ಲ ಹೆಂಗಸರು ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಬರುತ್ತಿದ್ದರು.

ನಮ್ಮ ಅಕ್ಕ ಮಾಡಿದ ಎಣ್ಣೆ ಕೂದಲನ್ನು ಕಪ್ಪಗೆ ಮಾಡುವುದಲ್ಲದೆ ಅದಕ್ಕೆ ಮಿಂಚೂ ಕೊಡುತ್ತದೆ. ಕಪ್ಪು ಕೂದಲು ಹೆಂಗಸರಿಗೆ ಬಹಳ ಚೆನ್ನ. ಕೂದಲು ಮತ್ತಷ್ಟು ಕಪ್ಪಾಗಿ ಕಾಣುವಂತೆ ಯಾವ ಪ್ರಯತ್ನವನ್ನು

ಬೇಕಾದರೂ ಹೆಂಗಸರು ಮಾಡಿಕೊಳ್ಳುತ್ತಾರೆ. ಈ ಎಣ್ಣೆ ಮಾಡಲು ಉಪಯೋಗಿಸುವ ಗಿಡ ಮೂಲಿಕೆಗಳ ಹೆಸರು ನನಗೆ ಗೊತ್ತಿಲ್ಲ. ನಮ್ಮ ಮನೆಯ ಹೆಂಗಸರು "ಚಹಾದ ಬೀಜ"ದಿಂದ ತಯಾರಾದ ಎಣ್ಣೆಯನ್ನು ಉಪಯೋಗಿಸುತ್ತಾರೆ.

ನಮ್ಮ ಆಪ್ತರ ಹೆಂಗಸರು ಮನೆಗೆ ಬಂದರೆ ಅವರೂ ನನ್ನ ಅಕ್ಕ ತಂಗಿಯರೂ ಯಾರ ಕೂದಲು ಹೆಚ್ಚು ಕಪ್ಪು, ಹೆಚ್ಚು ಉದ್ದ ಎಂದು ಪೈಪೋಟಿ ಮಾಡುತ್ತಿದ್ದರು. ಇದು ನನಗೆ ತುಂಬಾ ವಿಚಿತ್ರವೆನಿಸುತ್ತಿತ್ತು. ನಮ್ಮ ಹಿಂದಿನ ಕವಿಗಳು ಉದ್ದವಾದ ಕಪ್ಪು ಕೂದಲನ್ನು ಅತಿಯಾಗಿ ವರ್ಣಿಸಿ, ಅದರ ಪರಿಣಾಮ ನಮ್ಮ ದೇಶದ ಜನರ ಮನಸ್ಸಿನ ಮೇಲೆ ಆಗಿತ್ತು. ಅಂದ ಚೆಂದಕ್ಕೆ ದೀರ್ಘ ಕೃಷ್ಣ ಕೇಶರಾಶಿ ಅಗತ್ಯ ಎಂಬ ಭಾವನೆಯುಂಟಾಗಿದೆ. ತಮ್ಮ ತುರುಬನ್ನೂ ನೀಳವಾಗಿ ಬೀಳುವ ಜಡೆಯ ಗಾತ್ರವನ್ನೂ ಹೆಚ್ಚಿಸಿಕೊಳ್ಳಲು ನಮ್ಮ ಹೆಂಗಸರು ಅನೇಕ ಉಪಾಯ ಮಾಡುತ್ತಾರೆ. ಕತ್ತರಿಸಿದ ಕೂದಲು, ತೀರ ತೆಳ್ಳಗೆ ಹಾಕಿಕೊಂಡ ಜಡೆ, ಸುಂದರವಾಗಿ ಕಾಣಬಹುದು ಎನಿಸಲೇ ಇಲ್ಲ ಅವರಿಗೆ.

ನನ್ನ ಅಕ್ಕನಿಗೆ ಹದಿನೈದು ವರ್ಷವಾಯಿತು. ಜಡೆ ಹಾಕುವುದನ್ನು ಬಿಟ್ಟು ತುರುಬು ಕಟ್ಟಿಕೊಳ್ಳಲು ನಮ್ಮ ಅಜ್ಜಿ ಹೇಳಿದಳು. ಅಕ್ಕ ದೊಡ್ಡವಳಾದಳು. ಇದು ಸೂಚನೆ. ಇನ್ನು ಚಿಕ್ಕ ಮಕ್ಕಳಾದ ನಮ್ಮೊಂದಿಗೆ ಕೂಡಿ ಕಲೆತು ಆಟವಾಡುವಂತಿಲ್ಲ. ಈ ಕೊರತೆ ಅವಳು ಮನೆಯ ಹಿರಿಯ ಜನರಲ್ಲಿ ಸೇರಿ ದೊರೆತ ಗೌರವದಿಂದ ತುಂಬಿಬರುತ್ತಿತ್ತು.

ಕಿಯು-ಕಿಯಾಂಗಿನಲ್ಲಿ ಅಮೆರಿಕದ ಮಿಷನರಿಗಳು ತೆರೆದ ಒಂದು ಹೆಣ್ಣು ಮಕ್ಕಳ ಶಾಲೆಯಿದೆ. ಆ ಶಾಲೆಗೆ ಕಲಿಯಲು ಹೋದ ನಮ್ಮ ಮನೆಯ ಹುಡುಗಿಯರಲ್ಲಿ ಅಕ್ಕನೇ ಮೊದಲಿನವಳು. ಆದರೂ ಮನೆಯಲ್ಲಿದ್ದಾಗ ಅವಳು ಒಳಗೇ ಇರಬೇಕಾಗುತ್ತಿತ್ತು. ನಾವು ಅವಳನ್ನು ಆಟದ ಬಯಲಿನಲ್ಲಿ ಹೆಚ್ಚಾಗಿ ಕಂಡದ್ದೇ ಇಲ್ಲ. ತುರುಬು ಕಟ್ಟಿಕೊಂಡು ಮೊದಲು ಅವಳು ಕಾಣಿಸಿಕೊಂಡಾಗ ಅವಳಿಗೆ ಏನೋ ನಾಚಿಕೆ. ನನಗಿನ್ನೂ ನೆನಪಿದೆ. "ದೊಡ್ಡವಳಾದೆ. ಇನ್ನು ಮದುವೆಯಾಗಿ ಮಕ್ಕಳನ್ನು ಹೆರಬೇಕು" ಎನ್ನುತ್ತಿದ್ದರು ಹಿರಿಯರೆಲ್ಲರೂ.

ದೊಡ್ಡವಳಂತೆ ಅವಳು ನಮ್ಮ ಸಂಗಡ ಮಾತಾಡಿದರೆ ನಾನವಳನ್ನು ಅಣಕಿಸಿ ಕಳುಸುತ್ತಿದ್ದೆ. ಆವಳಿಗೆ ನನ್ನಮೇಲೆ ಮೊದಲಿಗಿಂತ ಈಗ ಹೆಚ್ಚು ಅಧಿಕಾರವಿದೆಯೆಂದೂ ನನಗೆ ಅನಿಸದಿರಲಿಲ್ಲ. ಈ ಪರಿವರ್ತನೆ ಗೆಲ್ಲಾ ಕೂದಲಿನ ತೊಂದರೆಯೇ ಕಾರಣ.



ಹಿಟ್ಟಿನ ರೊಟ್ಟಿ ಮಾರುವವನು

# ೬. ದುಡುಕು ಫಲಕಾರಿಯಲ್ಲ

ನಾನು ಚಿತ್ರಕಾರನಾಗಲು, ಕಲೆಯಲ್ಲಿ ನನಗೆ ಅಭಿರುಚಿ ಉಂಟಾಗಲು ನನ್ನ ಬಾಲ್ಯದ ವಾತಾವರಣವೇ ಕಾರಣವಿರಬೇಕು. ಆನುವಂಶಿಕವಾಗಿ ಬಂದಿರಲೂ ಬಹುದು. ನಮ್ಮ ಅಣ್ಣ ಒಂದು ಗೆರೆಯನ್ನೂ ಎಳೆದಿಲ್ಲ. ಆತ ಕವಿ. ಕಲೆಯನ್ನು ತುಂಬಾ ಪ್ರೀತಿಸುತ್ತಿದ್ದ. ಅಕ್ಕನಿಗೋ ಅಂದವಾಗಿ ಅಕ್ಷರ ಬರೆಯಲೂ ಬರುತ್ತಿರಲಿಲ್ಲ. ಹೆಚ್ಚಾಗಿ ಅವಳು ಬರೆದೇ ಇಲ್ಲ.

ಹನ್ನೆರಡು ವರ್ಷ ಆಗುವ ಮೊದಲೇ ನಾನು ಚಿತ್ರ ಬರೆಯಲು ಪ್ರಾರಂಭಿಸಿದೆ. ಅದಕ್ಕೂ ಮೊದಲೇ ತಂದೆ ಚಿತ್ರ ಬರೆಯುವಾಗ ಅವರ ಕೋಣೆಗೆ ಹೋಗಿ ನೋಡಿ ನಲಿಯುತ್ತಿದ್ದೆ. ತಂದೆಗೆ ತನ್ನ ಆ ಚಿಕ್ಕ ಕೋಣೆ ಎಂದರೆ ತುಂಬಾ ಪ್ರೀತಿ. ಅಲ್ಲಿ ಅವರಿಗೆ ಬೇಕೆಂದಾಗ ಚಿತ್ರ ಚಿತ್ರಿಸಲು ಅವಕಾಶವಿತ್ತು. ಅವರು ತಾಯಿಯನ್ನು ತುಂಬಾ ಪ್ರೀತಿಸುತ್ತಿದ್ದರು. ಆಕೆಯ ಸಾವಿನಿಂದ ಅವರಿಗೆ ಅತೀವ ದುಃಖವಾಗಿತ್ತು. ಎರಡೇ ಅವರಿಗೆ ಸಮಾಧಾನ ಕೊಟ್ಟದ್ದು ; ಕುಡಿತ, ಚಿತ್ರ.

ತಂದೆಯ ಕೋಣೆ ಎಷ್ಟು ಸ್ವಚ್ಛವಾಗಿತ್ತೆಂದು ಬಣ್ಣಿಸಲಾರೆ. ಗೋಡೆಯ ಮೇಲೆ ಸುಪ್ರಸಿದ್ಧ ಚಿತ್ರಕಾರರ ಒಂದೆರಡು ಚಿತ್ರ ತೂಗಾಡುತ್ತಿದ್ದವು. ಆಗಾಗ ಈ ಚಿತ್ರಗಳನ್ನು ಬದಲಾಯಿಸುತ್ತಿದ್ದರು. ಅಲ್ಲಿ ಒಂದು ಬೀರುವಿನಲ್ಲಿ ಗೊಂಬೆಗಳು, ಗೊಂಬೆಯ ಪುಸ್ತಕಗಳು ಇದ್ದವು. ತಂದೆಯವರಿಗೆ ಹೂಗಳೆಂದರೂ ಹಕ್ಕಿಗಳೆಂದರೂ ಬಹಳ ಇಷ್ಟ. ಅಂಥ ಪುಸ್ತಕಗಳನ್ನೇ ಸಂಗ್ರಹಿಸಿದ್ದರು. ಈ ಪುಸ್ತಕಗಳೂ ಚಿತ್ರಗಳೂ ನನಗೆ ನಿಸರ್ಗದ ಹಾಗೇ ಅನಿಸುತ್ತಿದ್ದವು. ಬೇಸರ ಬಂದಾಗ ಈ ಕೋಣೆಗೆ

ಬಂದು ಆ ಗೊಂಬೆಗಳನ್ನೆಲ್ಲಾ ನೋಡುತ್ತಿದ್ದೆ. ಚಿತ್ರದ ಕೊಂಬೆಗಳ ಮೇಲಿದ್ದ ಪಕ್ಷಿಗಳ ಇಂಚರ ನನ್ನ ಕಿವಿಗೆ ಕೇಳಿಸಿದಂತಾಗುತ್ತಿತ್ತು. ಚಿತ್ರದ ಆ ಹೂಗಳು ನನ್ನನ್ನು ನೋಡಿ ಮುಗುಳು ನಗೆ ಬೀರುತ್ತಿದ್ದವು. ಒಮ್ಮೆ ನಾನು ಈ ರೀತಿ ನನ್ನೊಳಗೇ ಮಗ್ನನಾಗಿದ್ದೆ. ಕಿಟಕಿಯಿಂದ ತಂದೆಯವರು ನನ್ನನ್ನೇ ನೋಡುತ್ತಿದ್ದರು. ತುಸು ಹೊತ್ತಿನ ಮೇಲೆ ನಾನು ಕತ್ತೆತ್ತಿ ನೋಡಿದೆ. ಕಿಟಕಿಯಲ್ಲಿ ತಂದೆ ಕಾಣಿಸಿದರು. ಏನು ನೋಡುತ್ತೀ ಎಂದು ಕೇಳುವಂತೆ ಅವರು ನಗುತ್ತ ಒಳಗೆ ಬಂದರು. ಆಗ ನನಗೆ ಎಂಟು ವರ್ಷ.

ಇದಾದ ಮೇಲ ತಾವು ಚಿತ್ರ ಬರೆದು ಬಣ್ಣಕೊಡುವಾಗ ನೋಡ ಬೇಕೆಂದು ನನ್ನನ್ನು ಕರೆಯುತ್ತಿದ್ದರು. ಕಾಗದದ ಮೇಲೆ ಕುಂಚ ಇರಿಸುವ ಮೊದಲು ಬಹಳ ವಿಚಾರ ಮಾಡುತ್ತಿದ್ದರು. ಕೆಲವು ಸಲ ತುಂಬಾ ಹೊತ್ತು ಧ್ಯಾನಮಾಡುತ್ತ ಕುಳಿತರೂ ಚಿತ್ರವನ್ನೇ ಬರೆಯುತ್ತಿರಲಿಲ್ಲ. ಅವರು ಬಣ್ಣ ಕೊಟ್ಟು ಕುಂಚವನ್ನು ಕೆಳಗಿಟ್ಟ ಮೇಲೆ ನನಗೆ ಅದನ್ನು ಹಿಡಿದು ಚಿತ್ರಿಸ ಬೇಕು ಎನಿಸುತ್ತಿತ್ತು. ಅದಕ್ಕೆ ಅನುಮತಿ ಕೊಡುತ್ತಿದ್ದರು. ಆದರೆ ಶಾಲೆ ಯಲ್ಲಿ ಅಕ್ಷರಗಳನ್ನೂ ಅಂದವಾಗಿ ಬರೆಯಲು ಕಲಿ ಎನ್ನುತ್ತಿದ್ದರು. ನಾನು ದಿನಾ ಶಾಲೆಯಲ್ಲಿ ಬರೆದ ಬರೆವಣಿಗೆ ಪುಸ್ತಕಗಳನ್ನು ತಂದೆಯವರಿಗೆ ತೋರಿಸು ತ್ತಿದ್ದೆ. ನಮ್ಮ ಮನೆಯ ಶಾಲೆಯ ಶಿಕ್ಷಕರಿಗೆ ಅವರೂ ಏನಾದರೂ ಹೇಳಿರ ಬೇಕು.

ಆ ದಿನಗಳಲ್ಲಿ ಅವರು ನನಗೆ ಚಿತ್ರ ಬರೆಯುವದನ್ನು ಪ್ರತ್ಯಕ್ಷವಾಗಿ ಕಲಿಸಲೇ ಇಲ್ಲ. ನಾನಾಗಿಯೇ ಚಿತ್ರ ತೆಗೆಯುತ್ತ ಕುಳಿತಾಗ ನನ್ನ ಹಿಂದೆ ನಿಂತು ನೋಡಿ "ಇನ್ನೂ ದೊಡ್ಡವನಾಗಬೇಕು" ಎನ್ನುತ್ತಿದ್ದರು. ಎಂದೂ ನನ್ನ ಪ್ರಯತ್ನವನ್ನು ನಿಂದಿಸಲಿಲ್ಲ. ಬಣ್ಣಗಳನ್ನು ತಯಾರು ಮಾಡುವ ದನ್ನು ನನಗೆ ಶ್ರದ್ಧೆಯಿಂದ ಕಲಿಸಿದರು. ಈ ಬಣ್ಣಗಳೆಲ್ಲ ಅದುರಿನಿಂದ ತೆಗೆದ ಮಣ್ಣಿನ ಪುಡಿಗಳಾದರೂ ಅವನ್ನು ಮತ್ತಷ್ಟು ನುಣ್ಣಗೆ ಅರೆಯಬೇಕಾಗು ತ್ತಿತ್ತು. ಕಾಗದದ ಮೇಲೆ, ರೇಶಿಮೆ ಬಟ್ಟೆಯ ಮೇಲೆ, ಬಣ್ಣ ಹಾಕಲು ಬಣ್ಣದ ಪುಡಿಗಳನ್ನು ನುಣ್ಣಗೆ ಮಾಡಬೇಕು. ಒಂದು ಚಿಕ್ಕ ಯಂತ್ರವನ್ನು ತಂದೆಯವರು ಇಟ್ಟುಕೊಂಡಿದ್ದರು. ಒಂದು ಸಲ ಬಣ್ಣವನ್ನು ಚನ್ನಾಗಿ

ಪುಡಿಮಾಡಿ, ಮೊದಲು ಬಣ್ಣದ ಪುಡಿಯನ್ನು ಮೇಜಿನ ಮೇಲೆ ಇಡುವ ಕೆಲಸವನ್ನು ನನಗೆ ಹೇಳುತ್ತಿದ್ದರು. ಮುಂದೆ ಪುಡಿಮಾಡುವ, ಶೋಧಿಸುವ ಕೆಲಸವೂ ನನಗೆ ಬಂತು. ಕುಂಚ ಹಿಡಿದು ಚಿತ್ರ ತೆಗೆಯುವ ಮೊದಲು ನನಗೆ ಬಣ್ಣ ತಯಾರಿಸಿಕೊಳ್ಳುವ ಕಲೆ ಗೊತ್ತಾಯಿತು.

ಅತಿ ಸೂಕ್ಷ್ಮವಾಗಿ ಚಿತ್ರಿಸುವುದಿದ್ದರೆ ಮೊದಲು ಕಾಗದದ ಮೇಲೋ, ರೇಶಿಮೆಯ ಮೇಲೋ ತಂದೆ ಚಿತ್ರದ ಮುಂಗುರುತನ್ನು ಹಾಕಿಕೊಳ್ಳುತ್ತಿದ್ದರು. ಈ ರೀತಿ ಗುರುತನ್ನು ಹಾಕಿಕೊಳ್ಳುವುದಕ್ಕೆ ಇದ್ದಲಿಯನ್ನು ಉಪಯೋಗಿಸ ಕೂಡದು. ಇದ್ದಲಿ ತುಂಬ ಬಿರುಸಾದ ಪದಾರ್ಥ. ಇದರ ಬದಲು ಗಿಡದ ಎಳೆಯ ರೆಂಬೆಯ ತುದಿಗಳನ್ನು ಮೊನೆಯಾಗುವಂತೆ ಸುಡುತ್ತಿದ್ದರು. ಬಣ್ಣ ಹಾಕುವುದು ಮುಗಿದನಂತರ ಈ ರೆಂಬೆ ತುದಿಯ ಕಪ್ಪು ಗುರುತುಗಳನ್ನು ಕೊಡಹಿ ತೆಗೆಯುವುದು ಸುಲಭ ಇದೇ ರೆಂಬೆಗಳನ್ನೇ ನನ್ನ ಅಕ್ಕ ತನ್ನ ಹುಬ್ಬನ್ನು ತಿದ್ದಿಕೊಳ್ಳಲು ಉಪಯೋಗಿಸಿಕೊಳ್ಳುತ್ತಿದ್ದಳು.

ಹೂಗಳೊಂದಿಗೆ ಪಾತರಗಿತ್ತಿಯನ್ನೂ ಚಿತ್ರಿಸುವುದರಲ್ಲಿ ನಮ್ಮ ತಂದೆ ಎತ್ತಿದ ಕೈ ಇದಕ್ಕೆ ಅವರದೇ ಒಂದು ಉಪಕ್ರಮವಿತ್ತು ಅದರಲ್ಲಿಯೂ ಕೆಂಪು ಚಿಕ್ಕೆಗಳುಳ್ಳ ಪಾತರಗಿತ್ತಿಯಂತೂ ಅವರ ಕೈಯ ಪವಾಡ. "ವ್ಯಾಂಗ-ಚಾ" ಎಂಬ ರೇಶಿಮೆಯನ್ನು ಸುಟ್ಟು ಪಾತರಗಿತ್ತಿಯ ಪಕ್ಕಗಳಿಗೆ ಬಣ್ಣ ಹಾಕುತ್ತಿದ್ದರು. ಕಪ್ಪುಬಣ್ಣದಿಂದ ಕಳಗೊಂಡು ನಿಜವಾದ ಪಕ್ಕಗಳಂತೆ ಅಸಿನುತ್ತಿದ್ದವು.

ನಮ್ಮ ತಂದೆಯವರಿಂದ ನಾನು ಚಿತ್ರಕಲೆಯ ಪಾಠವನ್ನು ಪ್ರತ್ಯಕ್ಷ ಹೇಳಿಸಿಕೊಂಡ ನೆನಪು ನನಗಿಲ್ಲ ತಾನು ಚಿತ್ರ ಚಿತ್ರಿಸುವಾಗಿ ಅದನ್ನು ಎವೆ ಇಕ್ಕದೆ ನೋಡಲು ಮಾತ್ರ ಹೇಳುತ್ತಿದ್ದರು. ನನ್ನ ಮನಸ್ಸಿಗೆ ಬಂದುದನ್ನು ನಾನು ಚಿತ್ರಿಸುವ ಸ್ವಾತಂತ್ರ್ಯ ಇತ್ತು. ಇಂಥದೇ ಚಿತ್ರ ಚಿತ್ರಿಸಬೇಕು ಅಥವಾ ಹೂವಿನ, ಹಕ್ಕಿಯ ಚಿತ್ರ ಚಿತ್ರಿಸುವಾಗ ಹೀಗೆ ಪ್ರಾರಂಭಿಸಬೇಕು ಎಂದು ಯಾವಾಗಲೂ ಅವರು ಹೇಳಿಕೊಡಲಿಲ್ಲ. ಅವರು ಚಿತ್ರಿಸುವುದನ್ನು ನೋಡುತ್ತ ಹೋದಂತೆ ನನಗೂ ಚಿತ್ರಕಲೆಯ ರಹಸ್ಯ ಗೊತ್ತಾಗ ಹತ್ತಿತು. ಆದರೆ ಪ್ರತ್ಯಕ್ಷ ಚಿತ್ರ ಬಿಡಿಸಲು ಪ್ರಾರಂಭಿಸಿದಾಗ ನನ್ನ ತಪ್ಪು ನನಗೆ ಕಂಡು ಬಂತು. ಪ್ರತಿ ಪ್ರಯತ್ನಕ್ಕೂ ಎಡೆತಡೆ ಹೆಚ್ಚಾದಂತೆ ತೋರಿತು. ತಂದೆ

ಯುವರನ್ನು ಸಹಾಯಮಾಡಲು ಕೇಳಿಕೊಂಡೆ. ಅವರು ಮುಗುಳುನಗೆ ನಕ್ಕು "ನಾನು ಚಿತ್ರಿಸುವುದನ್ನು ಮತ್ತಷ್ಟು ಚೆನ್ನಾಗಿ ನೋಡು" ಎಂದರು. ನಾನೆಲ್ಲಿ ತಪ್ಪಿದೆನೆಂಬುದನ್ನು ಅವರೆಂದೂ ತೋರಿಸಿಕೊಡಲಿಲ್ಲ. ನನಗೆ ಹನ್ನೆರಡು ಆಗುವವರೆಗೂ ನನ್ನ ಚಿತ್ರಗಳನ್ನು ತಿದ್ದಲಿಲ್ಲ. ಆಮೇಲೆ ನಾನು ಚಿತ್ರ ತೋರಿಸಿದಾಗ ಯಾವ ಅಂಶಗಳನ್ನು ಇನ್ನೂ ಚೆನ್ನಾಗಿ ತಿಳಿದುಕೊಳ್ಳಬೇಕೋ ಹೇಳುತ್ತಿದ್ದರು. ಹೀಗೇ ಹಲವು ದಿನ ಕಳೆದಂತೆ ನನಗೆ ಚಿತ್ರ ಬರೆಯಲು ಪ್ರಾರಂಭಿಸುವ ಸರಿಯಾದ ಕ್ರಮ ಗೊತ್ತಾಯಿತು. "ತಿಳಿದವನು ಎಂದೂ ಒಮ್ಮೆ ಮಾಡಿದ ತಪ್ಪನ್ನು ಮತ್ತೆ ಮಾಡುವುದಿಲ್ಲ." "ತನ್ನದು ತಪ್ಪು ಎಂದು ತಿಳಿದ ಮೇಲೆ ಅದನ್ನು ತಿದ್ದಿಕೊಳ್ಳಲು ಯಾರೂ ಹೆದರಕೂಡದು" ಕಾನ್ ಫೂಸಿಯಸ್ ನ ಈ ಎರಡು ವಾಕ್ಯಗಳನ್ನು ಉದಾಹರಿಸುತ್ತಿದ್ದರು. ಮುತ್ತಿನಂತಹ ಈ ಎರಡು ಮಾತು ನಾನು ತುಂಬಾ ಜಾಗೃತನಾಗಿ ನೋಡುವಂತೆಯೂ ಸಂಪೂರ್ಣವಾಗಿ ಕಲಿತುಕೊಳ್ಳುವಂತೆಯೂ ಮಾಡಿದವು.

ಕಲೆಯ ಅಭ್ಯಾಸದ ಜೊತೆಗೆ, ಒಬ್ಬ ಪ್ರಸಿದ್ಧ ಕಲೆಗಾರ ಚಿತ್ರ ಚಿತ್ರಿಸುತ್ತಿರುವುದನ್ನು ನೋಡುವುದೂ ಶ್ರೇಷ್ಠ ಕಲಾಕೃತಿಯ ಸೃಷ್ಟಿಗೆ ತೀರ ಅವಶ್ಯ ಎಂಬುದು ತಂದೆಯವರ ಸಿದ್ಧಾಂತ. ಸುಪ್ರಸಿದ್ಧ ಕಲೆಗಾರರ ಕಲೆಯಲ್ಲಿಯೂ ಅವರು ಬಣ್ಣ ಹಾಕುವ ರೀತಿಯಲ್ಲಿಯೂ ಮನಸ್ಸು ಮೊದಲು ಮಗ್ನವಾಗಬೇಕು. ಬಣ್ಣ ಹಾಕುವುದು ಗೊತ್ತಾದಮೇಲೆ ಚಿತ್ರಕಾರನಿಗೆ ನಿಸರ್ಗದಿಂದಲೇ ಅನೇಕ ವಿಷಯ ತಿಳಿದುಬರುತ್ತವೆ. ಕಲೆಯ ವಿಚಾರವಾಗಿ ಮಾತನಾಡುವುದು ತಂದೆಯವರಿಗೆ ಸೇರುತ್ತಿರಲಿಲ್ಲ. ಹಿಂದಿನ ಯಾವ ಶ್ರೇಷ್ಠ ಕಲೆಗಾರನೂ ತಾನು ಚಿತ್ರ ಬರೆದುದು ಹೇಗೋ ಹೇಳಿಲ್ಲ. ಉಳಿದವರು ಇದನ್ನು ತಿಳಿಸಿಕೊಡಬಲ್ಲರೆ ?

ತಂದೆಯವರು ತಮ್ಮ ಗುರುವನ್ನು ತಾವೇ ಆರಿಸಿಕೊಂಡರು. ಆ ಗುರುಗಳನ್ನು ಕುರಿತು ಅಜ್ಜಿ ಅನೇಕ ವಿಚಿತ್ರ ಕತೆ ಹೇಳುತ್ತಿದ್ದಳು. ಅವರ ಹೆಸರು "ಷೂ–ಷೆಂಗ–ಹೂಯಾ." ಅವರು ಒಂದು ಬೌದ್ಧ ಮಂದಿರದಲ್ಲಿ ಚಿತ್ರಿಸುತ್ತಿರುವುದನ್ನು ನಮ್ಮ ತಂದೆ ಕಂಡರು. ಅವರ ಮನಸ್ಸಿಗೆ ಚೆನ್ನಾಗಿ ಹಿಡಿಯಿತು. ಕೂಡಲೇ ಮನೆಗೆ ಹೋಗಿ ಅವರನ್ನು ತನ್ನ ಗುರು ಎಂದು ಕರೆತರಲೇ ಎಂದು ತಾಯಿ ತಂದೆಯನ್ನು ಕೇಳಿಕೊಂಡರು. ಆದರೆ ನಮ್ಮ ಮನೆಗೆ ಬಂದು ಇರಲು

ಷೂ-ಷೆಂಗ ಹೂಯಾ ಕೂಡಲೇ ಒಪ್ಪಿಕೊಳ್ಳಲಿಲ್ಲ. ಕೆಲವೊಂದು ಕರಾರುಗಳ ಮೇಲೆ ಕೊನೆಗೆ ಒಪ್ಪಿಕೊಂಡರು. ತೀರ ಬಡವರಾಗಿದ್ದರೂ ಅವರಿಗೆ ಹಣದ ಮೇಲೆ ಗಮನವಿರಲಿಲ್ಲ. ಅವರಿಗೆ ಬೇಕಾದದ್ದು ಸಂಪೂರ್ಣ ಸ್ವಾತಂತ್ರ್ಯ. ನಮ್ಮ ಹಿರಿಯರಿಗೆ ದಿನಾ ನಮಸ್ಕರಿಸುವ ನಿಯಮ ಅವರ ಪಾಲಿಗೆ ಇಲ್ಲ. ತಮಗೆ ಬೇಕಾದಾಗ, ಬೇಕೆನಿಸಿದಂತೆ ಊಟ ಮಾಡುವ ಸ್ವಾತಂತ್ರ್ಯವನ್ನು ಅವರಿಗೆ ಕೊಡಲಾಗಿತ್ತು. ಅವರು ನಮ್ಮ ಮನೆಗೆ ಬಂದ ಮೇಲೆ ತಂದೆ ನಮ್ಮ ಅಜ್ಜನೊಂದಿಗೆ ಊಟ ಮಾಡಿದ್ದು ವಿರಳ. ತಂದೆ ತಮ್ಮ ಗುರುಗಳಿಗೆ ತೋರುವಷ್ಟು ಭಕ್ತಿಭಾವವನ್ನು ಅಜ್ಜನಿಗೆ ತೋರಿಸುತ್ತಿಲ್ಲವೆಂದು ಅಜ್ಜಿ ಹೇಳುತ್ತಿದ್ದಳು. ತನ್ನ ಗುರುಗಳು ಚಿತ್ರಿಸುತ್ತಿರುವಾಗ ಬೇಕಾದಷ್ಟು ಹೊತ್ತು ನಮ್ಮ ತಂದೆ ಸಂತೋಷದಿಂದ ನೋಡುತ್ತ ನಿಂತರೆ, ಅಜ್ಜನ ಬಳಿ ಕ್ಷಣ ಕಾಲ ನಿಲ್ಲುವಷ್ಟರಲ್ಲಿ ಏನೋ ನೆವ ಹೇಳಿ ತಮ್ಮ ಚಿತ್ರಕ್ಕೇ ಮರುಳುತ್ತಿದ್ದರು.

"ಷೂ-ಷೆಂಗ-ಹೂಯಾ" ಒಳ್ಳೇ ಚಿತ್ರಕಾರ. ಜನರ ಮುಖಚಿತ್ರ ಬರೆಯುವುದೇ ಆತನ ವೈಶಿಷ್ಟ್ಯ. ನಮ್ಮ ಮನೆತುಂಬ ಆತ ಬಿಡಿಸಿದ ಅಜ್ಜ, ಅಜ್ಜಿ, ತಂದೆ, ಇನ್ನೂ ಇತರರ ಅನೇಕ ಚಿತ್ರಗಳಿವೆ. ಆತ ಹೂಗಳನ್ನೂ ಚೆನ್ನಾಗಿ ಚಿತ್ರಿಸುತ್ತಿದ್ದರು.

"ಷೂ-ಷೆಂಗ-ಹೂಯಾ"ನ ಕಲೆಯ ರೀತಿಯನ್ನು ತಂದೆ ನನಗೆ ವರ್ಣಿಸಿ ಹೇಳುತ್ತಿದ್ದರು. ಗುರುಗಳನ್ನು ಯಾವ ಪ್ರಶ್ನೆ ಕೇಳಲೂ ಅವರಿಗೆ ಧೈರ್ಯ ವಾಗುತ್ತಿರಲಿಲ್ಲವಂತೆ. ಏನಾದರೂ ಕೇಳಿದರೆ, ಅವರು ಏಕೆ ಚೆನ್ನಾಗಿ ನೋಡುವ ದಿಲ್ಲ ಎಂದು ಗದರಿಸುತ್ತಿದ್ದರಂತೆ. ಪುಣ್ಯಕ್ಕೆ ನನ್ನನ್ನು ನಮ್ಮ ತಂದೆ ಎಂದೂ ಹೊಡೆಯಲಿಲ್ಲ. ಮುಗುಳು ನಗೆ ನಕ್ಕು "ಚೆನ್ನಾಗಿ ನೋಡು" ಎಂದು ಹೇಳು ತ್ತಿದ್ದರು. ನಾನೆಂದಾದರೂ ಚಿತ್ರವನ್ನು ಅವಸರದಿಂದ ಮುಗಿಸಹೋದರೆ ತಂದೆ ಅದನ್ನು ತಡೆದು "ದುಡುಕು ಫಲಕಾರಿಯಲ್ಲ' ಎಂಬ ಗಾದೆಯನ್ನು ಹೇಳುತ್ತಿದ್ದರು. ನಾನು ಈವರೆಗೂ ಈ ಗಾದೆಯನ್ನು ಮರೆತಿಲ್ಲ.

ನಾನು ಈವರೆಗೂ ಚಿತ್ರಕಲೆಯ ಗಂಧವನ್ನು ಕೂಡ ಅರಿತಿಲ್ಲ; ಏನಾದರೂ ಅರಿತಿದ್ದರೆ ಅದಕ್ಕೆ ನಮ್ಮ ತಂದೆ ಹಾಕಿದ ಭದ್ರವಾದ ತಳಹದಿ, ಅವರು ತೋರಿದ ತಾಳ್ಮೆಗಳೇ ಕಾರಣ.

ಸುಖವಾಗಿ ಬಾಳನ್ನು ನಡಸಬೇಕು ಎಂದು ತಂದೆಯವರ ನಂಬಿಕೆ. ಆದರೆ ನಮ್ಮ ತಾಯಿಯ ಸಾವನ್ನು ಮರೆಯುವುದು ಅವರಿಗೆ ಕೊನೆಗೂ ಆಗಲಿಲ್ಲ. ಅವರ ಜೀವನ ದೃಷ್ಟಿಗೆ ದುಃಖದ ಪೊರೆ ಬಂದಿತ್ತು. ಕೊನೆಗೆ ನೀಗಲು ಬಾರದ ಈ ವಿರಹದಿಂದಲೇ ಪ್ರಾಣ ನೀಗಿದರು. ಮೂರು ವರ್ಷ ತಾಯಿ ಹಾಸಿಗೆ ಹಿಡಿದಾಗ ತಂದೆಯವರೇ ಸೇವೆಮಾಡಿದರಂತೆ. ತಾನೇ ಆಕೆಯ ಚಿತ್ರ ಬರೆದು, ಅದರ ಎದುರಿಗೆ ನಿಂತು ನಿಟ್ಟುಸಿರು ಬಿಟ್ಟುದನ್ನು ನಾನು ನೋಡಿದೇನೆ. ಅಣ್ಣ, ಅಕ್ಕ, ನಾನು, ಮೂವರು ಅವರಿಗೆ ಸಂತಾನ. ನಮ್ಮನ್ನು ಚೆನ್ನಾಗಿ ಪ್ರೀತಿಸುತ್ತಿದ್ದರು ನಾವು ಯಾರೂ ತಂದೆಯ ಈ ಹಾನಿಯನ್ನು ತುಂಬಿಕೊಡಲಾಗಲಿಲ್ಲ ತಾಯಿಯ ಸಾವಿನೊಂದಿಗೆ ತಂದೆಯ ಜೀವನದ ಕಳೆಯೇ ಹೋಯಿತು ಅವರು ನನಗೆ ಕೊಟ್ಟ ಶಿಕ್ಷಣ ನನ್ನ ಮನಸ್ಸಿಗೆ ಚೆನ್ನಾಗಿ ಹಿಡಿಯಿತು ಎಂಬುದನ್ನು ತೋರಿಸುವ ಮೊದಲೇ ಅವರು ಇಲ್ಲವಾಗಿದ್ದರು



ಬೀಸಣಿಗೆ ಮಾರುವವನು

# ೭. ವಿಚಿತ್ರ ವ್ಯಾಪಾರ

ಹೊಸ ವರ್ಷದ ಹಬ್ಬದ ತಯಾರಿಯನ್ನು ನೆನೆದರೆ ಅದು ನಿಜವಾಗಿ ಎಷ್ಟು ಅದ್ಭುತವಾಗಿತ್ತು ಎಂದು ಈಗ ನನಗೆ ಅನಿಸುತ್ತದೆ. ೧೯೧೨ ರ ಕ್ರಾಂತಿಯನಂತರ ನಾವು ಅಂಗೀಕರಿಸಿದ ಇಂಗ್ಲೀಷ್ ಕ್ಯಾಲೆಂಡರ್‌ಗಿಂತ ಒಂದು ತಿಂಗಳು ತಡೆದು ಚೀನಾದ ಹೊಸ ವರ್ಷದ ಹಬ್ಬ ಬರುತ್ತದೆ. ಇನ್ನೂ ಒಂದು ತಿಂಗಳು ಇದೆ ಎನ್ನುವಾಗಲೇ ಹಬ್ಬದ ಕೆಲಸ ಪ್ರಾರಂಭ. ಪ್ರತಿ ಕುಟುಂಬವೂ ಒಂದು ವರ್ಷದ ಆಹಾರ ಸಂಗ್ರಹ ಮಾಡಿಕೊಳ್ಳಬೇಕು. ದೊಡ್ಡ ಸಂಸಾರಗಳು ಅದಕ್ಕೆ ತಕ್ಕಂತೆ, ಗಂಡ ಹೆಂಡಿರಿಬ್ಬರೇ ಇರುವ ಚಿಕ್ಕ ಸಂಸಾರ ಅದಕ್ಕೆ ತಕ್ಕಂತೆ; ತಮ್ಮ ಕೈಲಾದಷ್ಟು ಆಹಾರ ಸಂಗ್ರಹ ಮಾಡಿಕೊಳ್ಳುತ್ತವೆ. ಇದು ಅತಿ ಪುರಾತನ ಕಾಲದಿಂದ ನಡೆದು ಬಂದ ಹಬ್ಬ. ಈ ಹಬ್ಬದಲ್ಲಿ ಎಲ್ಲ ಕೆಲಸವನ್ನೂ ಮುಗಿಸಿಕೊಂಡು ಸಂತೋಷದಿಂದಿರಬೇಕು. ಆಮೇಲೆ ಇಡೀ ವರ್ಷ ಅಂಥ ಹಬ್ಬವೂ ಇಲ್ಲ, ಉತ್ಸವವೂ ಇಲ್ಲ.

ಮುಂದೆ ಆಹಾರಪದಾರ್ಥ ಕೊಳ್ಳಲು ಸಿಗಬಹುದು. ಆದರೂ ಪ್ರತಿ ಕುಟುಂಬವೂ ತನ್ನ ಸಾಮಗ್ರಿಯನ್ನು ತಾನು ಸಂಗ್ರಹಿಸಿಕೊಳ್ಳಲೇ ಬೇಕು. ವಸಂತ ಕಾಲ ಬಂದಾಗ ಹೆಂಗಸರು ಸಾಮಗ್ರಿಯನ್ನು ಯಾರ ಮನೆಯಲ್ಲಿ ಹೇಗೆ ಜೋಪಾನ ಮಾಡಿದಾರೋ ಪರಿಶೀಲಿಸುತ್ತಿದ್ದರು. ಒಂದೊಂದು ಮನೆಯ ವಿಧಾನ ಬೇರೆ ಬೇರೆ. ಅಜ್ಜಿ, ಉಳಿದ ಹಿರಿಯ ಹೆಂಗಸರು, ನನ್ನ ಅಕ್ಕತಂಗಿಯರಿಗೂ ಉಳಿದ ಚಿಕ್ಕ ಪ್ರಾಯದ ಹೆಣ್ಣು ಮಕ್ಕಳಿಗೂ ತಮ್ಮ ಮನೆತನದ ಹೆಸರು ನಿಲ್ಲಿಸಿ ಸಾಮಗ್ರಿ ಕೆಡದಂತೆ ಹಬ್ಬದ ಕೆಲಸಗಳನ್ನು ಮಾಡಬೇಕೆಂದು ಹೇಳುತ್ತಿದ್ದರು. ಆದರೆ ಈಗಿನ ಚೀನಾದ ಸುಧಾರಿಸಿದ ಹುಡುಗಿಯರು ಅಷ್ಟೊಂದು ಶ್ರಮ ಪಟ್ಟಾರೆಂದು ನನಗನಿಸುವದಿಲ್ಲ !

ಉಪ್ಪಿನಕಾಯಿ ಎರಡು ಬಗೆ. ಹಣ್ಣು ಕಾಯಿಗಳದು, ಮಾಂಸದ್ದು. ಆಯಾ ಪದಾರ್ಥಗಳು ದೊರೆಯುವ ಕಾಲಕ್ಕೆ ಅವನ್ನು ತಯಾರಿಸಿ ಹೆಂಗಸರು ಅಡಕಲ ಕೋಣೆಗಳಲ್ಲಿ ಒಂದೋ ಎರಡೋ ಮಣ್ಣಿನ ಪಾತ್ರೆಗಳಲ್ಲಿ ಇರಿಸುವರು. ಬೇಕಾದಾಗ ತೆಗೆದು ತಿನ್ನಬಹುದು. ಆದರೆ ಖಾರಗೆಣಸಿನ ಬೇರುಗಳನ್ನೂ "ಟರ್ನಿಪ್"ಗಳನ್ನೂ ಹೊಸ ವರ್ಷದ ಹಬ್ಬಕ್ಕೆ ತೆಗೆಯುವ ವಾಡಿಕೆ ತಾಜಾ ಕಾಯಿ ಪಲ್ಯ ಸಿಕ್ಕದೆ ಇರುವಾಗ ಈ ಟರ್ನಿಪ್‌ಗಳನ್ನು ತೆಗೆಯುವ ರೂಢಿ.

ನಾನು ಇದಾವುದನ್ನೂ ತಿನ್ನುತ್ತಿರಲಿಲ್ಲ ನನಗೆ ಹೊಸ ಕಾಯಿಪಲ್ಯ ತುಂಬ ರುಚಿ. ಖಾರಗೆಣಸಿನ ಬೇರಿನ ರುಚಿ ಹೇಗಿದೆಯೋ ಇಂದೂ ಗೊತ್ತಿಲ್ಲ. ನಾನು ಖಾರದ ಪದಾರ್ಥ ತಿನ್ನುವುದೇ ಇಲ್ಲ. ನನ್ನ ಅಣ್ಣ ತಮ್ಮಂದಿರಿಗೆಲ್ಲ ಇವುಗಳ ಮೇಲೆ ತುಂಬಾ ಇಷ್ಟ. ನನಗೆ ಇಷ್ಟವಾದ್ದು ಒಂದೇ–ಹಂದಿಯ ಮಾಂಸ, ಕ್ಯಾಬೇಜು ಪಲ್ಯ. ಕ್ಯಾಬೇಜು ಎಲೆಗಳನ್ನು ಸಣ್ಣಗೆ ಕತ್ತರಿಸಿ, ಬೇಯಿಸಿ ಉಪ್ಪುಹಾಕಿ ಒಣಗಿಸಿ ಭರಣಿಗಳಲ್ಲಿ ತುಂಬಿಡುತ್ತಿದ್ದರು. ಒಂದು ಎರಡು ತಿಂಗಳಾದ ಮೇಲೆ ಅದನ್ನು ಅಡಿಗೆ ಮಾಡುತ್ತಿದ್ದರು. ಅದರಲ್ಲೂ ಮಾಂಸ ತಿಂದು ಎಲೆಗಳನ್ನು ಬಿಡುತ್ತಿದ್ದೆ. ಬೈಗಳನ್ನಾದರೂ ತಿನ್ನುತ್ತಿದ್ದೆನಾಗಲಿ ಆ ಎಲೆಗಳನ್ನು ತಿನ್ನುತ್ತಿರಲಿಲ್ಲ.

ಮಾಂಸದ ಉಪ್ಪಿನಕಾಯಿಯಲ್ಲಿ ಹಂದಿಮಾಂಸ, ಮೀನು, ಕೋಳಿಯ ಮರಿ, ಬಾತುಗಳ ಮಾಂಸ ಮುಖ್ಯ. ಕಿಯು-ಕಿಯಾಂಗಿನಲ್ಲಿ ಕೆಲವರು ದನದ ಮಾಂಸಆಡಿನ ಮಾಂಸಗಳನ್ನೂ ತೆಗೆದಿಡುತ್ತಾರೆ. ನಮ್ಮದು ದೊಡ್ಡ ಮನೆ. ಹೆಚ್ಚು ಜನ. ಆದ್ದರಿಂದ ಈ ಕೆಲಸದ ಪ್ರಮಾಣವೂ ದೊಡ್ಡದೇ. ನಮ್ಮ ರೈತರಿಂದ ಪುಷ್ಟವಾದ ದಪ್ಪನೆ ಎರಡು ಹಂದಿಗಳನ್ನು ಪ್ರತಿ ವರ್ಷ ತಂದು ಕೊಡುವ ಹೊಣೆ ನನ್ನ ಕಕ್ಕಂದಿರಲ್ಲಿ ಒಬ್ಬರದು. ರೈತರಿಂದ ಬರತಕ್ಕ ಲೆಕ್ಕದಲ್ಲಿ; ಪುಕ್ಕಟೆ ಅಲ್ಲ. ಈ ಹಂದಿಗಳನ್ನು ಐದು ಅಥವಾ ಹತ್ತು ಪೌಂಡಿನ ಮಾಂಸದ ತುಂಡುಗಳಾಗುವಂತೆ ಕೊಯ್ಯುತ್ತಿದ್ದರು.

ಕೆಲಸಗಾರರು ಅವನ್ನು ಚೆನ್ನಾಗಿ ತೊಳೆದಿಡುತ್ತಿದ್ದರು. ಅಜ್ಜಿ ಆ ತುಂಡುಗಳಿಗೆ ಬೇಕಾಗುವಷ್ಟು ಉಪ್ಪುಕೊಡುತ್ತಿದ್ದಳು. ಕೆಲಸಗಾರರು ಆ ಉಪ್ಪನ್ನು ಮಾಂಸದ ತುಂಡುಗಳಿಗೆ ಚೆನ್ನಾಗಿ ತಿಕ್ಕಿ, ಹತ್ತು ಹದಿನೈದು ದಿನಗಳವರೆಗೂ ಬಿಸಿಲಿನಲ್ಲೂ ಇಡುತ್ತಿದ್ದರು. ಕೆಲಸ ಮಾಡದಿದ್ದರೂ ನನ್ನ

ಅಕ್ಕನೂ ಉಳಿದ ಹೆಣ್ಣು ಮಕ್ಕಳೂ ಇದನ್ನು ನಿಂತು ನೋಡಬೇಕಾಗಿತ್ತು. ಗಂಡು ಹುಡುಗರಿಗೆ ತಿನ್ನುವುದೇ ಕೆಲಸ.

ಹತ್ತು ಹನ್ನೆರಡು ದಿನಗಳ ಮೇಲೆ ಅಜ್ಜಿ ಈ ಮಾಂಸದ ತುಂಡುಗಳನ್ನು ತೆಗೆಸಿ ನೋಡುತ್ತಿದ್ದಳು. ಮೊದಲಿಗಿಂತ ಹೆಚ್ಚು ಕೆಂಪಗೆ ಕಂಡರೆ ಸರಿ. ಅನಂತರ ಅದನ್ನು ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಬಿಸಿಲಲ್ಲಿ ಈ ರೀತಿ ಒಂದು ತಿಂಗಳು ಒಣಗಿದ ನಂತರ, ಆ ಮಾಂಸ ಅಡಿಗೆಗೆ ಸಿದ್ಧವಾಗುತ್ತಿತ್ತು. ಕೆಲವು ತುಂಡುಗಳನ್ನು ಬಿಸಿಮಾಡಿ ಒಣಗಿಸುತ್ತಿದ್ದರು. ಹೊಸ ವರ್ಷದ ಹಬ್ಬದ ಊಟದಲ್ಲಿ ನನಗೆ ತುಂಬ ಇಷ್ಟವಾದ ಪದಾರ್ಥವೆಂದರೆ ಇದು. ಈ ದೊಡ್ಡ ದೊಡ್ಡ ತುಂಡುಗಳನ್ನು ಒಂದೊಂದು ನಿಂಬೆಕಾಯಿ ಗಾತ್ರದಷ್ಟು ಕತ್ತರಿಸಿ ಉಗಿಯಲ್ಲಿ ಬೇಯಿಸುತ್ತಿದ್ದರು.

ಮೀನುಗಳನ್ನು ಕಾಯ್ದಿಡುವ ರೀತಿಯೂ ಇದೇ ಬಗೆ. ನಾವು ಹಿಡಿದು ತರುವ ಮೀನು ಯಾಂಗ್ಸಿ ನದಿಯಲ್ಲಿ ದೊರೆಯುವ ಜಾತಿಯದು. "ಹಳದಿ ನದಿ"ಯಲ್ಲಿ ಸಿಗುವ ಮೀನು ಇದಕ್ಕಿಂತ ಉತ್ತಮ ಜಾತಿಯವು. ಒಂದೊಂದು ಮೀನಿನ ತೂಕ ಹತ್ತರಿಂದ ಮೂವತ್ತು ಪೌಂಡಿನ ವರೆಗೆ. ಹೊಸ ಹಬ್ಬದಲ್ಲಿ ನಾನು ಅತ್ಯಂತ ಪ್ರೀತಿಯಿಂದ ಈ ಪದಾರ್ಥ ತಿನ್ನುವುದನ್ನು ನೋಡಿ ನನ್ನನ್ನು 'ಮೀನಿನ ರಾಯ' ಎನ್ನುತ್ತಿದ್ದರು.

ಈ ಆಹಾರ ಪದಾರ್ಥವೆಲ್ಲ ಕೆಟ್ಟು ಹೋಗದೆ ಸರಿಯಾಗಿದ್ದರೆ ಮುಂದಿನ ವರ್ಷವೆಲ್ಲ ಸುಖ ಸಂತೋಷದಲ್ಲಿ ಕಳೆಯುವುದೆಂಬ ಶಕುನವಾದಂತೆ. ಆದ್ದರಿಂದ ಈ ಕೆಲಸವನ್ನು ಅತ್ಯಂತ ಲಕ್ಷ್ಯಪೂರ್ವಕವಾಗಿ ಮಾಡಲಾಗುತ್ತಿತ್ತು.

ಇತ್ತ ಈ ರೀತಿ ಮಾಂಸ, ಮೀನುಗಳನ್ನು ಬಿಸಿಲಿನಲ್ಲಿ ಒಣಗಿಸುವ ಕೆಲಸ ಭರದಿಂದ ನಡೆದಾಗ ಅತ್ತ ಹೆಂಗಸರು ಬೇರೆ ಬಗೆಯ ಭಕ್ಷ್ಯಗಳನ್ನು ಮಾಡಿಡುತ್ತಿದ್ದರು. ದೊಡ್ಡ ಹುಡುಗಿಯರು ಅವನ್ನೆಲ್ಲ ಭರಣಿಗಳಲ್ಲಿ ಸರಿಯಾಗಿ ತುಂಬಿಸಿಡುತ್ತಿದ್ದರು. ಹಬ್ಬ ಒಂದು ವಾರವಿದೆ ಎನ್ನುವುದರೊಳಗಾಗಿ ಈ ಕೆಲಸ ಮುಗಿಯಬೇಕು.

ಅದೇ ರಾತ್ರಿ - ಹೊಸ ವರ್ಷದ ಹಬ್ಬಕ್ಕೆ ಸರಿಯಾಗಿ ಒಂದು ವಾರ ಮೊದಲು ಅಜ್ಜಿ-ಕಲ್ಲು ಸಕ್ಕರೆಯ ಕೆಲವು ಸಿಹಿ ತಿಂಡಿ ಮಾಡಿ ಅಡಿಗೆಯ ಮನೆಯ ಕಾಗದದ ದೇವತೆಯ ಮುಂದೆ ಇಡುತ್ತಿದ್ದಳು. ಹುಡುಗರು

ಎಲ್ಲರೂ ಮೂರು ಮೂರು ಬಾರಿ ಆ ದೇವರ ಮುಂದೆ ಮೊಳಕಾಲೂರಿ ನಮಸ್ಕರಿಸುತ್ತಿದ್ದೆವು. ಇದಾದ ಕೂಡಲೇ ಆ ಕಾಗದದ ದೇವತೆಯನ್ನು ಸುಡುತ್ತಿದ್ದೆವು. ಆ ದೇವತೆ ಸ್ವರ್ಗಕ್ಕೆ ಹೋಗಿ ಆ ವರುಷದಲ್ಲಿ ನಮ್ಮ ಮನೆಯಲ್ಲಿ ಆದುದನ್ನೆಲ್ಲ ವರದಿ ಒಪ್ಪಿಸುತ್ತಿತ್ತು. ಈ ವರದಿ ಚೆನ್ನಾಗಿದ್ದರೆ ಅದರಿಂದ ನಮ್ಮ ಮನೆತನಕ್ಕೆ ಮುಂದಿನ ವರ್ಷವೆಲ್ಲ ಶುಭದಾಯಕ. ಇಲ್ಲವಾದರೆ ನಾವು ತುಂಬಾ ದಕ್ಷತೆ ವಹಿಸಬೇಕಾಗುತ್ತಿತ್ತು. ನಮಗೆ-ಚಿಕ್ಕ ಮಕ್ಕಳಿಗೆ ಇದರಿಂದೇನೂ ಬೇಸರವಾಗುತ್ತಿರಲಿಲ್ಲ. ಇಡೀ ವರ್ಷದಲ್ಲಿ ಇದೊಂದೇ ಸಲ ನಾವು ನಮ್ಮ ಅಡಿಗೆಯ ಮನೆಗೆ ಹೋಗುತ್ತಿದ್ದುದು.

ಮರುದಿನ ಹೊಸ ವರ್ಷದ ಹಬ್ಬ ಪ್ರಾರಂಭ. ಆ ರಾತ್ರಿಯಿಂದ ನಾವು ಪ್ರೇತ - ಭೂತಗಳ ಮಾತನ್ನಾಗಲಿ, ನಾವು - ನೋವಿನ ವಿಚಾರವನ್ನಾಗಲಿ ತರಬಾರದು. ಮನೆಯನ್ನೆಲ್ಲ ಕಸ ಗುಡಿಸಿ ಸ್ವಚ್ಛವಾಗಿಡಬೇಕು. ಚಿಕ್ಕ ಮಕ್ಕಳನ್ನು ಬೆಲೆಯುಳ್ಳ ಸಾಮಾನುಗಳನ್ನು ಮುಟ್ಟಗೊಡುತ್ತಿರಲಿಲ್ಲ. ಆದರೆ ಹಿರಿಯರೊಂದಿಗೆ ಸೇರಿಕೊಂಡು ನಾವು ಬಿಡುವಿಲ್ಲದಂತೆ ಇರುತ್ತಿದ್ದೆವು. ಬೇರೆ ಸಮಯದಲ್ಲಿ ನಮ್ಮನ್ನು ಅಲ್ಲಿಂದ ಹೊರಗೆ ಹಾಕುತ್ತಿದ್ದರು. ಹೊಸ ವರ್ಷದ ಹಬ್ಬದ ನಿಮಿತ್ತ ಎಲ್ಲರೂ ಶಾಂತರಾಗಿಯೂ ನಗುಮೊಗದಿಂದಲೂ ಇರುತ್ತಿದ್ದರು.

ಅಣ್ಣ ಮನೆಯ ಕೆಲಸಗಳಲ್ಲಿ ಭಾಗ ವಹಿಸಿದ್ದು ಈ ಪ್ರಸಂಗದಲ್ಲಿ ಮಾತ್ರ. ಆತ "ಚುನ್-ಲಿಯನ್" (ವಸಂತಕಾವ್ಯ) ಕವಿತೆ ಮಾಡಿ ಕೆಂಪು ಕಾಗದದ ಚೂರುಗಳಲ್ಲಿ ಅಂದವಾಗಿ ಬರೆದು ಬಾಗಿಲುಗಳಿಗೆ ಅಂಟಿಸಲು ಹೇಳುತ್ತಿದ್ದ. ಕೆಲವು ಮನೆಗಳಲ್ಲಿ ದೇವತೆಗಳ ಚಿತ್ರಗಳನ್ನು ಅಂಟಿಸುತ್ತಾರೆ. ನಾವು ಹಾಗೆ ಮಾಡುತ್ತಿರಲಿಲ್ಲ. ನನ್ನ ಅಣ್ಣ, ಇನ್ನಿಬ್ಬರು ಕಕ್ಕನ ಮಕ್ಕಳು ಅಂದವಾಗಿ ಅಕ್ಷರ ಬರೆಯುತ್ತಿದ್ದರು. ಪೇಟೆಯಲ್ಲಿ. ಈ ಹಬ್ಬಕ್ಕೆ ಕವಿತೆಗಳನ್ನು ಅಚ್ಚುಮಾಡಿ ಮಾರುತ್ತಿದ್ದರು. ಅಣ್ಣನಿಗೆ ಅವು ಮನಸ್ಸಿಗೆ ಬರುತ್ತಿರಲಿಲ್ಲ. ತಾನೇ ಕವಿತೆ ರಚಿಸುವುದು ಆತನಿಗೆ ಹೆಚ್ಚು ರುಚಿ. ಪ್ರತಿವರ್ಷವೂ ಹೊಸ ಕವಿತೆ ಮಾಡುತ್ತಿದ್ದ. ನಮ್ಮ ಹೆಬ್ಬಾಗಿಲಿಗೆ ಅಂಟಿಸಿದ್ದ ಕವಿತೆಗಳನ್ನು ಜನರು ಪ್ರತಿಮಾಡಿಕೊಂಡು ಹೋಗುತ್ತಿದ್ದರು. ಈ ಕವನಗಳು ಒಂದೊಂದು ಬಾಗಿಲಿನಲ್ಲಿ ಒಂದೊಂದು ರೀತಿ. ಹೆಬ್ಬಾಗಿಲಿನ ಮೇಲೆ ವಸಂತ ಋತುವಿನ

ಸ್ವಾಗತ ಗೀತೆ. ಮನೆಯ ಅಭ್ಯುದಯ ಕೋರಿ ಬರೆದ ಗೀತೆ ಇನ್ನೊಂದು ಬಾಗಿಲಿಗೆ. ಆಯಾ ಕೋಣೆಗಳಿಗೆ ಬರುವ ಸಾಮಾನುಗಳನ್ನು ಕುರಿತು ಕಟ್ಟಿದ ಕವನ ಬೇರೆ ಕಡೆ. ಅತಿಥಿ ಮಂದಿರಕ್ಕೆ ಪರಸ್ಥಳದಿಂದ ಬರುವ ಅತಿಥಿ ಗಳಿಗೆ ಸ್ವಾಗತ. ಅಭ್ಯಾಸದ ಕೋಣೆಗೆ ಅಂಟಿಸಿದ ಕವನಗಳ ಛಂದಸ್ಸು ನಿಲ್ಲದೆ ಬರುವ ಮಳೆಯಂತೆ. ಪ್ರತಿಯೊಂದು ಬಾಗಿಲಿಗೂ ಕವಿತೆ ರಚಿಸುವ ಕೆಲಸ ದಲ್ಲಿ ಅಣ್ಣನಿಗೆ ಬಿಡುವೇ ಇಲ್ಲ. ಮಾರನೆ ದಿನ ಹಬ್ಬ ಎನ್ನುವ ವೇಳೆಗೆ ಈ ಅಲಂಕಾರವೆಲ್ಲಾ ಮುಗಿಯಬೇಕು. ಮೂರೂ ಕೈಸಾಲೆಗಳಲ್ಲಿದ್ದ ಚಿತ್ರ ಗಳನ್ನು ಬದಲಾಯಿಸಿ ವಸಂತಾಗಮನವನ್ನು ತಿಳಿಸುವ ಹೊಸ, ಹೂಗಳ ಚಿತ್ರಗಳನ್ನು ಹಾಕುವುದು ತಂದೆಯವರ ಕೆಲಸ.

ಚಳಿಗಾಲ ಕಳೆಯುತ್ತಲೆ ಅಜ್ಜಿ ಸಿಂಪಿಗಳನ್ನು ಕರೆಯಿಸಿ ನಮಗೆಲ್ಲ ಹೊಸ ಬಟ್ಟೆ ಹೊಲೆಯಲು ಹಾಕುತ್ತಿದ್ದಳು ಹೊಸ ವರ್ಷದ ಹಬ್ಬಕ್ಕೆ ಹೊಸ ಬಟ್ಟೆ ಬೇಕೇಬೇಕು. ಸಿಂಪಿಗರು ನಮ್ಮ ಮನೆಯಲ್ಲೇ ಒಂದೆರಡು ವಾರ, ಅವಶ್ಯ ಬಿದ್ದರೆ ಹೆಚ್ಚು ದಿನ, ಇದ್ದು ಹೊಲೆಯುತ್ತಿದ್ದರು. ನಮ್ಮ ದೊಡ್ಡಮ್ಮಂದಿರು, ಹಿರಿಯ ಹೆಂಗಸರು, ರೇಶಿಮೆಯ ಬಟ್ಟೆ ಹರಿಸಿ ಹೇಗೆ ಹೊಲೆಯಬೇಕೋ ಗೊತ್ತುಮಾಡುತ್ತಿದ್ದರು. ಹೊಸ ಬಟ್ಟೆ ಹಾಕಿಕೊಳ್ಳುವುದು ನನಗೆ ಸಾಮಾನ್ಯ ವಾಗಿ ರುಚಿಸದು. ಅದರಲ್ಲಿ ಸ್ವೇಚ್ಛೆ ಕಡಮೆ. ಹೊಸ ವರ್ಷದ ಹಬ್ಬ; ಹಿರಿಯರೂ ಕಿರಿಯರೂ ಹೊಸ ಬಟ್ಟೆ ಹಾಕಿಕೊಳ್ಳುವಾಗ ನಾನೂ ಅವರ ಜೊತೆಗೇ. ನಾಳೆ ಹೊಸ ವರ್ಷ ಎನ್ನುವಾಗ ಚಿಕ್ಕಮಕ್ಕಳೆಲ್ಲ ಕೂದಲು ಚೆನ್ನಾಗಿ ಹಿಕ್ಕಿಸಿಕೊಂಡು ಹೊಸ ಬಟ್ಟೆ ತೊಡುತ್ತಿದ್ದೆವು. ಕೈ ಕೂಸುಗಳಿಗೆ ಕುಂಕಮದ ಹಾಗೆ ಹಣೆಗೆ ಕೆಂಪು ಬಣ್ಣ ಹಚ್ಚುತ್ತಿದ್ದರು. ಮನೆಯಲ್ಲಿ ಎಲ್ಲರಿಗೂ ಉತ್ಸಾಹ ಸಂತೋಷ! ಹಬ್ಬದ ದಿನ ಮಕ್ಕಳನ್ನು ಯಾರೂ ಬಯ್ಯರು, ಹೊಡೆಯರು; ನಮಗೆ ಗೊತ್ತು. ನಾವೂ ಆವತ್ತು ತುಂಟತನ ಮಾಡುತ್ತಿರಲಿಲ್ಲ. ಮನೆಯ ಜನರೆಲ್ಲಾ ಮಕ್ಕಳು ಮರಿ ಒಂದು ಕಡೆ ಕೂಡಿ ಆ ವರ್ಷ ಸುಖವಾಗಿ ಕಳೆದುದಕ್ಕಾಗಿ ದೇವತೆಗಳಿಗೆ ವಂದನೆ ಅರ್ಪಿಸುವುದು ನಮ್ಮ ಆಚಾರ.

ನಮ್ಮ ಪೂರ್ವಜರ ಮಂದಿರದ ನಡುಮನೆಯಲ್ಲಿ ಒಂದು ದೊಡ್ಡ ಮೇಜನ್ನು ಒಬ್ಬ ಆಳು ತಂದು ಇರಿಸಿದ. ಹೆಬ್ಬಾಗಿಲಿನ ಎದುರಿಗೆ ಗೋಡೆಯ

ಮೇಲೆ ಕಸೂತಿ ಹಾಕಿದ ಪರದೆಯೊಂದನ್ನು ಕಟ್ಟುತ್ತಿದ್ದೆವು. ಅದರ ಮೇಲೆ ಶುಭ ಸೂಚಕವಾದ ಒಂದು ಚಿತ್ರ. "ನೀನ್-ನೀನ್-ಯು-ಐ" ಎಂಬ ನಾಲ್ಕು ಅಕ್ಷರ. ವರುಷ ವರುಷವೂ ಶುಭವಾಗಲಿ ಎಂದು ಅರ್ಥ. ಎಲ್ಲಾ ಕುರ್ಚಿ ಗಳಿಗೂ ತೆಳ್ಳನೆ ಗಾದಿಗಳನ್ನೂ ಹೊದಿಕೆಗಳನ್ನೂ ಹಾಕಿದೆವು. ಪ್ರತಿಯೊಂದು ನಡುಮನೆಯ ಹೊರಗೂ ಮತ್ತೊಂದು ಸುಂದರ ಪರದೆ. ಮೂರು ಅಡಿ ಉದ್ದ, ಮೂರು ಅಂಗುಲ ದಪ್ಪ ಇರುವ ಎರಡು ಮೇಣಬತ್ತಿಗಳನ್ನು ತೊಲೆ ಗಳಿಗೆ ಕಟ್ಟಿ ಇಳಿಬಿಡಲಾತ್ತು. ಮಹಾದ್ವಾರದ ಮಧ್ಯೆ ಕೆಂಪು ಕಾಗದದ ದೀಪ ಒಂದನ್ನು ತೂಗುಹಾಕಿದ್ದರು. ಪ್ರತಿಯೊಂದು ನಡುಮನೆಯಲ್ಲೂ ನಾಲ್ಕೂ ಮೂಲೆಗಳಲ್ಲಿ ರೇಶಿಮೆ ಬಟ್ಟೆ ಸುತ್ತಿದ ದೀಪ. ನಡುವೆ ದೊಡ್ಡ ದೀಪ.

ಆ ದೊಡ್ಡ ಮೇಜಿನ ಮೇಲೆ ಹಬ್ಬಕ್ಕಾಗಿ ಮಾಡಿದ ತಿಂಡಿ-ತಿನಿಸು, ಪಕ್ವಾನ್ನ, ಮದ್ಯಗಳನ್ನು ಇರಿಸಿದ ಮೇಲೆ ಎಲ್ಲ ದೀಪಗಳನ್ನೂ ಆ ದೊಡ್ಡ ಕೆಂಪು ಮೇಣಬತ್ತಿಯನ್ನೂ ಹಚ್ಚಲಾಯಿತು. ಆ ದೃಶ್ಯ ಅತ್ಯಂತ ಮೋಹಕ. ಅನಂತರ ಧೂಪ ಹಾಕಿದರು. ನನ್ನ ಕಕ್ಕನ ಮಕ್ಕಳಿಬ್ಬರಿಗೆ ಪಟಾಕಿ ಸುಡುವ ಕೆಲಸ. ಮೇಜಿನ ಮೇಲಿದ್ದ ದೊಡ್ಡ ಕಂಚಿನ ಗಂಟೆ ಬಾರಿಸುವ ಕೆಲಸ ನನ್ನದು. ಅದಕ್ಕೆ ಸಾಕಷ್ಟು ಎತ್ತರವಾಗಿದ್ದೆ. ಗಂಡಸರಲ್ಲಿ ಹಿರಿಯರಾದವರು ಪೂರ್ವಜರ ಮಂದಿರದ ಮುಂದೆ ಮೊಳಕಾಲೂರಿ ನಮಸ್ಕರಿಸುವಾಗ ನಾನು ಈ ಕಂಚಿನ ದೊಡ್ಡ ಗಂಟೆ ಬಾರಿಸುತ್ತಿದ್ದೆ. ಮೊದಲು ತಾನು ನಮಸ್ಕರಿಸಿ ಮುಂದೆ ವಯಸ್ಸಿನ ಪ್ರಕಾರ ಇತರರನ್ನು ಕರೆಯುವ ಕೆಲಸ ಅಜ್ಜನದು. ಆತ ತೀರ ಮುದುಕನಾದ ಮೇಲೆ ನಮ್ಮ ಹಿರಿಯ ಕಕ್ಕ ಇದನ್ನು ಮಾಡುತ್ತ ಬಂದ. ಹದಿನೈದು ವರ್ಷದ ಒಳಗಿನ ಹುಡುಗ-ಹುಡುಗಿಯರೆಲ್ಲ ಈ ಉತ್ಸವವನ್ನು ತುಂಬ ಪ್ರೀತಿಸುತ್ತಿದ್ದೆವು. ಕಕ್ಕ ಹೆಸರುಗೊಂಡು ಕರೆಯುವವರೆಗೂ ನಾವೆಲ್ಲರೂ ಸಾಲಾಗಿ ಕಾದು ನಿಂತಿರುತ್ತಿದ್ದೆವು. ದೊಡ್ಡಮ್ಮಂದಿರು, ಚಿಕ್ಕ ಮ್ಮಂದಿರು, ಉಳಿದ ಹೆಂಗಸರೂ ಅಲ್ಲಿ ಕಾದು ನಿಂತಿರುತ್ತಿದ್ದರು. ಅವರಿಗೆ ಸರಿಯಾಗಿ ಮೊಳಕಾಲೂರಿ ನಮಸ್ಕರಿಸಲು ಬರುತ್ತಿರಲಿಲ್ಲವಾದ್ದರಿಂದ ನಾಚಿ ಕೊಳ್ಳುತ್ತಿದ್ದರು. ಮೊಳಕಾಲೂರಿ ನಮಸ್ಕರಿಸುವ ವಿಧಾನವನ್ನು ನಮಗೆ ಯಾರೂ ಕಲಿಸಲಿಲ್ಲ. ಹಿರಿಯರು ಮಾಡುವುದನ್ನು ನೋಡಿ ಕಿರಿಯರು ಕಲಿತುಕೊಳ್ಳಬೇಕಷ್ಟೆ.

ಗಂಟೆ ಬಾರಿಸುವ ನನ್ನ ಕೆಲಸ ದುರ್ಲಕ್ಷಿಸುವಂತಹುದಲ್ಲ. ನನ್ನ ಸರತಿ ಬಂದಾಗ ಮಾತ್ರ ಬಿಟ್ಟು—ಒಂದೇ ಪ್ರಕಾರವಾಗಿ ಗಂಟೆ ಬಾರಿಸಬೇಕು. ಈ ಕಾರ್ಯಕ್ರಮ ಅರ್ಧ ತಾಸಿನ ವರೆಗೆ ನಡೆಯುತ್ತಿತ್ತು. ನನ್ನ ಸರತಿ ಬಂದಾಗ ಕಕ್ಕನ ಮಕ್ಕಳಲ್ಲಿ ಒಬ್ಬರು ಈ ಕೆಲಸ ಮಾಡುತ್ತಿದ್ದರು. ಚಿಕ್ಕವರಲ್ಲಿ ನನಗೆ ಅತ್ಯಂತ ಶಾಂತ-ಸಮಾಧಾನದ ಹುಡುಗನೆಂದು ಹೆಸರು. ಅದರಿಂದ ಆರರಿಂದ ಹದಿನೈದು ವರ್ಷದವರೆಗೂ ಹೊಸ ವರ್ಷದ ಹಬ್ಬದಲ್ಲಿ ನಾನೇ ಗಂಟೆ ಬಾರಿಸಿದೆ.

ಈ ಸಮಾರಂಭ ಮುಗಿದ ಮೇಲೆ ಭಾರಿ ಸಮಾರಾಧನೆ. ಕೆಲಸಗಾರರೂ ಸೇರಿ ಮನೆಯ ಜನರೆಲ್ಲ ಕೂಡಿ ಊಟಮಾಡುತ್ತಿದ್ದುದು ವರ್ಷದಲ್ಲೆಲ್ಲ ಇದೇ ಒಂದು ದಿನ. ಉಳಿದಾಗ ಉಳಿದ ಹಬ್ಬಗಳಲ್ಲಿ ಸಾಮಾನ್ಯವಾಗಿ ಅಜ್ಜ ಬರುತ್ತಿರಲಿಲ್ಲ. ಉಳಿದವರೂ ಬಿಡುವಿದ್ದರೆ ಬರುತ್ತಿದ್ದರು. ಹೊಸ ವರ್ಷದ ಹಬ್ಬ ಹಾಗಲ್ಲ. ಎಲ್ಲರೂ ಬರಬೇಕಾದ್ದೇ. ಮೂರೂ ಕೈ ಸಾಲೆಗಳಲ್ಲಿ ಐದಾರು ಮೇಜು ಹಾಕುತ್ತಿದ್ದರು. ಒಂದೊಂದು ಮೇಜಿಗೆ ನಾಲ್ಕೂಕಡೆ ಇಬ್ಬಿಬ್ಬರಂತೆ ಎಂಟೆಂಟು ಜನ ಕೂಡುತ್ತಿದ್ದರು. ಚಿಕ್ಕವರಾದರೆ ಮೂವರು. ಅಜ್ಜ-ಅಜ್ಜಿಯರಿಗೆ ಮನೆಯ ಎಲ್ಲಾ ಮಕ್ಕಳನ್ನೂ ನೋಡುವುದೇ ಒಂದು ಸಂಭ್ರಮ. ಅವರು ಮಾತಾಡುತ್ತಿರಲಿಲ್ಲ, ಸುಮ್ಮನೆ ಆಶೀರ್ವದಿಸುತ್ತಿದ್ದರು. ಅಜ್ಜಿಗೆ ತುಂಬ ಉತ್ಸಾಹ. 'ವರ್ಷದ ಕೆಲಸವೆಲ್ಲ ತೀರಿತು ತಾಯಿ, ಇನ್ನು ವರ್ಷವೆಲ್ಲ ವಿಶ್ರಾಂತಿ ತಕ್ಕೊಳ್ಳಬಹುದು' ಎನ್ನುತ್ತಿದ್ದಳು. ಹೆಬ್ಬಾಗಿಲಿಗೆ ಎದುರಿನ ಕೈಸಾಲೆಯಲ್ಲಿ ಎಲ್ಲರಿಗೂ ಕಾಣುವಂತೆ ಅಜ್ಜ-ಅಜ್ಜಿ ಇಬ್ಬರೂ ಕೂಡುತ್ತಿದ್ದರು. ಅವರ ಪಕ್ಕದಲ್ಲಿ ಮೊಮ್ಮಕ್ಕಳು. ಅವರ ಹೆಂಡಂದಿರು-ಮರಿಮಕ್ಕಳು. ನಾನೂ ಯಾವಾಗಲೂ ಇರುತ್ತಿದ್ದೆ. ಯಾರಿಗೂ ವಿಶಿಷ್ಟ ಸ್ಥಳವಿರಲಿಲ್ಲ. ಉಳಿದವರು ಎಲ್ಲೋ ಒಂದು ಕಡೆ ಕೂಡುತ್ತಿದ್ದರು. ಅಲ್ಲಲ್ಲಿ ಕೆಲವು ಕುರ್ಚಿ ತೆರವಿರುತ್ತಿದ್ದವು. ಬರುವ ವರ್ಷಕ್ಕೆ ಅವೂ ಭರ್ತಿಯೇ. ಈ ಕೂಟವನ್ನು "ತು ಆನ್ ನೀನ್" "ವರುಷದ ಪುನರ್ಮಿಲನ" ಎಂದು ಕರೆಯುತ್ತೇವೆ. ಯಾವ ಬಗೆಯ ಹಿರಿಕಿರಿ ಭೇದವೂ ಇರಲಿಲ್ಲ. ಎಲ್ಲರೂ ಮೋಜಿನಿಂದ ನಲಿದಾಡುತ್ತಿದ್ದರು.

ಆ ಹಬ್ಬದ ಊಟ-ಎಷ್ಟು ಸೊಗಸಾಗಿರುತ್ತಿತ್ತೋ; ಒಂಬತ್ತು ಹತ್ತು ಬಗೆಯ ಪಕ್ವಾನ್ನ. ಮೇಜಿನ ಮಧ್ಯೆ ಸಾಲಾಗಿ ಇರಿಸುತ್ತಿದ್ದರು. ಪ್ರತಿ

ಯೊಂದು ಮೇಜಿಗೂ ಒಂದೊಂದು "ಹೂ ಕೋ"-ಕಂಚಿನ ಪಾತ್ರೆ. ಅದರ ಮೇಲೆ ತಿಂಡಿಗಳನ್ನು ಬಿಸಿಯಾಗಿ ಇಡುತ್ತಿದ್ದರು.

ತಂದೆಯವರು ಮೊದಲು ಅಜ್ಜಿಯ ಬಟ್ಟಲನ್ನು ತುಂಬಿ-ತಮ್ಮ ಬಟ್ಟಲು ತುಂಬಿಕೊಡು ಆಕೆಯನ್ನು ಹೊಗಳಿ ಇಬ್ಬರೂ ಪೂರ್ತಿಯಾಗಿ ಕುಡಿದಮೇಲೆ ಎಲ್ಲರೂ ಊಟ ಪ್ರಾರಂಭಿಸುತ್ತಿದ್ದರು. ನಮ್ಮ ಅಜ್ಜಿಗೂ ನಮ್ಮ ತಂದೆಗೂ ಮದ್ಯ ಬಹಳ ಇಷ್ಟ. ಅಜ್ಜ ಮಾತ್ರ ಅದನ್ನು ಮುಟ್ಟುತ್ತಿರಲಿಲ್ಲ. ಯಾರು ಕುಡಿಯುತ್ತಿರಲಿಲ್ಲವೋ ಅವರು ಹೆಚ್ಚು ಭಕ್ಷ್ಯಗಳನ್ನು ತಿಂದು ಸುಖಪಡುತ್ತಿದ್ದರು. ಹದಿನೈದು ವರ್ಷದ ಒಳಗಿನ ಹುಡುಗರಿಗೆ ಮದ್ಯದ ವಾಸನೆಯೂ ಕೂಡದು. ಬೇಕಾದ್ದನ್ನು ಬೇಕಾದಷ್ಟು ತಿನ್ನಬಹುದು ಉಳಿದ ದಿನಗಳಲ್ಲಿ ಹಾಗಲ್ಲ, ತಟ್ಟೆಗಳಲ್ಲಿ ಚೆಲ್ಲಬಾರದು. ಈ ಉತ್ಸವದಲ್ಲಿ ಮಾತ್ರ ಹೊಟ್ಟೆ ತುಂಬ ತಿಂದೂ ತಟ್ಟೆಯಲ್ಲಿ ಸ್ವಲ್ಪ ಮಿಗಬೇಕು. ಬರುವ ವರ್ಷ ವೆಚ್ಚಕ್ಕಿಂತ ಆದಾಯ ಹೆಚ್ಚಾಗಿ ಉಳಿತಾಯವಾಗಬೇಕೆಂದರೆ ನಾಲ್ಕು ಅಗುಳು ಮಿಗಬೇಕು ಈಗ.

ಊಟವಾದ ಮೇಲೆ ಆಳುಗಳು ಮೇಜುಗಳನ್ನೆಲ್ಲ ಸರಿ ಮಾಡುತ್ತಿದ್ದರು. ಹುಡುಗರು ನಾವು ಆಟ ಆಡುತ್ತಿದ್ದೆವು.

ಹಬ್ಬದ ದಿನ ಬೆಳಗ್ಗೆ ದೊಡ್ಡ ಹಿತ್ತಾಳೆಯ ಪಾತ್ರೆಯೊಂದರಲ್ಲಿ ಇದ್ದಿಲು ಹಾಕಿ ಕೈಸಾಲೆಗಳು ಬೆಚ್ಚಗೆ ಇರಲಿ ಎಂದು ಬೆಂಕಿ ಮಾಡುತ್ತಿದ್ದರು. ಊಟವಾದ ಮೇಲೆ ಅದರಲ್ಲಿ ಉಳಿದ ತುಂಡನ್ನು ಪ್ರತಿಯೊಂದು ಕೋಣೆಗೂ ಕಳಿಸುತ್ತಿದ್ದರು. ಇದಕ್ಕೆ ವಿಶೇಷ ಅರ್ಥವಿದೆ. ನಮ್ಮ ವಂಶಜರು ಕೊಟ್ಟ ಸಂಪತ್ತು-ಅದನ್ನು ಹಂಚಿಕೊಳ್ಳುವುದರ ಸಂಕೇತ ಇದು. ನಾವು ಆಟಕ್ಕೆ ಹೋಗುತ್ತಿದ್ದೆವು. ಪಗಡೆ, ಇಸ್ಪೇಟು, ಚದುರಂಗ ಇತ್ಯಾದಿ ನಮ್ಮ ಆಟ. ಎರಡನೆಯ ಅಂಗಳದಲ್ಲಿ ಕಕ್ಕನ ಮಕ್ಕಳ ಜೊತೆಯಲ್ಲಿ ನಾನೂ ತರತರದ ಬಣ್ಣ ಬಣ್ಣದ ಪಟಾಕಿ ಹಾರಿಸುತ್ತಿದ್ದೆ. ಅನಂತರ ಸಂಗೀತ ವಾದ್ಯಗಳನ್ನು ಸ್ವರ-ಅಪಸ್ವರ ಎನ್ನದೆ ಮನಬಂದಂತೆ ಬಾರಿಸುತ್ತಿದ್ದೆವು. ಎಷ್ಟು ಹೆಚ್ಚು ಸದ್ದೋ ಅಷ್ಟೂ ಸಂತೋಷ.

ಆ ಹೊತ್ತಿಗೆ ಮೊದಲು ಹೇಳಿದಂತೆ, ವಯಸ್ಸಿಗೆ ಬಂದ ಮಕ್ಕಳಿಗೆಲ್ಲ "ವಂಶಾವಳಿ" ಗ್ರಂಥವನ್ನು ತೋರಿಸುವ ಸಮಯ. ನಿತ್ಯವೂ ನಾವು ದಣಿದು ಸಾಯಂಕಾಲ ಆರು ಗಂಟೆಗೇ ಮಲಗುತ್ತಿದ್ದೆವು. ಹೊಸ ವರ್ಷದ ಹಬ್ಬದ

ಮುನ್ನಾ ದಿನ ಅರ್ಧರಾತ್ರಿಯ ವರೆಗೂ ಎಚ್ಚರಗೊಂಡೇ ಇರುತ್ತಿದ್ದೆವು. ಈ ಆಚಾರವನ್ನು "ಷೌ-ಸಯೀ" ಎನ್ನುತ್ತಿದ್ದೆವು. ಇಂಗ್ಲೀಷರಂತೆ ಹಳೆಯ ವರ್ಷವನ್ನು ಬೀಳ್ಕೊಟ್ಟು ಹೊಸ ವರ್ಷವನ್ನು ಎದುರುಗೊಳ್ಳುದ್ದೆವು.

ಕಳೆದ ವರ್ಷಕ್ಕೆ ಸರಿಯಾದ ಬೀಳುಕೊಡಿಗೆ ಮಾಡುತ್ತಿದ್ದೆವು. ನಮ್ಮ ತಂದೆ ಒಂದು ಚಿತ್ರ ಬರೆಯುತ್ತಿದ್ದರು. ಅಣ್ಣ ಒಂದು ಕವಿತೆ ಬರೆಯುತ್ತಿದ್ದ.

ಅರ್ಧ ರಾತ್ರಿಯವರೆಗೂ ಮಲಗದೆ ಎಚ್ಚರವಾಗಿರುವುದೆಂದರೆ ನಮಗೆ ಎಷ್ಟು ಹುರುಪು ಹುಮ್ಮಸ್ಸು ಹಿಗ್ಗು ಇದ್ದಿರಬೇಕೋ! ಆ ರಾತ್ರಿ ಬೇಗ ನಿದ್ದೆಹೋದರೆ ಕೆಟ್ಟ ಕೆಟ್ಟಕನಸು ಬಿದ್ದು, ಅದು ಮುಂದಿನ ವರ್ಷಕ್ಕೆ ಅಶುಭ-ಸೂಚಕ ಎಂದೂ ಹಿರಿಯರು ಹೇಳುತ್ತಿದ್ದರು. ನಾವೂ ಕೂಡ ನಿದ್ದೆ ಮಾಡಬಾರದೆಂದು ಯತ್ನಿಸುತ್ತಿದ್ದೆವು. ಆದರೆ ನಮಗೆ ಗೊತ್ತಾಗದಂತೆಯೆ ನಿದ್ದೆ ಬಂದೇ ಬಿಡುತ್ತಿತ್ತು.

ಮಧ್ಯರಾತ್ರಿಗೆ ಮುಂದಿನ ಸಮಾರಂಭ ಪ್ರಾರಂಭ. ಧೂಪಹಾಕುವುದು, ಪಟಾಕಿ ಸುಡುವುದರಿಂದ ಮೊದಲು. ನಮ್ಮ ದೊಡ್ಡ ದೊಡ್ಡಪ್ಪ ಮನೆಯ ಗಂಡಸರನ್ನೆಲ್ಲ ಮನೆಯ ಮುಂಬಾಗಿಲಿಗೆ ಕರೆದೊಯ್ದು, ಅದಕ್ಕೆ ಬೀಗ ಹಾಕಿದ. ಮನೆಯ ಸಂಪತ್ತು-ಐಶ್ವರ್ಯ ಮನೆಯಲ್ಲಿಯೇ ಉಳಿಯಲಿ ಎಂಬ ಸಂಕೇತ ಇದು. ಅನಂತರ ಚಿಕ್ಕವರೆಲ್ಲಾ ದೊಡ್ಡವರಿಗೆ ನಮಸ್ಕಾರ ಮಾಡುತ್ತಿದ್ದರು. ಬರೀ ಕೈಮುಗಿದು ಬಿಡುತ್ತಿದ್ದೆವು. ಇದಕ್ಕೆ 'ಟ್ಸ್ಜು ಸುಯ್' ಎಂದು ಹೆಸರು-ಹಳೆಯ ವರ್ಷದ ಬೀಳ್ಕೊಡಿಗೆ.

ಮನೆಯ ಹೆಂಗಸರು ಮಕ್ಕಳು ಈ ಹಬ್ಬಕ್ಕೆ ತಾವು ಮಾಡಿದ ಕಸೂತಿ, ಹೊಲಿಗೆ ಕೆಲಸ, ಕರವಸ್ತ್ರ, ಸುವಾಸನೆ ತೈಲಗಳನ್ನು ಪರಸ್ಪರ ಉಡುಗೊರೆ ಕೊಡುತ್ತಿದ್ದರು. ಅಜ್ಜಿಗೆ ಇಡೀ ವರ್ಷ ಸಾಕಾಗುವಷ್ಟು ಮೊಟ್ಟು ದೊರೆಯು ತ್ತಿದ್ದವು. ಗಂಡು ಹುಡುಗರಲ್ಲಿ ಈ ರೀತಿ ಉಡುಗೊರೆ ಹಂಚಿಕೊಳ್ಳುವ ಸಂಪ್ರದಾಯವೇಕಿರಲಿಲ್ಲವೋ!

ಈ ಉತ್ಸವಕ್ಕೆ ಕೆಲವು ಹಿರಿಯರು ಬಂದಿರಲಿಲ್ಲ. ಅವರೆಲ್ಲರಿಗೂ ನಮ್ಮ ವಂದನೆ ಅರ್ಪಿಸಲು ಹದಿನೈದು ವರ್ಷದ ಕೆಳಗಿನವರೆಲ್ಲ ಹೊರಡುತ್ತಿದ್ದೆವು. ಹುಡುಗರದೊಂದು, ಹುಡುಗಿಯರದೊಂದು, ಎರಡು ಗುಂಪು. ಹುಡುಗರ ಗುಂಪು ಮೊದಲು. ಅಜ್ಜ ಮಲಗಿಕೊಂಡಿದ್ದರು. ಅವರನ್ನು ಎಬ್ಬಿಸದೆ

ಅಜ್ಜಿಯ ಬಳಿಗೆ ಹೋದೆವು. ನಾವು ಬರುವುದು ಆಕೆಗೆ ಗೊತ್ತು. ನಮ
ಗಾಗಿ ಮೆತ್ತನೆ ರೇಸಿಮೆ ಮೆತ್ತೆಯನ್ನು ಹಾಸಿರುತ್ತಿದ್ದಳು. ಅದರ ಮೇಲೆ
ಮೊಳಕಾಲೂರಿ ನಮಸ್ಕರಿಸುತ್ತಿದ್ದೆವು. ಒಂದು ಸಲ ನಾವು ಎಂಟು ಮಂದಿ
ಹುಡುಗರು ಇದ್ದೆವು. ಇದರಲ್ಲಿ ಮೂರು ವರ್ಷದ ನನ್ನ ತಮ್ಮನೂ, ಒಂದು
ವರ್ಷ ತುಂಬದ ಸೋದರಳಿಯನೂ ಇದ್ದರು. ದಾಯಿ ಅವನನ್ನು ಎತ್ತಿ
ಕೊಂಡು ಬಂದಳು. ನಾವು ನಮಸ್ಕರಿಸಿದೆವು. ನಾವು ಪ್ರತಿಯೊಬ್ಬರೂ ನಮ
ಸ್ಕರಿಸುವಾಗ ನಮ್ಮೆಲ್ಲರೊಂದಿಗೆ ಮೂರು ವರ್ಷದ ಈ ಮಗು ಕೂಡ ಬಾಗು
ತ್ತಿದ್ದ. ತನ್ನ ಸರತಿ ಬಂದಾಗ ಮರೆತು ಹೋದ. ಮೊದಲು ಎಡಗಾಲು
ಮಡಿಚಿ ಮೊಳಕಾಲೂರಿ ಅನಂತರ ಬಲಗಾಲು ಊರಬೇಕೆಂಬುದು ಗೊತ್ತಿರ
ಲಿಲ್ಲ. ಎರಡೂ ಕಾಲು ಒಂದೇ ಸಲ ಮಡಿಚಿ ಉರುಳಿಕೊಂಡಿತು. ನಾವು
ನಕ್ಕೆವು.

ಅಕ್ಕನ ಕೂಸೂ ಕೂಡ ತನಗೆ ತಿಳಿದಂತೆ ಹೊರಳಾಡಿತು. ದಾಯಿ
ಅದನ್ನು ಹಿಡಿದುಕೊಂಡಳು. ನಮಗೆ ಹೊಸ ವರ್ಷದ ಆಶೀರ್ವಾದ ಮಾಡಿ
ಅಜ್ಜಿ ತಾಮ್ರದ ನಾಣ್ಯಗಳ ಚೀಲವನ್ನು ಪ್ರತಿಯೊಬ್ಬನಿಗೂ ಕೊಟ್ಟಳು.
ಅದಕ್ಕೆ ಪಟಾಕಿಗಳನ್ನೂ ಕಾಗದದ ದೀಪಗಳನ್ನೂ ಕೊಳ್ಳುತ್ತಿದ್ದೆವು. ಹೀಗೆ
ಎಲ್ಲ ಹಿರಿಯರನ್ನು ಕಂಡು ಮುಗಿಸುವ ವೇಳೆಗೆ ನಮ್ಮ ಜೇಬು ತುಂಬು
ತ್ತಿತ್ತು. ಮನೆಬಿಟ್ಟು, ತೋಟ ದಾಟಿ, ಊರೊಳಗೆ ನಾವು ಹೋದರಲ್ಲವೆ ಹಣ
ಖರ್ಚಾಗಬೇಕು. ಕೊನೆಗೆ ಇದೆಲ್ಲ ಕೆಲಸದವರ ಕೈಸೇರುತ್ತಿತ್ತು.

ನಾವು ಅಜ್ಜಿಯ ಕೋಣೆಯಿಂದ ಹೊರಬರುವ ಹೊತ್ತಿಗೆ ಹುಡುಗಿಯರ
ಗುಂಪು ಅಲ್ಲಿಗೆ ಬರುತ್ತಿತ್ತು. ನಮಗೂ ಅವರಿಗೂ ನಮಸ್ಕರಿಸುವ ವಿಧಾನ
ದಲ್ಲಿ ಸ್ವಲ್ಪ ವ್ಯತ್ಯಾಸ. ನಾವು ಕೈ ಜೊಡಿಸುತ್ತೇವೆ, ಅವರು ಜೋಡಿಸರು.

ಅಂದು ನಸುಕಿನಲ್ಲಿ ನಾಲ್ಕು ಐದು ಗಂಟೆಗಳ ನಡುವೆ ದೊಡ್ಡಪ್ಪ ನಮ್ಮೆಲ್ಲ
ರನ್ನೂ ಎಬ್ಬಿಸಿ ಹೆಬ್ಬಾಗಿಲಿಗೆ ಕರೆದುಕೊಂಡು ಹೋಗುತ್ತಿದ್ದ. ಅಲ್ಲಿ ಸ್ವಲ್ಪ
ತಂತ್ರಭಾಗ. ಬಾಗಿಲು ತೆರೆದು ಹೊರಗೆ ನಾಲ್ಕು ಹೆಜ್ಜೆಯಿಟ್ಟು "ಕಂಗ
ಹೋಷನ್‌ಕ್ಷಿ" ("ಹೊಸವರ್ಷ ಸುಖಪ್ರದವಾಗಲಿ") ಎಂದು ಪರಸ್ಪರ ಹೇಳಿ
ಕೊಳ್ಳುತ್ತಿದ್ದೆವು. ಆದರೆ ಈ ಸಮಯದಲ್ಲಿ ನಮಗೆ ಉಡುಗೊರೆ ಇರುತ್ತಿರ

ಲಿಲ್ಲ. ಒಂದು ಸಲ ಚಿಕ್ಕ ತಮ್ಮ ಬಂದಿರಲಿಲ್ಲ. ಮಲಗಿದ್ದ. ನಾನೂ ನಡುವೆ ಒಂದೆರಡು ಗಂಟೆ ನಿದ್ದೆ ಮಾಡಿದ್ದೆ.

ಹೊರ ಬಾಗಿಲ ಸಂದಿನಲ್ಲಿ, ಕೆಳಗೆ ಅಭಿನಂದನೆಯ ಕಾರ್ಡುಗಳ ರಾಶಿ ಬಿದ್ದಿರುತ್ತಿತ್ತು. ಆಗ ಈ ಕಾರ್ಡುಗಳನ್ನು ಅಂಚೆಯಿಂದ ಕಳಿಸುತ್ತಿರಲಿಲ್ಲ. ಹೊಸ ವರ್ಷದ ದಿನ ಪ್ರತ್ಯಕ್ಷ ಕಂಡು ವಂದನೆಗಳನ್ನು ಅರ್ಪಿಸಲು ಸಾಧ್ಯವಿಲ್ಲ ದವರ ಮನೆಗೆ ಬೆಳಗಾಗುವುದರೊಳಗೆ ಹೋಗಿ ಕಾರ್ಡುಗಳನ್ನು ಬಾಗಿಲಿನಲ್ಲಿ ಹಾಕಿ ಬರುತ್ತಿದ್ದೆವು. ಈ ಅಭಿನಂದನೆ ಗಾಢ ಮೈತ್ರಿಯ ಕುರುಹು. ಹಿರಿಯ ರೆಲ್ಲ ನಿದ್ರೆಮಾಡುತ್ತಿದ್ದರು. ಇಬ್ಬರು ಚಿಕ್ಕ ಹುಡುಗರನ್ನು ಆರಿಸಿ ಮುಂದಿನ ಕೈ ಸಾಲೆಯಲ್ಲಿ ಬಂದು ಹೋಗುವವರಿಗೆ ಉತ್ತರ ಕೊಡಲು ನಿಲ್ಲಿಸಲಾಗಿತ್ತು. ನಾನು ಹನ್ನೆರಡು ವರ್ಷದವನಾದಾಗ ನನಗೆ ಈ ಕೆಲಸ ಕೊಡಲಾಗಿತ್ತು. ಅದಕ್ಕಿಂತ ಚಿಕ್ಕವರಿಗೆ ಈ ಕೆಲಸ ಕೊಡಲಿಕ್ಕೆ ಬರುವಂತಿಲ್ಲ. ಮನೆಗೆ ಬಂದ ಜನವನ್ನು ಸರಿಯಾಗಿ ಗೌರವಿಸಲು ಸಾಕಷ್ಟು ಅನುಭವ ಬೇಕು ಉದಾಹರ ಣೆಗಾಗಿ, ನನ್ನ ದೊಡ್ಡಪ್ಪನ ಗೆಳೆಯರೊಬ್ಬರು ಬಂದರೆನ್ನಿ, ಅವರು ಹಿರಿಯ ರನ್ನು, ತಮ್ಮ ಸ್ನೇಹಿತರನ್ನು ಅವರ ಹೆಂಡತಿಯರನ್ನು ನೋಡ ಬಯಸುತ್ತಾರೆ. ಅತಿಗೌರವದಿಂದ "ನಿಮಗೆ ಬೇಕಾದವರೆಲ್ಲ ತುಂಬಾ ಕೆಲಸದಲ್ಲಿದಾರೆ. ಬಿಡುವು ನೋಡಿ ನಾನು ನಿಮ್ಮ ಶುಭಾಗಮನದ ವಿಷಯ ತಿಳಿಸುತ್ತೇನೆ, "ನಿಮಗೆ ನಮ್ಮ ಅಭಿನಂದನೆ" ಎಂದು ಹೇಳಬೇಕಾಗುತ್ತದೆ. ಇದನ್ನು ಕೇಳಿ ಅವರು ತಾವು ತಂದ ಅಭಿನಂದನೆಯ ಕಾರ್ಡನ್ನು ಕೊಟ್ಟು ಹೋಗುತ್ತಾರೆ. ನಾನವರನ್ನು ಮುಂಬಾಗಿಲಿನ ವರೆಗೂ ಹೋಗಿ ಮತ್ತೊಮ್ಮೆ ವಂದಿಸಿ ಕಳಿಸಿ ಬರಬೇಕು. ಈ ಸಂಭಾಷಣೆಯೆಲ್ಲಾ ಬಹಳ ಗೌರವಪೂರ್ಣ, ಅರ್ಥ ವಂತ, ತುಂಬಾ ಅಲಂಕಾರ ಉತ್ಪ್ರೇಕ್ಷೆಗಳದು. ಅದನ್ನು ವಿವರಿಸಲಾರೆ. ಅದರೆ ನಾನು ಮೊದಲನೆ ಸಲವೇ ಚೆನ್ನಾಗಿ ಪಾತ್ರ ವಹಿಸಿದೆ. ನಾಲ್ಕಾರು ಜನ ಒಮ್ಮೆಲೇ ಬಂದರು. ಬಂದವರೆಲ್ಲಾ ತೀರ ಹತ್ತಿರದವರು. ಅವರನ್ನು ಹಾಗೇ ತಿರುಗಿ ಕಳಿಸುವುದು ಮಾತುಗಳಿಂದಲೂ ಸಾಧ್ಯವಿರಲಿಲ್ಲ.

ನಮ್ಮ ಹಿರಿಯರೂ ಈ ರೀತಿ ಅಭಿನಂದನೆಯ ಕಾರ್ಡುಗಳನ್ನು ಕೊಟ್ಟು ಕಳಿಸುತ್ತಿದ್ದರು. ಹೋಗಬೇಕಾದ ಮನೆಗಳನ್ನು ಬೇರೆ ಬೇರೆ ಭಾಗ ಮಾಡಿ ಒಂದೊಂದು ಕಡೆಗೆ ಒಬ್ಬರನ್ನು ಕಳಿಸಿಕೊಡುತ್ತಿದ್ದರು. ಒಂದೇ ದಿನದಲ್ಲಿ

ಎಲ್ಲರಿಗೂ ಮುಟ್ಟಿಸಬೇಕೆಂದೇನೂ ಇರಲಿಲ್ಲ. ಅಭಿನಂದನೆಗಳೆಲ್ಲ ಬೆಳಗ್ಗೆ ಮಾತ್ರವೇ, ಊಟವಾದ ಮೇಲೆ ಕೊಡುತ್ತಿರಲಿಲ್ಲ. ತೀರ ಹತ್ತಿರದ ಆಪ್ತರು ಹಿರಿಯರನ್ನು ಮಾತ್ರ ನಮ್ಮ ತಂದೆ, ಚಿಕ್ಕ ಹೋಗಿ ನೋಡಿಬರುತ್ತಿದ್ದರು. ಕೇವಲ ಮುಖ ಪರಿಚಯವಿದ್ದವರಿಗೆ ಕಾರ್ಡು ಹಂಚುವ ಕೆಲಸ ಕೆಲಸಗಾರರದು. ಇದು ಬರೀ ಉಪಚಾರವೆಂದು ಎಲ್ಲರಿಗೂ ಗೊತ್ತು. ಆದರೆ ಬಿಡುವಂತಿಲ್ಲ. ಆಚಾರದ ಅಪಾರ ಶಕ್ತಿ ಅಂಥದು!

ಹೊಸ ವರ್ಷದ ಹಬ್ಬದ ಈ ಆಚಾರ ಸಂಪ್ರದಾಯಗಳೆಲ್ಲ ಈಗ ಶಿಥಿಲವಾಗಿವೆಯೆಂದು ನನಗೆ ದುಃಖವಾಗುತ್ತದೆ. ದುಃಖವಾಗಬೇಕಾದ್ದೇ. ಬರೀ ಔಪಚಾರಿಕ ಎಂದು ತಿರಸ್ಕರಿಸಬಾರದು. ಜೀವನದಲ್ಲಿ ನಿಜವಾದ ಬಾಲ್ಯದ ರಸನಿಮಿಷ ಎಷ್ಟು ದೊರೆತಾವು? ಹೊಸ ವರ್ಷದ ಆ ಹಬ್ಬದ ದಿನಗಳ ನಲಿದಾಟವನ್ನು ನೆನೆದರೆ ಎಂಥ ಬೆಲೆಬಾಳುವ ದಿನಗಳು! ಅವು ಕೊಟ್ಟ ಆನಂದ ಸ್ನೇಹಭಾವ ಇಷ್ಟು ಅಷ್ಟು ಅಲ್ಲ.



**ಚಹಾಕ್ಕೆ ಬೆರೆಸುವ ಚುನ್‌ಯಾ ಎಲೆ**

# ೮. ಗುರುಭಕ್ತಿ

ನನ್ನ ಬಾಲ್ಯದಲ್ಲಿ ನಮ್ಮ ಗುರುಗಳು ಅತಿ ಉನ್ನತ ಸ್ಥಾನ ಪಡೆದಿದ್ದರು. ಚೀನಾಭಾಷೆಯಲ್ಲಿ ಹೀಗೊಂದು ಗಾದೆ ಇದೆ: "ಒಂದೇ ದಿನವಾದರೂ ಗುರುವಾದವನು ಆ ಮಗುವಿನ ಬಾಳನ್ನೇ ತಿದ್ದಬಲ್ಲ.' ನನ್ನ ಹಿರಿಯರು ಕೂತು ಓದಿನ ವಿಷಯ ಮಾತಾಡುವಾಗೆಲ್ಲ ನನಗೆ ಈ ಮಾತು ನೆನಪಿಗೆ ಬರುತ್ತದೆ. ನಮ್ಮ ಪೂರ್ವಜರ ಮಂದಿರದ ಮುಂದೆ ಒಂದು ದೊಡ್ಡ ಹಲಗೆಯ ಮೇಲೆ ಸ್ವರ್ಗ, ಭೂಮಿ, ರಾಷ್ಟ್ರ, ತಂದೆ-ತಾಯಿ, ಗುರುಗಳು ಎಂಬ ಐದು ಶಬ್ದಗಳನ್ನು ಬರೆದಿದಾರೆ. ರಾಷ್ಟ್ರ ಎಂಬ ಮಾತು ಕ್ರಾಂತಿಯ ತರುವಾಯ ಬಂದದ್ದು. ಮೊದಲು ಚಕ್ರವರ್ತಿ ಎಂದು ಬರೆಯುತ್ತಿದ್ದರು. ತಾಯಿ-ತಂದೆಗಳ ತರುವಾಯ ಗುರುಗಳ ಸ್ಥಾನ ದೊಡ್ಡದು. ಪ್ರತಿ ತಿಂಗಳೂ ಎರಡು ಸಲ, ಹಿರಿಯರಲ್ಲಿ ಯಾರಾದರೊಬ್ಬರು ಈ ಮಂದಿರದ ಮುಂದೆ ಧೂಪ ಹಾಕಿ ಮನೆಯವರೆಲ್ಲರ ಪರವಾಗಿ ಪೂಜಿಸಿ ನಮಸ್ಕರಿಸುತ್ತಿದ್ದರು. ಈ ಪೂಜಾ ಪ್ರಸಂಗದಲ್ಲಿ ನಾನು ಮದ್ದು - ಪಟಾಕಿ ಹಾರಿಸುತ್ತಿದ್ದೆ. ಚಿಕ್ಕಮಕ್ಕಳು ಅಲ್ಲಿದ್ದರೆ ಅವರೂ ನಮಸ್ಕರಿಸುತ್ತಿದ್ದರು.

ಈ ಪೂಜಾ ಸಮಯದಲ್ಲ ಆ ಹಲಗೆಯನ್ನು ನೋಡಿದಾಗೆಲ್ಲ ತಂದೆ ತಾಯಿಗಳ ಜೊತೆಗೆ ಗುರುಗಳದೂ ಎಷ್ಟು ಪ್ರಾಮುಖ್ಯವೋ ಗೊತ್ತಾಗುತ್ತಿತ್ತು. ತಂದೆ-ತಾಯಿಗಳಿಗೆ ಗೌರವ-ಭಕ್ತಿಗಳನ್ನು ತೋರಿಸಬೇಕೆಂದು ಹಿರಿಯರನ್ನು ಪೂಜಿಸಬೇಕೆಂದು 'ಕಾನ್‌ಫ್ಯೂಷಿಯಸ್' ಹೇಳಿದಾನೆ. ಈ ಐದು ಮಾತನ್ನು ಬರೆಯುವ ಶಾಸನ ಪದ್ಧತಿ ಅವನ ಕಾಲದಲ್ಲೇ ಆರಂಭವಾಯಿತೋ ಏನೋ, ನನಗೆ ಗೊತ್ತಿಲ್ಲ. ಅವನಿಂದಲೇ ಮೊದಲಾಯಿತು ಎಂದರೆ ತನ್ನ ಶಿಷ್ಯರು ತನ್ನನ್ನು ಪೂಜಿಸರೇನೋ ಎಂಬ ಹೆದರಿಕೆ ಅವನಲ್ಲಿ ಬಂದಿರಬೇಕು.

ಚೀನೀಗಳು ತಮ್ಮ ಹಿರಿಯರಿಗೆ ಸಾಕಷ್ಟು ಹೆದರಿ ನಡೆಯುವವರೇ. ನಮ್ಮ ಮನೆಯಲ್ಲಿ ಚಂಡಶಾಸನನಾವ ಗುರುವನ್ನು ಬಿಟ್ಟರೂ ನಾವು ವಂದಿಸ ಬೇಕಾದ ಹಿರಿಯರು ಸಾಕಷ್ಟು ಇದ್ದರು. ಇಂಗ್ಲೀಷು ದೇಶದ ಮಕ್ಕಳಿಗೆ ಸ್ವಾತಂತ್ರ್ಯ ಹೆಚ್ಚು ಎಂದು ಗೊತ್ತಿದ್ದರೆ ನಾನು ಖಂಡಿತ ಯುರೋಪಿನಲ್ಲಿ ಬಾಲ್ಯಜೀವನ ಕಳೆಯಲು ಇಚ್ಛಿಸುತ್ತಿದ್ದೆ. ಅಲ್ಲೂ ನಾವು ತಿಳಿದಷ್ಟು ಸ್ವಾತಂತ್ರ್ಯ ಇಲ್ಲವೆಂದು ತಿಳಿದುಬರುತ್ತಿತ್ತೋ ಏನೋ !

ನಮ್ಮ ಗುರುಗಳು ಅಂಥ ಚಂಡಶಾಸನರಾಗಲು ನಮ್ಮ ಹಿರಿಯರು ಏಕೆ ಅವಕಾಶ ಕೊಡುತ್ತಿದ್ದರೋ ಕಾಣೆ. ಗುರುಗಳು ತುಸು ಬೇಸರದಿಂದ ಕೂತರೆ ಸಾಕು, 'ಹುಡುಗರು ಮಾತು ಕೇಳರೆ, ಅಭ್ಯಾಸ ಚೆನ್ನಾಗಿ ಮಾಡಿಲ್ಲವೆ ?' ಎಂದು ವಿಚಾರಿಸಿ, ನಮ್ಮ ಪರವಾಗಿ ಗುರುಗಳ ಕ್ಷಮೆ ಕೇಳಿ ಅವರನ್ನು ಸಮಾ ಧಾನ ಪಡಿಸುತ್ತಿದ್ದರು. ಇದರಿಂದ ನಮ್ಮ ಮನೆತನದ ಸ್ವಂತದ ಶಾಲೆಯಲ್ಲಿ ಕೂಡ ನಾವು ತುಂಬ ಜಾಗ್ರತೆಯಿಂದ ಇರಬೇಕಾಗುತ್ತಿತ್ತು. ಇದರಿಂದ ಗುರು ಗಳಿಗೆ ಮತ್ತಿಷ್ಟು ಪ್ರತಿಷ್ಠೆ ಬಂದಂತಾಗಿ ಅವರು ಹೆಚ್ಚು ಹೆಚ್ಚು ದಂಡಿಸು ತ್ತಿದ್ದರು. ಆದರೆ ಗುರುಗಳು ಹೆಚ್ಚು ಕಠೋರರಾಗುವರೆಂದು ನಮ್ಮ ಹಿರಿಯರು ನಂಬುತ್ತಿರಲಿಲ್ಲ. ಅಲ್ಲದೆ ಚಿಕ್ಕಂದಿನಲ್ಲಿ ಶಿಸ್ತಿನಿಂದ ಕಲಿಸದಿದ್ದರೆ ಮುಂದೆ ದೊಡ್ಡವರಾದಾಗ ಪ್ರಯೋಜಕರಾಗುತ್ತಾರೆಂದು ಅವರ ನಂಬಿಕೆ. 'ತಂದೆ-ತಾಯಿಗಳಿಗೆ ಮಮತೆ ಹೆಚ್ಚು. ತಮ್ಮ ಮಕ್ಕಳಿಗೆ ಕಲಿಸುವುದು ಶಕ್ಯವೇ ಇಲ್ಲ. ಆದ್ದರಿಂದ ಗುರುಗಳೇ ಇರಬೇಕು. ನಮ್ಮ ಹುಡುಗರಿಗೆ ಇಂತಹ ಒಳ್ಳೇ ಗುರುಗಳು ದೊರೆತದ್ದು ನಮ್ಮ ಪುಣ್ಯ" ಅನ್ನುತ್ತಿದ್ದರು. ಒಳ್ಳೆಯ ಗುರು ಎಂದರೆ ಎಲ್ಲದರಲ್ಲೂ ಪಂಡಿತ ಎಂದಲ್ಲ, ಸೋಮಾರಿಗಳಾದಂತೆ ಹುಡುಗರನ್ನು ದಂಡಿಸುವವರು. ಆಗ ಅವರು ತಮ್ಮ ಜವಾಬದಾರಿ ನಿರ್ವಹಿಸಿದಂತೆ ಲೆಕ್ಕ.

ಸೋಮಾರಿ ಅಥವಾ ತುಂಟ ಹುಡುಗನಿಗೆ ಎಂಥ ಚಿತ್ರಹಿಂಸೆ ಕೊಟ್ಟರೂ ಗುರುಗಳನ್ನು ತಂದೆ ತಾಯಿ ಏನೂ ಅನ್ನುತ್ತಿರಲಿಲ್ಲ. ಇಂತಹ ಕಠಿಣ ಶಿಕ್ಷೆಗೆ ಗುರಿಯಾದ ಹುಡುಗನ ತಾಯಿತಂದೆಗಳು ಕೋರ್ಟಿಗೆ ಹೋಗುವ ಮಾತು ಆ ಕಾಲದಲ್ಲಲ್ಲವೇ ಅಲ್ಲ. ತಮ್ಮ ಹುಡುಗನ ಪರವಾಗಿ ತಾವೇ ಗುರುಗಳ ಕ್ಷಮೆ ಬೇಡಿ ಹುಡುಗನನ್ನು ಮತ್ತೆ ಶಾಲೆಗೆ ಕರೆತಂದು ಒಪ್ಪಿಸುತ್ತಿದ್ದರು. ಹುಡುಗ ಒಬ್ಬನೇ ಶಾಲೆಗೆ ಹೋದರೆ ಗುರುಗಳು ಅವನನ್ನು ಶಾಲೆಗೆ ಸೇರಿಸದಿರಬಹುದು.

ಹೀಗಾದರೆ ತಂದೆ-ತಾಯಿಗೆ ತುಂಬಾ ಅವಮಾನ. ಅವರು ಸಮಾಜದಲ್ಲಿ ತಲೆ ಎತ್ತಿ ನಡೆಯಲಾರರು. ಗುರುಗಳಿಗೆ ಈ ರೀತಿ ಗೌರವ ಸಲ್ಲುತ್ತಿತ್ತು.

ವಿದ್ಯೆ ಚೆನ್ನಾಗಿ ಬರಬೇಕೆಂದರೆ ಈ ಪದ್ಧತಿಯೇನೋ ಸರಿ ಎನಿಸುತ್ತದೆ. ಆದರೆ ಈ ಪದ್ಧತಿ ಎಷ್ಟುಮಟ್ಟಿಗೆ ಆಚರಣೀಯವೋ ಚೀನೀ ಕುಟುಂಬಗಳಿಗೇ ನೂರಾರು ವರ್ಷಗಳಿಂದ ಗೊತ್ತು. ನಾನಾದರೂ ಈ ಪದ್ಧತಿ ಒಳ್ಳೆಯದಲ್ಲ ಎನ್ನಲಾರೆ ಆದರ ಇದರಿಂದ ಮಕ್ಕಳಿಗಾಗುವ ಹಿಂಸೆ ಅಸಹ್ಯ ವೇದನೆಗಳ ಕಲ್ಪನೆಯೇ ಹಿರಿಯರಿಗೆ ಇಲ್ಲವಲ್ಲ ಎಂದು ನನ್ನ ಸಂಕಟ !

ನಮ್ಮ ಗುರುಗಳು ಅನೇಕ ಬೆತ್ತಗಳನ್ನು ಇಟ್ಟುಕೊಂಡಿದ್ದರು. ಆದರೆ ಅವರೆಂದೂ ಹೊಡೆಯಲೇ ಇಲ್ಲ. ಒಂದು ವಿಚಿತ್ರ ಆಚಾರವಿತ್ತು ನಮ್ಮ ಮನೆಯಲ್ಲಿ. ಹೊಸದಾಗಿ ಮಗುವನ್ನು ಶಾಲೆಗೆ ಕಳಿಸುವ ದಿನ ಒಂದು ಬೆತ್ತವನ್ನು ತಾಯಿ ತಂದೆಗಳೇ ಕೆಂಪು ಕಾಗದದಲ್ಲಿ ಸುತ್ತಿ ಶಿಕ್ಷಕರಿಗೆ ಕಾಣಿಕೆಯಾಗಿ ಕಳಿಸುತ್ತಿದ್ದರು. ನಾನು ಆರು ವರ್ಷದವನಿರುವಾಗ ಶಾಲೆಗೆ ಸೇರಿಕೊಂಡೆ. ನನ್ನ ತಂದೆ ಕೂಡ ಈ ಆಚಾರದಂತೆ ಒಂದು ಬೆತ್ತ ಕಳಿಸಿದ್ದರು.

ನಮ್ಮ ಗುರುಗಳು ನಮ್ಮನ್ನು ದಂಡಿಸುತ್ತಿದ್ದ ಪದ್ಧತಿ ಬೇರೆ. ನನಗಿಂತ ಒಂದು ವರ್ಷ ಹಿರಿಯನಾದ ನನ್ನ ಚಿಕ್ಕಪ್ಪ ನಮ್ಮ ಜೊತೆಯಲ್ಲಿ ಓದುತ್ತಿದ್ದ. ಬಹಳ ತುಂಟ ಬಹಳ ಕೆಟ್ಟ ಅಕ್ಷರ ಬರೆಯುತ್ತಿದ್ದ. ಪಾಠ ಸರಿಯಾಗಿ ಹೇಳುತ್ತಿರಲಿಲ್ಲ. ಓದಿನಲ್ಲಿ ಶ್ರದ್ಧೆಯೂ ಇಲ್ಲ. ಆದರೆ ತುಂಬ ಹರಟೆಕೋರ, ಲೂಟಿಗಾರ. ತಾನು ಬರೆದದ್ದನ್ನು ಗುರುಗಳಿಗೆ ತೋರಿಸುವ ಮೊದಲೇ ನಮಗೆ ತೋರಿಸಿ "ಗಡ್ಡದ ಮುದುಕ" ನನ್ನನ್ನು ಹೊಡೆಯದೆ ಬಿಡುವುದಿಲ್ಲ ಅನ್ನುತ್ತಿದ್ದ. ನಾವು ನಗುತ್ತಿದ್ದೆವು.

"ಗಡ್ಡದ ಮುದುಕ" ಎಂಬುದು ಉಪಾಧ್ಯಾಯರಿಗೆ ನಾವಿಟ್ಟ ಹೆಸರು. ಇದನ್ನು ಮನೆಯಲ್ಲಾಗಲಿ ಹೊರಗಡೆಯಾಗಲಿ ಉಪಯೋಗಿಸಕೂಡದು. ಈ ಚಿಕ್ಕಪ್ಪನಿಂದ ಬೇಸತ್ತು ನಮ್ಮ ಗುರುಗಳು ಅವನಿಗೆ ಅಲ್ಲಿಯೇ ಇದ್ದ ಒಳಂಗಳದಲ್ಲಿ ತ್ಸಿಂಗ ಗಿಡದ ಸಮೀಪದಲ್ಲಿ ಬಗ್ಗಿ ನಿಲ್ಲುವ ಶಿಕ್ಷೆ ವಿಧಿಸುತ್ತಿದ್ದರು. ಹೀಗೆ ಮೊಣಕಾಲೂರಿ ಬಗ್ಗಿ ನಿಲ್ಲುವುದರ ಜೊತೆಗೆ ಅವನ ತಲೆಯ ಮೇಲೊಂದು ನೀರು ತುಂಬಿದ ಕಲ್ಲಿನ ಖಲಬತ್ತನ್ನು ಹೊರಿಸುತ್ತಿದ್ದರು. ಆ ನೀರು ಕೆಳಗೆ ಚೆಲ್ಲಬಾರದು, ಗುರುಗಳ ಎದುರಿಗೆ ನಿಂತಿರಬೇಕು. ಆದ್ದರಿಂದ

ಚಿಕ್ಕಪ್ಪ ಅತ್ತಿತ್ತ ಸರಿದಾಡುವಂತಿರಲಿಲ್ಲ. ಆಗ ನಮ್ಮ ಗುರುಗಳ ಹತ್ತಿರ ಗಡಿಯಾರವಿರಲಿಲ್ಲ. ಆದ್ದರಿಂದ ಒಂದು ಗೇಣುದ್ದದ ಊದಿನ ಕಡ್ಡಿ ಪೂರ್ತಿ ಆಗುವವರೆಗೆ ಚಿಕ್ಕಪ್ಪ ಈ ಶಿಕ್ಷೆಯನ್ನು ಅನುಭವಿಸಬೇಕು. ಸುಮಾರು ಅರ್ಧ ಗಂಟೆ ಆಗುತ್ತಿತ್ತು, ಚಿಕ್ಕಪ್ಪ ಈ ಶಿಕ್ಷೆಯನ್ನು ತುಂಬಾ ತಾಳ್ಮೆಯಿಂದ ಅನುಭವಿಸಿದ. ಅದನ್ನು ನೋಡಿ ನಾವೆಲ್ಲ ಶ್ರದ್ಧೆಯಿಂದ ಓದುತ್ತೇವೆ ಎಂದು ಗುರುಗಳ ಅಭಿಪ್ರಾಯ.

ನಮ್ಮ ಮನಸ್ಸು ಅಭ್ಯಾಸದ ಕಡೆಗೆ ಹೋಗದೆ ಚಿಕ್ಕಪ್ಪನನ್ನು ನೋಡ ಬಯಸುತ್ತಿತ್ತು. ಒಬ್ಬರಾದ ಮೇಲೆ ಒಬ್ಬರು ಹೊರಗೆ ಹೋಗಿ ಬರಲು ಶಿಕ್ಷಕರ ಅಪ್ಪಣೆ ಕೇಳುತ್ತಿದ್ದೆವು. ನಾವು ಏಕೆ ಹೊರಗೆ ಹೋಗುವೆವೆಂಬುದು ಗುರುಗಳಿಗೆ ಗೊತ್ತಾಗಿದ್ದರೂ ಅವರು ನಮ್ಮನ್ನು ಬೇಡ ಎನ್ನುತ್ತಿರಲಿಲ್ಲ. ನಾನು ಚಿಕ್ಕಪ್ಪನ ಹತ್ತಿರಕ್ಕೆ ಹೋದಾಗ ಆತ ಕಣ್ಣು ಚಿವುಟಿ ಮುಖ ಸೊಟ್ಟಮಾಡಿ ನನ್ನನ್ನು ಅಣಕಿಸಿದ. ನನಗೆ ನಗು ತಡೆದುಕೊಳ್ಳುವುದು ಕಠಿಣವಾಯಿತು. ಹೆಣ್ಣು ಹುಡುಗರು ಬೇರೆ ದಾರಿಯಿಂದ ಹೊರಗೆ ಹೋಗುತ್ತಿದ್ದರಾದ್ದರಿಂದ ಅವರಿಗೆ ಈ ದೃಶ್ಯ ನೋಡಲು ಸಿಗಲಿಲ್ಲ. ಊದಿನ ಕಡ್ಡಿ ಪೂರ್ತಿ ಉರಿದ ಮೇಲೆ ಚಿಕ್ಕಪ್ಪ ಏಳಬಹುದು. ಇಷ್ಟು ಹೊತ್ತು ಶಿಕ್ಷೆ ಅನುಭವಿಸಿದರೂ ಆತ ಅಷ್ಟು ದಣಿದಿರುತ್ತಿರಲಿಲ್ಲ ನನ್ನ ಐದನೆಯ ಕಕ್ಕನೂ ತುಂಟನೇ. ಈ ಶಿಕ್ಷೆ ಹೇಗೆ ಇರುತ್ತದೆ ಎಂದು ಚಿಕ್ಕಪ್ಪನನ್ನು ಕೇಳಿದ. ಚಿಕ್ಕಪ್ಪ ಗಂಭೀರನಾಗಿ "ತಲೆಯ ಮೇಲೆ ಕಲ್ಲು ಖಲಬತ್ತು ಹೊರಿಸಿದಾಗ ನನಗೆ ಹೇಳಲು ಬಾರದಂತಹ ವಿಚಿತ್ರ ಅನುಭವವೊಂದು ಆಯಿತು. ಸ್ಪಷ್ಟವಾಗಿ ಹೇಳಲಾರೆ. ಸರಿದಾಡ ಬೇಕೆಂದು ಅನಿಸಿತು. ಆದರೆ ಯಾವುದೋ ಶಕ್ತಿ ನನ್ನನ್ನು ಸರಿದಾಡಗೊಡದೆ ಗಟ್ಟಿ ಹಿಡಿದಿತ್ತು. ಆಗ ಪಕ್ಕನೆ ಒಬ್ಬ ಪೈಲವಾನನ ಕತೆ ನೆನಪಿಗೆ ಬಂದು ಈ ನೋವನ್ನು ಮರೆತೇ ಬಿಟ್ಟೆ. ನನಗೆ ದಣಿವಾಗಿದೆ ಅನಿಸುವ ಹೊತ್ತಿಗೆ ಎದ್ದು ನಿಲ್ಲಲು ಅಪ್ಪಣೆಯಾಯಿತು" ಎಂದು ಹೇಳಿ ಮುಗಿಸಿದ. ಕೇಳಿ ನಮಗೆ ನಗು ಬಂತು. ನಾವೂ ಕೂಡ ಈ ಶಿಕ್ಷೆ ಭೋಗಿಸಲು ಚಿಕ್ಕಪ್ಪ ನಮ್ಮನ್ನು ಮನ ವೊಲಿಸಲು ಪ್ರಯತ್ನಿಸಿದ ಎನಿಸಿತು. ನಮಗೆ 'ಗಡ್ಡದ ಮುದುಕ ಇಲ್ಲದಾಗ ಕಲ್ಲಿನ ತೊಟ್ಟಿ ಹೊತ್ತು ಅನುಭವ ಪಡೆಯಿರಿ, ನಿಮಗೂ ಈ ಶಿಕ್ಷೆಯಾದರೆ

ಪ್ರಯೋಜನವಾದೀತು ಎಂದು ಚಿಕ್ಕಪ್ಪ ನಮಗೆ ಹೇಳಿದ. ಆಗ ಚಿಕ್ಕಪ್ಪನ ವಯಸ್ಸು ಹನ್ನೊಂದು.

ಶಾಲೆಯಲ್ಲಿ ಗುರುಗಳ ಮಗನೂ ಸೇರಿ ಎಂಟು ಜನ ಹುಡುಗರು, ನಾಲ್ಕು ಹುಡುಗಿಯರು. ಹುಡುಗರು ಹೆಚ್ಚು ಕಾಲ ಅಭ್ಯಾಸ ಮಾಡುತ್ತಿದ್ದೆವು. ಹುಡುಗಿಯರು ಮೊದಲು ಪಾಠ ಹೇಳಿಸಿಕೊಂಡು ಹೋಗುತ್ತಿದ್ದರು. ದೊಡ್ಡವರಾದ ಮೇಲೆ ಮನೆಗೆಲಸ, ಕಸೂತಿಯ ಕೆಲಸ ಕಲಿಯಲು ಬಹಳ ಕಾಲ ಕಳೆಯಬೇಕಾಗುತ್ತಿತ್ತು.

ನಮಗೆ ಪಾಠ ಹೇಳುವುದೂ ಬೇರೆ ಬೇರೆ ರೀತಿ. ಅವನವನ ಒಲವು, ವಯಸ್ಸುಗಳ ಪ್ರಕಾರ. ಸುಲಭ ಶೈಲಿಯಲ್ಲಿ ರಚಿಸಿದ ಎರಡು ಬಗೆಯ ಪುಸ್ತಕ ಇದ್ದವು. ಹುಡುಗರಿಗೂ ಹುಡುಗಿಯರಿಗೂ ಅವನ್ನೇ ಬಳಸುತ್ತಿದ್ದರು. ಮೂರು ನಾಲ್ಕು ಅಕ್ಷರಗಳ ಮಾತುಗಳ ಪುಸ್ತಕ. ಚೀನಾದೇಶದಲ್ಲೆಲ್ಲ ಅಕ್ಷರ ಕಲಿಯಲು ಈ ಪುಸ್ತಕಗಳನ್ನೇ ಉಪಯೋಗಿಸುತ್ತಾರೆ. ಆಮೇಲೆ ಕಾನ್ಫೂಷಿಯಸ್‌ನ ಸಾಹಿತ್ಯದ ಸಂಗ್ರಹವನ್ನು ಮೊದಲು ಮಾಡಿ, ಉಳಿದ ವಿಷಯ ತಿಳಿಯಲಿ ಬಿಡಲಿ ಉರುವು ಹೊಡೆಯುತ್ತಿದ್ದೆವು. ಉಳಿದ "ನಾಲ್ಕು ಪುಸ್ತಕ." ಮೊದಲಿನ ಪುಸ್ತಕ ಬಾಯಿಪಾಠಮಾಡದೆ ಮುಂದಿನ ಪುಸ್ತಕ ಪ್ರಾರಂಭಿಸುತ್ತಿರಲಿಲ್ಲ. ಚುರುಕಾದವರು ಬೇಗ ಪಾಠ ಒಪ್ಪಿಸಿ ಮುಂದೆ ಹೋಗುತ್ತಿದ್ದೆವು. ಮೊದಮೊದಲು ಓದುವುದು, ಬಾಯಿಪಾಠ ಬಿಟ್ಟು ಬೇರೇನೂ ಇಲ್ಲ. ಈ ಬಾಯಿಪಾಠ, ಉರುವು ಏನು ಪ್ರಯೋಜನ ಎಂದು ಕೇಳುವ ಹಾಗಿರಲಿಲ್ಲ. ಕೇಳಬೇಕೆಂಬ ಕಲ್ಪನೆಯೂ ಆ ಚಿಕ್ಕ ವಯಸ್ಸಿನಲ್ಲಿ ಬರುತ್ತಿರಲಿಲ್ಲ. ಎಲ್ಲರಿಗೂ ಆ ಪದ್ಧತಿಯೇ ರುಚಿಸಿತ್ತು. ಒಂದೂ ತಪ್ಪಿಲ್ಲದೆ ನಾಲ್ಕೂ ಪುಸ್ತಕ ಬಾಯಿಪಾಠ ಬಂದನಂತರ ಗುರುಗಳು ನಮಗೆ ದಿನವೂ ಒಂದೆರಡು ಗಂಟೆ ಅವುಗಳ ಅರ್ಥವನ್ನು ಕ್ರಮವಾಗಿ ಹೇಳಿಕೊಡುತ್ತಿದ್ದರು. ಇದಾದ ಮೇಲೆ ಕಾನ್ಫೂಷಿಯಸ್‌ನ ಸುಪ್ರಸಿದ್ಧ ಭಾಷ್ಯಕಾರರ ಟೀಕೆ-ಟಿಪ್ಪಣಿಗಳನ್ನು ನಾವು ಓದಿಕೊಳ್ಳುತ್ತಿದ್ದೆವು.

ನನ್ನ ತರಗತಿಯಲ್ಲಿ ನಾನೇನೂ ಜಾಣನಲ್ಲ. ನನಗಿಂತ ಆರು ತಿಂಗಳು ಚಿಕ್ಕವನು ನನ್ನ ಕಕ್ಕನ ಎಂಟನೆಯ ಮಗ. ಮೂಲವನ್ನೂ ಭಾಷ್ಯವನ್ನೂ ಚೆನ್ನಾಗಿ ಹೇಳುತ್ತಿದ್ದ. ನಾನು ಮೂಲವನ್ನು ಮಾತ್ರ ಹಾಗೂ ಹೀಗೂ

ಕಷ್ಟಪಟ್ಟು ಹೇಳುತ್ತಿದ್ದೆ. ಈ ನಾಲ್ಕು ಪುಸ್ತಕ ಆದ ಮೇಲೆ ಹದಿಮೂರು ಹಳೆಯ ಗ್ರಂಥಗಳು, ಚೀನಾದೇಶದ ಇತಿಹಾಸ, ಪ್ರಾರಂಭವಾಗುತ್ತಿತ್ತು. ನಮ್ಮ ಮನೆಯ ಶಾಲೆಯಲ್ಲಿ ಈ ಹಳೆಯ ಗ್ರಂಥಗಳನ್ನು ಓದಲೂ, ಚೆನ್ನಾಗಿ ಬರೆಯಲೂ ಕಲಿಸುತ್ತಿದ್ದರು. ಎಲ್ಲಾ ಪುಸ್ತಕಗಳೂ ಕಾನ್ಫುಷಿಯಸ್ ತತ್ತ್ವಾನುಸಾರ ಬರೆದ ಗ್ರಂಥಗಳು.

ಬೆಳಿಗ್ಗೆ ಎರಡು ಗಂಟೆ ಹಳೆಯ ಗ್ರಂಥಗಳನ್ನು ಓದುತ್ತಿದ್ದೆವು. ಅನಂತರ ಎರಡು ಗಂಟೆ ಹೊಸ ಅಕ್ಷರ ನೋಡಿ ಬರೆಯುವುದು, ಅಂದವಾಗಿ ಬರೆವಣಿಗೆ ಕಲಿಯುವುದು. ಆಮೇಲೆ ಒಂದು ಗಂಟೆ ಅರ್ಥ ಹೇಳಿಕೊಡುವುದು. ಅಲ್ಲಿಗೆ ಆವತ್ತಿಗೆ ಪಾಠ ಪೂರ್ತಿ. ಹನ್ನೆರಡು ವರ್ಷಗಳ ಮೇಲಿನವರು ಇನ್ನೊಂದೆರಡು ಗಂಟೆ ಹೆಚ್ಚು ಕಲಿಯಬೇಕಾಗುತ್ತಿತ್ತು. ಇಷ್ಟೇ ಹೊತ್ತು ಕಲಿಯಬೇಕೆಂಬ ನಿರ್ಬಂಧವಿರಲಿಲ್ಲ. ಎಲ್ಲರಿಗೂ ಒಂದೇ ಪಾಠವೂ ಇಲ್ಲ. ಅವರವರ ಪಾಠ ಮುಗಿಸಿಕೊಂಡು ಅವರು ಹೋಗಬಹುದು.

ನಾನು ಹೆಚ್ಚಾಗಿ ಶಾಲೆಯಲ್ಲಿ ಇರಬಯಸುತ್ತಿದ್ದೆ. ಏಕೆಂದರೆ ತೋಟಕ್ಕೆ ಅದು ತೀರಾ ಹತ್ತಿರ. ಮನೆಯಲ್ಲಿ ಓರಗೆಯವರಾರೂ ಇಲ್ಲದಾಗ ನಾನೊಬ್ಬನೇ; ಏನೂ ತೋಚುತ್ತಿರಲಿಲ್ಲ. ಇಂತಹ ಹೊತ್ತಿಗೇ ಶಾಲೆ ಎಂದೂ ಇರಲಿಲ್ಲವಾದರೂ ನಾವು ಮಾತ್ರ ದಿನವೂ ಗುರುಗಳಿಗಿಂತ ಮೊದಲೇ ಶಾಲೆಗೆ ಹೋಗುತ್ತಿದ್ದೆವು. ಹುಡುಗಿಯರು ಗುರುಗಳು ಬಂದಮೇಲೇ ಬರುತ್ತಿದ್ದರು. ಅವರು ಮಧ್ಯಾಹ್ನ ಬರುತ್ತಲೇ ಇರಲಿಲ್ಲ. ಆರು ವರ್ಷದವನಾದ ಕೂಡಲೆ ನಾನು ಶಾಲೆಗೆ ಹೋಗಹತ್ತಿದೆ. ಒಂದು ವರ್ಷ ಬೆಳಗ್ಗೆ ಮಾತ್ರ ಹೋಗುತ್ತಿದ್ದೆ. ಆಗಲೂ ನನ್ನ ಇಚ್ಛೆಯಿದ್ದರೇನೇ ಪೂರಾ ಹೊತ್ತು ಇರುತ್ತಿದ್ದೆ.

ನಾನು ಶಾಲೆಗೆ ಸೇರಿದಾಗ ನನ್ನ ಅಣ್ಣಂದಿರು ಚೆನ್ನಾಗಿ ಅಕ್ಷರ ಬರೆಯಲು ಕಲಿತಿದ್ದರು. ನನ್ನ ಹತ್ತನೆಯ ವಯಸ್ಸಿಗೆ ನಾನು ಚೆನ್ನಾಗಿ ಬರೆಯಲು ಕಲಿತೆ. ಗುರುಗಳು ಅದನ್ನು ಮೆಚ್ಚಿದ್ದರು. ನಾನು ಬರೆಯುತ್ತಿದ್ದಾಗ ನನ್ನ ಹಿಂದೆ ಬಂದು ನಿಂತು ಗುರುಗಳು ನನ್ನ ಕೈಯಲ್ಲಿದ್ದ ಕುಂಚವನ್ನು ಕಿತ್ತಿಕೊಳ್ಳಲು ಪ್ರಯತ್ನಿಸಿದರು. ಸಾಧ್ಯವಾಗಲಿಲ್ಲ. ಕುಂಚವನ್ನು ಗಟ್ಟಿಯಾಗಿ ಹಿಡಿಯುವುದು ಬರೆಹಗಾರರ ಲಕ್ಷಣ. ಮೊದಲು ಕೈಮೇಲೆ

ಪುಸ್ತಕಗಳ ಭಾರವನ್ನಿಟ್ಟು ಬರೆಯಲು ರೂಢಿ ಮಾಡಿಸಿದರು. ಮುಂದೆ ಅಭ್ಯಾಸವಾದಂತೆ ಸರಿಯಾಗಿ ಬರೆಯಲು ಬಂತು.

ಗುರುಗಳು ಮಕ್ಕಳನ್ನು ಭಯಪಡಿಸುತ್ತಿದ್ದರು ಎನ್ನಲಾರೆ. ನೋಡಲಿಕ್ಕೆ ಮಾತ್ರ ಚಂಡಶಾಸನರು. ನಗುವಿಲ್ಲದ, ಯಾವಾಗಲೂ ಗಂಟಿಕ್ಕಿದ ಅವರ ಮುಖವೇ ಇದಕ್ಕೆ ಕಾರಣವಿರಬಹುದು. ತುಂಬಾ ವಿದ್ವಾಂಸರ ಹಾಗೆ ಗಂಭೀರ ವಾಗಿ ಇರುತ್ತಿದ್ದರು. ಚೀನೀಗಳ ಮುಖದಲ್ಲಿ ಆವೇಶ-ಭಾವನೆಗಳೇ ಕಾಣು ವುದಿಲ್ಲ; ಹಸುವಿನಂತೆ ಸಪ್ಪನೆ ಮುಖ ಎಂಬ ಇಂಗ್ಲೀಷರು ಹೇಳಿದ್ದನ್ನು ಕೇಳಿ ದೇನೆ. ನಮ್ಮ ಗುರುಗಳನ್ನು ನೋಡಿ ಅವರಿಗೆ ಹೀಗೆ ಅನಿಸಿರಬೇಕು.

"ಗಡ್ಡದ ಮುದುಕ" ನಮ್ಮ ಮನೆಯಲ್ಲಿ ಬಹುಕಾಲದಿಂದ ಇದ್ದರು. ನನ್ನ ಅಣ್ಣನಿಗೂ ಅವರೇ ಗುರುಗಳು. ಅವರ ತಂದೆ ನಮ್ಮ ತಂದೆಯ ಗುರುಗಳು. ಅವರ ಮಗ ನನ್ನ ಅಕ್ಕನ ಮಕ್ಕಳಿಗೆ ಗುರುವಾಗುತ್ತಾನೆ. ಕಿಯು-ಕಿಯಾಂಗಿನವರಲ್ಲ ಇವರು ಅದರಿಂದ ಇವರಿಗೆ ಆ ಊರಲ್ಲಿ ಹೆಚ್ಚು ಪರಿಚಯವಿಲ್ಲ. ಶಾಲೆ ಬಿಟ್ಟು ಹೊರಗೆ ಎಲ್ಲಿಗೂ ಹೋಗುತ್ತಿರಲಿಲ್ಲ. ಇದು ನಮ್ಮ ಹಿರಿಯರಿಗೆಲ್ಲ ತುಂಬಾ ಇಷ್ಟ ನಮಗೆ ಮಾತ್ರ ಸರಿ ಬರುತ್ತಿರಲಿಲ್ಲ.

ಒಂದೊಂದು ಸಲ ಅವರು ಶಾಲೆಯಲ್ಲೇ ನಿದ್ದೆ ಮಾಡುತ್ತಿದ್ದರು. ಇಂತಹ ಹೊತ್ತಿನಲ್ಲಿ ಆಟವಾಡಲು ವಿಶಿಷ್ಟ ಆಟಗಳು ಇದ್ದವು. ಅವುಗಳನ್ನಿಲ್ಲಿ ಬಣ್ಣಿಸಲು ಸ್ಥಳವಿಲ್ಲ. ಗುರುಗಳು ಎಚ್ಚತ್ತು ನಾವು ಸಿಕ್ಕುಬಿದ್ದಾಗ ಚಿಕ್ಕಪ್ಪ ನನ್ನೋ ಅಥವಾ ಐದನೆಯ ತಮ್ಮನನ್ನೋ ಉಡಾಳರ ನಾಯಕ ಎಂದು ಹಿಡಿದು ಶಿಕ್ಷೆ ಮಾಡುತ್ತಿದ್ದರು.

ಗುರುಗಳು ತೆಗೆದುಕೊಳ್ಳುತ್ತಿದ್ದ ಒಂದೇ ಒಂದು ರಜಾ ಹೊಸವರ್ಷದ ಹಬ್ಬಕ್ಕೆ. ಆಗ ಒಂದು ತಿಂಗಳು ತಮ್ಮೂರಿಗೆ ಹೋಗುತ್ತಿದ್ದರು. ಒಂದು ಸಲ ಅವರು ತಿರುಗಿ ಬಂದಾಗ ಮುಂಬಾಗಿಲಲ್ಲಿಯೇ ಕಂಡು ಬಗ್ಗಿ ನಮಸ್ಕರಿಸಿ "ಕುಂಗ-ಹೊ-ಷಿನ್-ಷಿ" ಎಂದು ಧನ್ಯವಾದಗಳನ್ನರ್ಪಿಸಿದೆ. 'ಚಾ-ಷೀನ್ -ಷೆಂಗ್ ಬಂದರು' ಎಂದು ಕೂಗಿ ಹೇಳಿದೆ. ಎಲ್ಲರೂ ಅವರನ್ನು ಸ್ವಾಗತಿಸಲು ಹೊರಗೆ ಬಂದರು. ಆದರೆ ಅವರ ಮುಖ ಕೆಂಪಾಗಿತ್ತು. 'ನಮ್ಮ ಮನೆಯ ಹೆಸರನ್ನು ನೀನು ನೆನಪಿಟ್ಟೆ, ಸರಿ. ಆದರೆ ಗುರುಗಳನ್ನು ಹಾಗೆ ಕರೆಯ

ಬಾರದು. ಷೆನ್ ಷಿಂಗ್ ಎಂದು ಕರೆಯಬೇಕು' ಎಂದು ಗದರಿಸಿದರು. ನಾನು ಕರೆದದ್ದರಲ್ಲಿ ಏನು ತಪ್ಪೋ ನನಗೆ ಆಗ ತಿಳಿಯಲಿಲ್ಲ.

ಆದರೆ ನನ್ನ ಅಜ್ಜನೂ ತಂದೆಯೂ ಗುರುಗಳ ಪಾದಗಳಿಗೆ ಬಿದ್ದು ಕ್ಷಮೆ ಕೇಳಿಕೊಳ್ಳಲು ಹೇಳಿದರು. ನಾನದರಂತೆ ಮಾಡಿದೆ ಮುಂದೆ ನನ್ನ ತಪ್ಪನ್ನು ತಿಳಿಸಿ ಹೇಳಿದರು. ಷೀನ್-ಷೆಂಗ್ ಎಂಬುದು ಗುರುಗಳನ್ನು ಕರೆಯಲಿಕ್ಕಲ್ಲ, ಸಾಮಾನ್ಯ ಪರಿಚಯದವರನ್ನು ಕರೆಯಲಿಕ್ಕೆ. ವಿದ್ಯಾರ್ಥಿಗಳು ಗುರುಗಳ ಅಡ್ಡಹೆಸರನ್ನು ಉಪಯೋಗಿಸಕೂಡದು. ಷೀನ್ ಷೆಂಗ್ ಎಂದರೆ ದೊಡ್ಡವರು, ಮೊದಲು ಹುಟ್ಟಿದವರು. ಚೌ ಎಂದರೆ ಮಿಸ್ಟರ್. ಷೀನ್ ಷೆಂಗ್ ಎಂದರೆ ಶಿಕ್ಷಕರು. ಕನ್ನಡದಲ್ಲಿ ಶ್ರೀಮಾನ್ ಮಾಸ್ತರ್ ಅಂದಹಾಗೆ. ಗುರುಗಳನ್ನು ಹೀಗೆ ಹೊಸಬರನ್ನು ಕರೆದಂತೆ ಕರೆಯಬಾರದು.

ನಮ್ಮ ಗುರುಗಳು ಬಹಳ ನಿರ್ದಾಕ್ಷಿಣ್ಯದವರು ಅವರ ಕಲಿಸುವ ಪದ್ಧತಿ ನನಗೆ ಸೇರದಿದ್ದರೂ ಅಂಥ ಚಂಡಶಾಸನರಾದ ಗುರುಗಳ ಕೈಯಲ್ಲಿ ಕಲಿತದ್ದು ನನಗೆ ಲಾಭವಾಗಿದೆ. ಇಲ್ಲದಿದ್ದರೆ ನನಗೆ ಕಾನ್‌ಫ್ಯೂಷಿಯಸ್ ಸಾಹಿತ್ಯ ಕರತಲಾಮಲಕವಾಗುತ್ತಿರಲಿಲ್ಲ. ಅವು ಚೆನ್ನಾಗಿ ಬರಲು ಗುರುಗಳೇ ಕಾರಣ. ನನ್ನ ಅಳಿಯನಿಗೆ, ಆಮೇಲಿನ ಹುಡುಗರಿಗೆ ಇಂಥ ಗುರುಗಳು ಸಿಗಲಾರರು. ಇಷ್ಟು ಶಿಸ್ತು ಅವರ ಪಾಲಿಗಿಲ್ಲ!



ಅನ್ನ ಮಾರುವವನು

# ೯. ಹೊಸ ಸೊಸೆ

ನಾವು ಹಳ್ಳಿಯಲ್ಲಿ ದಿಕ್ಕಿಲ್ಲದವರಂತೆ ಇರುವಾಗ ನಮ್ಮ ಅಂಣನ ಮದುವೆ ಯಾದುದಕ್ಕೆ ನಮ್ಮ ಅಜ್ಜಿಗೂ ತಂದೆಗೂ ತುಂಬ ಅಸಮಾಧಾನವಾಯಿತು. ನಮ್ಮ ಮೂಲ ಮನೆಯಲ್ಲಿಯೆ ಆಗಿದ್ದರೆ ನಮ್ಮ ಎಲ್ಲ ಆಪ್ತರೂ ಮಿತ್ರರೂ ಬರುತ್ತಿದ್ದರು. ಸಾವಿರಾರು ಜನ ಸೇರಿ ನಮಗೆಲ್ಲ ತುಂಬ ಸಂತೊಷವಾಗು ತ್ತಿತ್ತು. ರೈತ ಬಾಂಧವರೆಲ್ಲ ಮದುವೆಗೆ ಬಂದಿದ್ದರು. ಅದು ನಾವೂ ರೈತ ರೆಂಬುದನ್ನು ನೆನಪು ತಂದು ಕೊಡುತ್ತಿತ್ತು. ನನ್ನ ಅಂಣನ ಮದುವೆ–ಆ ಹಳ್ಳಿಯಲ್ಲಿ ಜರುಗಿದ ಈ ಮದುವೆ–ಪಟ್ಟಣದಲ್ಲಿ ನಡೆದ ನಮ್ಮ ಮನೆ ಮದುವೆಗಳಿಗಿಂತ ಹೆಚ್ಚು ಆನಂದದಾಯಕವಾಗಿತ್ತು. ನನ್ನ ಹತ್ತನೆ ಕಕ್ಕನ (ನಮ್ಮಣ್ಣನಿಗಿಂತ ಕೇವಲ ಒಂದು ವರ್ಷ ದೊಡ್ಡವನು) ಮದುವೆ ಯನ್ನೂ ಬೇರೆ ಕೆಲವು ಮದುವೆಗಳನ್ನೂ ನಾನು ಕಣ್ಣಾರೆ ಕಂಡಿದೇನೆ. ಈ ಮದುವೆಗಳನ್ನು ಹೋಲಿಸುವಷ್ಟು ಅನುಭವ ನನಗೆ ಬಂದಿದೆ. ಸಾಮಾನ್ಯವಾಗಿ ನಮ್ಮ ಮನೆಯಲ್ಲಿ ಪ್ರತಿ ವರ್ಷವೂ ಎರಡು ಮದುವೆ ಆಗುತ್ತ ಬಂದಿವೆ. ಒಂದು ಗಂಡು ಹುಡುಗನ ಮದುವೆ, ಇನ್ನೊಂದು ಹೆಣ್ಣು ಹುಡುಗಿಯ ಮದುವೆ. ಈ ಎರಡಕ್ಕೂ ತುಂಬಾ ಪೂರ್ವಸಿದ್ಧತೆ.

ಮದುವೆಯ ಸಿದ್ಧತೆಯೆಂದರೆ ಮನೆಗೆಲ್ಲಾ ಬಣ್ಣ ಬಳಿಯುವುದು, ರಂಗೋಲಿ ಮಾಡುವುದು ಇತ್ಯಾದಿ. ಹತ್ತಿರದ ನೆಂಟರೂ ಮಿತ್ರರೂ ಮದುವೆಗೆ ಮೊದಲೇ ಬಂದು ನೆರವಾಗುತ್ತಿದ್ದರು. ಅತಿಥಿಗಳಿಗೆ ಸ್ಥಳ ಮಾಡಿಕೊಡುವುದೇ ಒಂದು ದೊಡ್ಡ ಕೆಲಸ. ಮದುವೆಯ ಸಮಾರಂಭ ವೈಭವವಾಗಿ ಎರಡು ಮೂರು ದಿನ ನಡೆಯುತ್ತಿತ್ತು. ವೆಚ್ಚ ಹೆಚ್ಚು. ಎಷ್ಟು ಸಂಭ್ರಮವಾಗಿ ಮದುವೆ ನಡೆದರೆ ಅಷ್ಟು ಸುಖ ವಧೂವರರಿಗೆ ಎಂದು ಹಿರಿಯರು ನಂಬಿದ್ದರು.

ಇದು ನಿಜವೇ ? ಅನಿಸುತ್ತದೆ. ಹುಟ್ಟು, ಮದುವೆ, ಸಾವುಗಳಿಗೆ ನಾವು ಇಲ್ಲದ ಮಹತ್ತ್ವ ಕೊಟ್ಟಿದೇವೆ ಅನಿಸುತ್ತದೆ. ಇವುಗಳಿಗೆ ಮಹತ್ತ್ವ ಇಲ್ಲ ವೆನ್ನುವಂತಿಲ್ಲ. ಆದರೂ ವಿಪರೀತ ವೆಚ್ಚ ಮಾಡಿದರೇನೆ ಮದುವೆಗೆ ಶೋಭೆ ಎನಿಸುವುದಿಲ್ಲ.

ನನ್ನ ಅಂಣ ನಮ್ಮೆಲ್ಲರಿಗೆ ಹಿರಿಯ. ಆದ್ದರಿಂದ ಅವನ ಮದುವೆ ಮೊದಲು ಆಯಿತು. ಅತ್ತಿಗೆ ಹೊಸಬಳಲ್ಲ. ಮೊದಲು ಅನೇಕ ಸಲ ಕಂಡಿದೇನೆ. ನಮ್ಮ ಸೋದರ ಮಾವನ ಮಗಳೇ ! ಈ ಸಂಬಂಧದ ವಾಸನೆ ಮೊದಲೇ ಬಂದಿತ್ತು. ಒಂದು ದಿನ ಹೊಸ ಅಕ್ಕಿಯ ರೊಟ್ಟಿ ಮಾಡಿ ಕೊಟ್ಟಾಗ ನನಗೆ ಅರ್ಥವಾಯಿತು. ಇದೊಂದು ರೂಢಿ ನಮ್ಮಲ್ಲಿ. ಇದಕ್ಕೆ ವಿಶೇಷ ಅರ್ಥ. "ಹೊಸ ಅಕ್ಕಿ ರೊಟ್ಟಿ" ಯನ್ನು ಅಂಗೈಯಿಂದಲೇ ತಟ್ಟಿಮಾಡುತ್ತಾರೆ ಮದುವೆಗೆ ಮೊದಲು ಅತ್ತಿಗೆಗೆ ನನ್ನನ್ನು ಹೊಡೆಯುವ ಅಧಿಕಾರವಿಲ್ಲ. ಈಗ ನನ್ನ ಮೇಲೆ ಅಧಿಕಾರ ಮಾಡುವವರು ಇನ್ನೊಬ್ಬರು ಹೆಚ್ಚಾದರು. ಆ ದಿನ ಗಳಲ್ಲಿ ಚೀನಾದ ಹುಡುಗರು ಎಷ್ಟು ಅದೃಷ್ಟವಂತರೊ ! ನಮ್ಮ ಅತ್ತಿಗೆ ತುಂಬಾ ಒಳ್ಳೆಯವಳು.

ಮುಂದಿನ ವರ್ಷ ಅಂಣನ ಮದುವೆ ಎನ್ನುವಾಗಲೇ ಮದುವೆಯ ಪೂರ್ವಸಿದ್ಧತೆ ಮೊದಲಾಯಿತು. ಅಷ್ಟರಲ್ಲಿ "ಕ್ರಾಂತಿ" ಎದ್ದಿತು. ನಾವು ಹಳ್ಳಿಗೆ ಹೋಗಬೇಕಾಯಿತು. "ಕಿಯು-ಕಿಯಾಂಗಿ" ನಲ್ಲಿ ಪ್ರತ್ಯಕ್ಷ ದಂಗೆ ಯಾಗಲಿಲ್ಲ; ಆದರೆ, ಏನು ಕಾರಣವೋ ನಾವು ಒಂದು ವರುಷ ಹಳ್ಳಿಯಲ್ಲೇ ಇದ್ದೆವು. ಮದುವೆಯನ್ನು ಮುಂದಕ್ಕೆ ಹಾಕಲಿಲ್ಲ. ತಂದೆಯವರೂ ಇಬ್ಬರು ಕಕ್ಕಂದಿರೂ ನಿಂತು ಮದುವೆಯ ಪೂರ್ವ ಸಿದ್ಧತೆಯನ್ನೆಲ್ಲ ಮಾಡಿದರು. ಮೊದಲೇ ಅಚ್ಚು ಮಾಡಿಸಿದ್ದ ಕೆಂಪು ಲಗ್ನಪತ್ರಿಕೆಗಳೂ ಕೆಂಪು ಲಕೋಟೆಗಳೂ ಕೆಲಸಕ್ಕೆ ಬರಲಿಲ್ಲ. ಹಳ್ಳಿಯ ರೈತರಿಗೆ ಬೇರೆ ಲಗ್ನಪತ್ರಿಕೆ ಮಾಡಿಸಿದರು.

ಹಳ್ಳಿಯ ಮನೆಯಲ್ಲಿ ಕೋಣೆಯೊಂದನ್ನು ಅಲಂಕರಿಸಿದರು. ನನ್ನ ಅತ್ತಿಗೆಯ ತವರು ಮನೆಯವರು ಹತ್ತಿರದ ಹಳ್ಳಿಗೆ ಹೋದರು. ಆಗಿನಿಂದ ನಮ್ಮ ಮನೆಗೆ ಬರಲಿಲ್ಲ. ಮದುವೆಯ ಸಿದ್ಧತೆ ನಡೆದಿದ್ದಾಗ ನನ್ನ ಗೆಳೆಯರೆಲ್ಲ 'ಅತ್ತಿಗೆ ಕೈಯಲ್ಲಿ ಏಟು ತಿನ್ನುತ್ತೀಯಂತೆ, ಅಕ್ಕಿ ರೊಟ್ಟಿ ತಿನ್ನುತ್ತೀಯಂತೆ' ಎಂದು ಹಾಸ್ಯ ಮಾಡುತ್ತಿದ್ದರು.

ಮದುವೆಯ ಮುನ್ನಾದಿನ ವಧುವಿನ ಮನೆಯಿಂದ ವರನ ಮನೆಯ ವರೆಗೆ ಮಂಚ, ಛಪ್ಪರದಾನಿ, ಹಾಸಿಗೆ, ಕಸೂತಿ ವಸ್ತ್ರಗಳು, ಹೆಣಿಕೆ ಹಾಕಿದ ಬಟ್ಟೆ, ಇತ್ಯಾದಿ ಮೆರವಣಿಗೆಯಿಂದ ಬರಬೇಕಾಗಿತ್ತು. ಅದು ಸಂಪ್ರದಾಯ. ಆದರೆ ಈ ಮೆರವಣಿಗೆ ಆಗಲಿಲ್ಲ. ಏಕೆಂದರೆ, ಅಷ್ಟೊಂದು ಸಾಮಾನನ್ನು ಪಟ್ಟಣದಿಂದ ಹಳ್ಳಿಗೆ ತರುವುದು ಸಾಧ್ಯವಾಗಿರಲಿಲ್ಲ. ಎಲ್ಲವನ್ನೂ ಸೂಕ್ಷ್ಮಕ್ಕೆ ಇಳಿಸಲಾಗಿತ್ತು. ಹಳ್ಳಿಯವರೇ ಮದುವೆಯ ಅಡಿಗೆ ಮಾಡಿದ್ದರು. ವಧೂ-ವರರಿಗೆ ಅಂದವಾದ ಒಂದು ಮೇಣೆ ತರಿಸಿ ಇಡಲಾಗಿತ್ತು. ಸುತ್ತುಮುತ್ತಲಿನ ಹೆಂಗಸರು, ಗಂಡಸರು, ಹುಡುಗರು, ಹುಡುಗಿಯರು ಎಲ್ಲರೂ ಬಂದು ಸೇರಿದರು ಅವರೇ ನಮ್ಮ ಅಥಿತಿಗಳು. ಆ ಹಳ್ಳಿಯಲ್ಲಿ ಕೂಡ ಇಷ್ಟು ಜನ ಬಂದುದಕ್ಕೆ ಅಜ್ಜಿಗೆ ತುಂಬ ಸಂತೋಷವಾಯಿತು.

ನಮ್ಮ ಪೂರ್ವಜರ ಮಂದಿರವನ್ನು ಆ ಹಳ್ಳಿಯಲ್ಲೂ ತಾತ್ಪೂರ್ತಿಕವಾಗಿ ಕಟ್ಟಿದ್ದರು.

ಮದುವೆಯ ದಿನ ಪೂರ್ವಜರ ಮಂದಿರದ ಮುಂದೆ ಧೂಪ ಹಾಕಿ, ಪಟಾಕಿ ಹಾರಿಸಿದ ಮೇಲೆ ವರನು ಪೂರ್ವಜರ ವಿಗ್ರಹಗಳ ಮುಂದೆ ಮೊಳಕಾಲೂರಿ ಮೂರು ಬಾರಿ ವಂದಿಸಿ, ಒಂದು ಸಲ ಮೇಣೆಯನ್ನು ವಂದಿಸಿದ. ಆಮೇಲೆ ವಧುವನ್ನು ಕರೆತರಲು ಅದನ್ನು ಕಳಿಸಿದರು. ಜೊತೆಗೆ ಬ್ಯಾಂಡು ಬಜಂತ್ರಿ. ಅವರು ತಿರುಗಿ ಬರುವ ವಾದ್ಯ ಕೇಳುತ್ತಲೆ ಮನೆಯಲ್ಲಿದ್ದ ಬ್ಯಾಂಡು-ಬಜಂತ್ರಿ ಮೇಳದವರು ಬಾರಿಸಹತ್ತಿದರು. ವಧು ಕುಳಿತ ಮೇಣೆ ಮನೆಗೆ ಬರುತ್ತಲೆ ನಾನಾ ಪ್ರಕಾರದ ಪಟಾಕಿಗಳು ಹಾರಿದವು. ಅನೇಕ ಬಾಣಗಳನ್ನು ಬಿಟ್ಟರು. ಎಲ್ಲಾ ದೀಪಗಳನ್ನೂ ಮೇಣಬತ್ತಿಗಳನ್ನೂ ಹಚ್ಚಲಾಯಿತು. ಲಗ್ನದ ಮಂಟಪದಲ್ಲಿ ಆ ಮೇಣೆಯನ್ನು ಇಳಿಸಿದರು. ಅಂಣ ಮೇಣೆಯ ಬಳಿ ಸಾರಿ ಅದಕ್ಕೆ ವಂದಿಸಿ ಅದರ ಬಾಗಿಲು ತೆರೆದ. ಇಬ್ಬರು ಮುತ್ತೈದೆಯರು ವಧುವನ್ನು ಕರೆತಂದರು. ವಧು ಮುಖಕ್ಕೊಂದು "ಬುರಕಾ" ಹಾಕಿಕೊಂಡಿದ್ದರಿಂದ ಅವಳಿಗೆ ಏ ೂ ಕಾಣಿಸುವಂತಿರಲಿಲ್ಲ. ಇಂಗ್ಲೀಷರಲ್ಲಿ ವಧು ಗೆಳತಿಯರೊಂದಿಗೆ ನಡೆದು ಬರುತ್ತಾಳೆ. ನಮ್ಮ ಆಚಾರ ಬೇರೆ. ಮುತ್ತೈದೆಯರು ವಧುವಿನ ಬಲಕ್ಕೂ, ವರನು ಎಡಕ್ಕೂ ನಿಂತರು.

ವಧೂವರರಿಬ್ಬರೂ ಮೊದಲು ಮನೆಯ ಸಿಂಹದ್ವಾರಕ್ಕೆ ವಂದನೆಗಳನ್ನು ಅರ್ಪಿಸಿ, ಪೂರ್ವಜರ ಮಂದಿರವನ್ನು ವಂದಿಸಿದರು. ಕೊನೆಗೆ ಎದುರು ಬದುರು ನಿಂತು ಒಬ್ಬರಿಗೊಬ್ಬರು ಬಾಗಿ ವಂದಿಸಿದರು.

ಇವಾದ ಮೇಲೆ ನಾನೂ ಇನ್ನೊಬ್ಬ ಹುಡುಗನೂ ಕೈಯಲ್ಲಿ ಹೂವಿನಾಕೃತಿಯ ಮೇಣ ಬತ್ತಿಗಳನ್ನು ತೆಗೆದುಕೊಂಡು ವಧೂವರರನ್ನು ಅವರ ಹೊಸ ಕೋಣೆಗೆ ಕರೆದೊಯ್ದೆವು. ಅಲ್ಲಿ ವಧು ಹಾಸಿಗೆಯ ಮೇಲೆ ಕುಳಿತಳು. ಆ ಮೇಲೆ ವರನು ವಧುವಿನ ಅವಗುಂಠನವನ್ನು ತೆಗೆದ. ಆಗ ನಾನು ಅತ್ತಿಗೆಯ ಮುಖವನ್ನು ನೋಡಿದೆ. ಆಕೆ ನನ್ನನ್ನು ನೋಡಲೇ ಇಲ್ಲ. ಮುಖ ತಗ್ಗಿಸಿದಳು. ಕೆಂಪು ಉಡುಪು ತೊಟ್ಟು ಆಕೆ ತುಂಬ ಚನ್ನಾಗಿ ಕಂಡಳು. ಅವರ ಮೇಲೆ ನಾನಾ ಪ್ರಕಾರದ, ಶುಭಸೂಚಕವಾದ ಕಸೂತಿ ಚಿತ್ರಗಳಿದ್ದವು. "ಫಂಗ-ಕು ಆನ್" ಎಂಬ ಬಹು ಬೆಲೆಯುಳ್ಳ ಟೋಪಿಯನ್ನು ಧರಿಸಿದ್ದಳು.

ಬಳಗದವರ ಹಾಸ್ಯ ಪರಿಹಾಸ್ಯಗಳನ್ನು ತಪ್ಪಿಸಿಕೊಳ್ಳುವುದಕ್ಕೆಂದು ಅಂಣ ಮೆಲ್ಲನೆ ಹೊರಗೆ ಸರಿಯಹತ್ತಿದ. ಜನ ಬಿಡಲಿಲ್ಲ. ಕೋಣೆಯಲ್ಲಿ ನುಗ್ಗಿ ತುಂಬಿಕೊಂಡರು. ಅವರಿಗೆ ಇದೇ ಸಮಯ! ವಧು ನಗಕೂಡದು, ಮಾತನಾಡಕೂಡದು. ಅವಳನ್ನು ಕೆಣಕಿ ಮಾತನಾಡಿಸಲು ಹೆಂಗಸರೆಲ್ಲ ಚೇಷ್ಟೆ ಮಾಡತೊಡಗಿದ್ದರು. ಚೀನೀ ಸಾಹಿತ್ಯದ ಸುಪ್ರಸಿದ್ಧ ಶೃಂಗಾರಾತ್ಮಕ ವಾಕ್ಯಗಳನ್ನು ಎತ್ತಿ ಆಡುತ್ತಿದ್ದರು. ತಾವರೆ ಹೂವಿನ ಮರೆಯಲ್ಲಿ ಸರಸವಾಡುವ ಚಕ್ರವಾಕ ದಂಪತಿಗಳಹಾಗೆ ಇರಿ ಎಂದು ಹರಸಿದರು. ಹೀಗೆ ಸರಸದಲ್ಲಿ ಸಾಕಷ್ಟು ವೇಳೆ ಕಳೆದ ಮೇಲೆ ಜನರೆಲ್ಲರೂ ಹೊರಟು ಹೋದರು. ವಧೂ ವರರಿಬ್ಬರೂ ವಿಶ್ರಮಿಸಿದರು.

ಇದಾದನಂತರ ವಧೂ-ವರರ ಕೋಣೆಯಲ್ಲಿಯೇ ಊಟದ ಏರ್ಪಾಟು. ಕೇವಲ ನಾಲ್ಕು ಜನರಿಗೆ ವ್ಯವಸ್ಥೆ; ವಧು-ವರರಿಗೆ ಆ ಇಬ್ಬರು ಹೆಂಗಸರಿಗೆ. ಆದರೆ ನಾನೂ ನನ್ನ ಜೊತೆಗೆ ಬಂದ ಇನ್ನೊಬ್ಬನೂ ಕೋಣೆಯಿಂದ ಹೊರಗೆ ಹೋಗಲೆ ಇಲ್ಲ. ನಮಗೂ ಅಲ್ಲಿಯೇ ಊಟದ ವ್ಯವಸ್ಥೆ ಮಾಡಲಾಯಿತು.

ಆ ಇಬ್ಬರು ಮಹಿಳೆಯರು ಪಾನಪಾತ್ರೆಯಲ್ಲಿ ಮೊದಲು ಮದ್ಯವನ್ನು ಸುರುವಿದರು. ಅನಂತರ ಎರಡು ಪಾತ್ರೆ ತುಂಬಿ, ಒಂದರಿಂದ ಒಂದಕ್ಕೆ ಸುರಿದರು. ಇದು "ಹೊ - ಚಿನ್." "ಪಾನ ಪಾತ್ರಾಮಿಲನ." ಹೊಸ ಸತಿ

ಪತಿಗಳು ಹೀಗೆ ಕಲೆತು ಮೆಲೆತು ಸುಖಿಸಲಿ ಎಂಬ ಸಂಕೇತ. ಪಾಕಶಾಲೆಯ ಮುಖ್ಯ ಪರಿಚಾರಕ ಮದುವೆಯ ಕಾಣಿಕೆ ಎಂದು ಕಮಲದ ಮೇಲೆ ನಿಂತ ಚಕ್ರವಾಕಪಕ್ಷಿಯನ್ನು ಅಡಿಗೆಯ ಪದಾರ್ಥದಲ್ಲೇ ಮಾಡಿತಂದ. ತಿನ್ನುವದಕ್ಕಲ್ಲ ಇದು; ನೋಡಿ ಆನಂದಿಸಲಿಕ್ಕೆ. ಈ ಕಾಣಿಕೆ ಅರ್ಪಿಸುತ್ತ ಅಡಿಗೆಯ ಮುಖ್ಯಸ್ಥ ಮೊದಲೇ ಪಾಠಮಾಡಿದ್ದಂತೆ ಎಚ್ಚರ ವಹಿಸಿ ಹೆರಕೆ ಮಾಡಿದ. ವಧೂವರರು ಅವನಿಗೆ ಪ್ರತಿಕಾಣಿಕೆ ಕೊಡುತ್ತಾರೆ. ಊಟ ಮುಗಿದ ಮೇಲೆ ಕ್ರೌಂಚ ಪಕ್ಷಿಯನ್ನು ಅವನಿಗೇ ಕೊಡಲಾಯಿತು.

ವಧೂವರರ ಈ ಊಟ ಮುಗಿಯುತ್ತಿರುವಾಗ, ಎಲ್ಲರಿಗೂ ಊಟಕ್ಕೆ ವ್ಯವಸ್ಥೆ ಆಯಿತು ದೊಡ್ಡದೊಂದು ನಡುಮನೆಯ ತುಂಬಾ ಹೆಂಗಸರೂ, ಗಂಡಸರೂ, ಹುಡುಗರೂ ಊಟಕ್ಕೆ ಕುಳಿತರು. ಊಟ ನಡೆದಾಗ ಅಂಣ ಅತ್ತಿಗೆ ಇಬ್ಬರೂ ಬಂದು ಊಟಕ್ಕೆ ಕುಳಿತವರಿಗೆ ವಂದನೆ ಅರ್ಪಿಸಿದರು.

ನನ್ನ ಅತ್ತಿಗೆಯ ಜೊತಗೆ ನಮ್ಮ ಮನೆಗೆ ಬಂದ ದಾದಿ ಇಲ್ಲಿ ಕೆಲ ದಿನ ಇದ್ದಳು ಅತ್ತಿಗೆಯ ಹೊಸ ಬಾಳನ್ನು ಹೊಂದಿಸಿಕೊಂಡು ಹೋಗುವುದಕ್ಕೆ ಇವಳು ಸಹಾಯ ಮಾಡಬೇಕು.

ಅವಳು ಮರುದಿನ ಬೆಳಗ್ಗೆ ಕಮಲದ ಬೀಜಗಳನ್ನು ಕುದಿಸಿ ತಂದು ಸತಿ ಪತಿಗಳಿಬ್ಬರಿಗೂ ತಿನ್ನಲು ಕೊಡಬೇಕು. 'ವಂಶಾಭಿವೃದ್ಧಿಯಾಗಲಿ' ಎಂಬ ಸಂಕೇತ ಇದು. ಅನಂತರ ಅತ್ತಿಗೆಗೆ ಮದುವೆಯ ಬಟ್ಟೆ ಬದಲಾಯಿಸಿ, ಬೇರೆ ಬಟ್ಟೆ ಉಡಿಸಿ ಹೆರಳು ಹಾಕಬೇಕು ಅವಳ ದಾದಿ. ಆಗ ಮನೆಯ ಜನರನ್ನೆಲ್ಲ ಪರಿಚಯ ಮಾಡಿಕೊಡುವ ಕಾರ್ಯಕ್ರಮ.

ಸತಿಪತಿಗಳಿಬ್ಬರೂ ಮನೆಯ ಜನರನ್ನು ಒಬ್ಬೊಬ್ಬರನ್ನಾಗಿ ಕಂಡರು. ವಯಸ್ಸು ಸ್ಥಾನ-ಮಾನಗಳಿಗೆ ತಕ್ಕಂತೆ ಕೆಲವರಿಗೆ ವಂದಿಸಿದರು. ಕೆಲವರಿಗೆ ಹಾಗೇ ವಂದಿಸಿದರು. ಈ ಸಮಯದಲ್ಲಿ "ಪ್ರಥಮಪರಿಚಯದ ಗುರುತಾ"ಗಿ ನವದಂಪತಿಗಳಿಗೆ ಉಡುಗೊರೆ ಕೊಡುತ್ತಾರೆ. ಚಿಕ್ಕವರು ಕಾಣಿಕೆ ಕೊಡ ಕೂಡದು. ಅಜ್ಜಿಗೆ ನಮಸ್ಕರಿಸಲು ಬಂದಾಗ ಆಕೆ ಹೇಳಿದರು: ಹಳ್ಳಿಯಲ್ಲಿ ನಿಂತು ದಣಿವಾಗಲಿಲ್ಲ ನಿಮಗೆ. ಪಟ್ಟಣದಲ್ಲಿ ಆಗಿದ್ದರೆ ಮದುವೆ, ಎರಡು-ಮೂರು ಗಂಟೆ ಹಿಡಿಯುತ್ತಿತ್ತು ನಮಸ್ಕಾರಕ್ಕೆ." ಹೀಗೆ ಬಂದವರೆಲ್ಲರೂ ತಮ್ಮ

ಮನೆಗೆ ಹೋದರು. ಬಹಳ ಬೇಗ ಸಂಭ್ರಮ ಮುಗಿಯಿತಲ್ಲ ಎಂದು ಅಜ್ಜ ಅಜ್ಜಿ ಪೇಚಾಡಿದರು.

ಅತ್ತಿಗೆ ನನ್ನೊಡನೆ ಈ ಎರಡು ದಿನವೂ ಮಾತಾಡಲಿಲ್ಲ. ನಗಲಿಲ್ಲ. ಏನು ಕಾರಣವೋ! ಇದರಿಂದ "ಅಕ್ಕಿಯ ರೊಟ್ಟಿ"ಯ ಕತೆ ನಿಜವಾಗ ಬಹುದೋ ಎಂಬ ಭಯವೂ ಆಯಿತು. ಅಷ್ಟರಲ್ಲಿ ಕೋಣೆಯ ಹೊರಗಿದ್ದ ನನ್ನ ತಂಗಿ ಒಂದು ಹಾಡನ್ನು ಹಾಡಿದಳು. ದನಕಾಯುವ ಹುಡುಗರ ಜೊತೆಗೆ ಆಡುವಾಗ ನಾವು ಕಲಿತ ಹಾಡು :

ಬೆಟ್ಟದ ಮೇಲೆ ತಿಳಿನೀರು
ಬಯಲಾಗೆ ಚೆಂದಾನ ಹೂವು
ಮನೆಯಾಗೆ ಅಂದಾದ ಕನ್ನೆ
ಬಡವಿಯಾದ್ರೆ ಮದುವೆ ಸೊನ್ನೆ.

ಚಿಕ್ಕ ಮಗು ಹಾಡಿದ್ದನ್ನು ಕೇಳಿ ಎಲ್ಲರೂ ಗುಂಗಾದರು. ಅತ್ತಿಗೆಯೂ ಮುಗುಳು ನಗೆ ನಕ್ಕಳು. ಹಾಡು ಹೇಳಿದವಳನ್ನು ಕರೆತರಲು ನನಗೆ ಹೇಳಿ ದಳು. ನಾನು ಕರೆತಂದೆ. ಮತ್ತೆ ಅವಳಿಂದ ಹಾಡು ಹೇಳಿಸಲಾಯಿತು.

ಕರಿಮೆಣಸು ಬಲು ಖಾರ, ಹಸಿಶೊಂಠಿಯಂತೆ
ಮಡದಿ ಪ್ರೀತಿಯ ವಸ್ತು, ಹಡೆದಕ್ಕನಂತೆ
ತಾಯಿನುಡಿ ಹಿತವಲ್ಲ ಬರಿಯ ಕಸದಂತೆ
ಮಡದಿಯಾಡಿದ ಮಾತೆ ಸವಿ ಸವಿಯಂತೆ

ಜನರೆಲ್ಲ ಬಿದ್ದು ಬಿದ್ದು ನಕ್ಕರು. ಅಂಣ ಬಂದ ಮೇಲೆ ಮತ್ತೆ ಹಾಡಿಸಿ ದರು. ಅತ್ತಿಗೆ ನಗುತ್ತಲೇ ಇದ್ದಳು. ನಾನಾಕೆಯ ಬಳಿಗೆ ಓಡಿಹೋಗಿ 'ಈ ವರೆಗೂ ಏಕೆ ನಗಲಿಲ್ಲ' ಎಂದು ಕೇಳಿದೆ. ಆಮೇಲೆ ಹೇಳುತ್ತೇನೆಂದು ಎಲ್ಲಿಗೋ ಹೊರಟು ಹೋದಳು. ನಮ್ಮ ತಾಯಿ ಬದುಕಿದ್ದರೆ ಈ ಹಾಡನ್ನು ಕೇಳಿ ತುಂಬಾ ಮೆಚ್ಚುತ್ತಿದ್ದಳು. ತಾಯಿ ತೀರಿಹೋದುದರಿಂದ ಗಯ್ಯಾಳಿ ಅತ್ತೆ ಯನ್ನು ಕುರಿತು ಹಾಡು ಹಾಡುವುದು ಉಳಿದೇ ಹೋಯಿತು. ಅತ್ತೆಯ ಕಾಟ ಅತಿ ಪ್ರಸಿದ್ಧಿ. ಇದನ್ನು ಕುರಿತು ಬರೆದ ಅತ್ತೆಯ ಹಾಡು ಅನೇಕ ಇವೆ.

ತಾಯಿ ಮಗಳನು ಹೊಗಳಲೇನದು ಹಿರಿದು ?
ಅತ್ತೆ ಸೊಸೆಯನು ಹೊಗಳಲೇ ಹೂ ಬಿರಿದು !
ಮಗಳ ಹೊಗಳುವ ತಾಯಿ ಜಗದೊಳುಂಟು
ಸೊಸೆಯ ಹೊಗಳುವ ಅತ್ತೆ .. ....ಇಳೆಯೊಳುಂಟೇ ?

ಮದುವೆಯಾದ ಮೂರನೆ ದಿನ ಅತ್ತಿಗೆಗೆ ಮತ್ತೆ ಹೊಸ ಬಟ್ಟೆ ತೊಡಿಸಿದರು. ಇವು ದಿನಾ ಕೆಲಸಮಾಡುವಾಗ ತೊಟ್ಟುಕೊಳ್ಳುವ ಬಟ್ಟೆ. ಹೊಸ ಸೊಸೆ ಮೊದಲು ಸಲ ಅಡಿಗೆ ಮಾಡುವ ಆಚಾರವಿದೆ. ನಮ್ಮಲ್ಲಿ ಮದುವೆಯ ಉಳಿದ ಶಾಸ್ತ್ರೋಕ್ತ ವಿಧಿಗಳಂತೆಯೆ ಇದೂ. ಅತ್ತಿಗೆ ಅಡಿಗೆಮಾಡುವ ಸೌಟು ಆಡಿಸುವಾಗ 'ನಿಮ್ಮವರು ನಿಮ್ಮ ಬಳಗದವರು ಮೆಚ್ಚುವ ಹಾಗೆ ಮಾಡಮ್ಮ' ಎನ್ನುತ್ತಿದ್ದಳು ಅಜ್ಜಿ. ಅತ್ತಿಗೆ ಮಾಡಿದ ಅಡಿಗೆಯ ರುಚಿ ನಾವೆಲ್ಲರೂ ನೋಡಿದೆವು. ಅಲ್ಲಿಗೆ ಮದುವಯ ಕಾರ್ಯವೆಲ್ಲ ಮುಗಿಯಿತು.

ನಾಲ್ಕನೆ ದಿನ ನವದಂಪತಿಗಳಿಬ್ಬರೂ ಅತ್ತಿಗೆಯ ತವರುಮನೆಗೆ ಒಂದು ದಿನ ಇರಲು ಹೋದರು. ಮುಂದೆ ಅತ್ತಿಗೆ ನಮ್ಮ ಮನೆಯಲ್ಲೇ. ಅತ್ತೆ, ನಾದಿನಿಯವರೊಂದಿಗೆ ಮನೆಯಲ್ಲಿ ಅಡಿಗೆಕೆಲಸ ಮಾಡಿಕೊಂಡೇ ಇದಾಳೆ.

"ಮೊದಲನೆಯ ಸಲದ ಹುಳಿ"ಯ ಬಗ್ಗೆ ಬರೆಯುವಾಗ ನನಗೆ ಸುಪ್ರಸಿದ್ಧ "ಟೆಯಾಂಗ್" ಕವಿತೆಯೊಂದು ನೆನಪಿಗೆ ಬರುತ್ತಿದೆ. ಸಾಮಾನ್ಯವಾಗಿ ನಮ್ಮಲ್ಲಿ ಹುಡುಗಿಯರು ಇದನ್ನು ಚೆನ್ನಾಗಿ ಬಲ್ಲರು.

ಮದುವೆಯಾದ ಮೂರನೆಯ ದಿವಸ ಮದುಮಗಳು
ಹೋಗುವಳು ಅಡಿಗೆ ಮನೆಗೆ,
ಕೈತೊಳೆದು ನಿಂತು ಒಗ್ಗರಣೆ ಹಾಕಿ ಮಾಡಿದಳು
ಘಾಟನ್ನ ನೀರು ಸಾರು,
ಅತ್ತೆವರ ಬಾಯಿ ರುಚಿ ಗೊತ್ತಿರದ ಸೊಸೆ ತಾನು,
ಕೊಟ್ಟಾಳ ನಾದಿನಿಗೆ ರುಚಿನೋಡಿ ಹೇಳು.

---

# ೧೦. ಸುಂದರ ತರುಣನೊಬ್ಬನ ಕತೆ

ಕೆಲವು ದಿನಗಳಿಂದ ನಮ್ಮ ಮನೆಯಲ್ಲಿ ಏನೋ ಗದ್ದಲ, ಭರಾಟೆ. ನನಗೇನೂ ಅರ್ಥವಾಗಲಿಲ್ಲ. ಹೊಸ ಹೊಸಬರು ಮನೆಗೆ ಬಂದು ಹೋಗುತ್ತಿದ್ದರು. ನಮ್ಮ ತಂದೆ ಅಜ್ಜಿ-ಅಜ್ಜಿಯರೊಂದಿಗೆ ಏನೋ ಚರ್ಚಿಸುತ್ತಿದ್ದರು. ಒಂದು ದಿನ ಬೆಳಗ್ಗೆ ತಂದೆ ಇಬ್ಬರ ದೊಡ್ಡ ಮನುಷ್ಯರೊಂದಿಗೆ ನಮ್ಮ ಮನೆಯ ಮುಂಬಾಗಿಲಿನಲ್ಲಿ ಮಾತನಾಡುತ್ತಿದ್ದರು. ಅವರ ಜೊತೆಯಲ್ಲಿ ಒಬ್ಬ ಯುವಕ, ಅವನಿಗೆ ನಮ್ಮ ಅಣ್ಣನ ಪ್ರಾಯವಿರಬಹುದು. ನಾನೂ ಇಬ್ಬರು ತಮ್ಮಂದಿರೂ ನೋಡಿದೆವು. ಆ ಹೊಸ ಯುವಕನ ಕೈಯಲ್ಲಿ ಸೈಕಲ್ ಇತ್ತು. ನಾವು ಆ ವರೆಗೆ ಸೈಕಲ್ ನೋಡಿರಲಿಲ್ಲ. ತಂದೆಯುವರು ಅತಿಥಿಗಳನ್ನು ಒಳಗೆ ಕರೆತಂದರು. ಆ ಯುವಕ ತನ್ನ ಸೈಕಲನ್ನು ಅಲ್ಲಿಯೇ ನಿಲ್ಲಿಸಿ ಒಳಗೆ ಹೋದ.

ನಾನು ಓಡಿ ಹೋಗಿ ಅಕ್ಕನಿಗೆ ಹೇಳಿ ಈ ವಿಚಿತ್ರ ವಸ್ತುವನ್ನು ನೋಡಲು ಕರೆತಂದೆ. ಅವಳೂ, ಅವಳ ಓರಗೆಯ ಉಳಿದ ಅಕ್ಕ ತಂಗಿಯರೂ ಬಂದು ಬಾಗಿಲಿನ ಹಿಂದೆ ನಿಂತರು. ನಾವು ಮುಂದಿನ ಅಂಗಳಕ್ಕೆ ಹೋದೆವು. ಹೊಸದಾಗಿ ಬಂದ ಆ ಯುವಕ ನಮ್ಮ ಕಡೆಗೆ ವಿಚಿತ್ರವಾದ ಮುಗುಳುನಗೆ ಬೀರಿದ. ಮೂವರು ಹಿರಿಯರೂ ಬಾಗಿಲವರೆಗೆ ಬಂದು ನಮ್ಮನ್ನೂ ನೋಡಿದರು. ಹುಡುಗಿಯರು ಕೂಡಲೆ ಅಲ್ಲಿಂದ ಕಾಲ್ತೆಗೆದರು. ಅಕ್ಕನಂತೂ ಗಡಿಬಿಡಿಯಿಂದ ಮೊದಲು ಒಳಗೆ ಓಡಿಹೋಗುವಾಗ ಬಾಗಿಲು ತಗಲಿ ಎಲ್ಲಿ ಬಿದ್ದು ಬಿಡುವಳೋ ಎನಿಸುವಂತಿತ್ತು.

ಅಕ್ಕನನ್ನು ಆ ಯುವಕನಿಗೆ ತೋರಿಸಲಿಕ್ಕೆ ಬಂದಿದ್ದರಂತೆ ಅವರು. ಅನಂತರ ನನಗೆ ತಿಳಿಯಿತು. ಅಕ್ಕ ತಾನು ಮದುವೆ ಆಗಬಹುದಾದ

ಯುವಕನನ್ನು ನೋಡಿ ಏಕೆ ಓಡಿಹೋದಳೋ ! ಹುಡುಗಿಯರೆಲ್ಲ ಸಾಮಾನ್ಯ ವಾಗಿ ಹೊಸಬರನ್ನು ಕಂಡಾಗ ನಾಚಿಕೊಳ್ಳುತ್ತಾರೆ. ಅದರಲ್ಲೂ ಮದುವೆ ಯಾಗಬಂದ ಯುವಕನನ್ನಂತೂ ಕಣ್ಣೆತ್ತಿ ನೋಡುವುದೇ ಇಲ್ಲ. ಮತ್ತಷ್ಟೂ ನಾಚಿಕೊಳ್ಳುತ್ತಾರೆ.

ಅನಂತರ ಮನೆಯ ಹೆಂಗಸರೆಲ್ಲ ಅಕ್ಕನನ್ನು ತುಂಬಾ ಪೀಡಿಸು ತ್ತಿದ್ದರು. ಮದುಮಗನ ವಿಷಯದಲ್ಲಿ ಪ್ರಶ್ನೆಗಳಿಗೆ ಉತ್ತರ ಹೇಳಿದರೂ, ಮಾತಾಡಿದರೂ ಮದುವೆಯ ವಯಸಿನ ಹುಡುಗಿಗೆ ಸಲ್ಲ. ಮಾತಾಡಿದರೆ ಪ್ರಶ್ನೆ ಹೆಚ್ಚುತ್ತವೆ. ಅಣಕ, ಕಟಕಿ. ಹೆಚ್ಚಾಗುತ್ತಿತ್ತು. ನಮ್ಮ ಅಕ್ಕ ಸುಮ್ಮನಿದ್ದಳು. ಅವರ ಪ್ರಶ್ನೆಗಳಿಂದಲೇ ಮದುಮಗನ ವಿಷಯವಾಗಿ ಎಷ್ಟೋಟ ಸುದ್ದಿ ತಿಳಿದುಕೊಂಡಳು.

ಒಂದೆರಡು ತಿಂಗಳು ಕಳೆದಿರಬೇಕು. ಬೇಸಗೆಯ ಸಾಯಂಕಾಲ. ಹುಡುಗರು ಎಲ್ಲರೂ ನಮ್ಮ ತೋಟದಲ್ಲಿ ಅಜ್ಜಿಯನ್ನು ಸುತ್ತುವರಿದು ಕುಳಿ ತಿದ್ದೆವು. ಹೀಗೆ ಕುಳಿತಾಗ ದೇವರ, ದೆವ್ವದ ಕಥಗಳನ್ನು, ತನ್ನ ಚಿಕ್ಕತನದ ಸುದ್ದಿಯನ್ನು, ನಮ್ಮೂರಿನ ಹಳೆಯ ಚರಿತ್ರೆಯನ್ನು ಕತೆಹೇಳುವುದು ಅಜ್ಜಿಗೆ ವಾಡಿಕೆ. ನನಗೆ ಈ ಕತೆಗಳಲ್ಲಿ ಕೆಲವು ತುಂಬ ಹಿಡಿಸುತ್ತಿದ್ದವು ; ಕೆಲವು ಏನೂ ರುಚಿಸುತ್ತಿರಲಿಲ್ಲ. ಆದರೆ ಅಜ್ಜಿಗೆ ಎಷ್ಟು ವಿಷಯ ಗೊತ್ತಿದೆ ಎಂದು ನಮಗೆಲ್ಲ ಆಶ್ಚರ್ಯವಾಗುತ್ತಿತ್ತು. ಬಾರ್ಲಿ ನೀರಿನಿಂದ ಮಾಡಿದ ಬಿಳಿಯ ಮದ್ಯವನ್ನು ಕುಡಿದು ಕುಳಿತರೆ ಅಜ್ಜಿಗೆ ಕತೆ ಹೇಳಲು ತುಂಬಾ ಹುರುಪು. ನಮಗೆ ದೆವ್ವದ ಕತೆಗಳೇ ಹೆಚ್ಚಾಗೆ ಮೆಚ್ಚುಗೆ. ಬಹಳ ಭಯಂಕರ ಕಥ ಹೇಳಿದಾಗ ಅಕ್ಕನ ಭುಜವನ್ನು ಗಟ್ಟಿಯಾಗಿ ಹಿಡಿದುಹೊಳ್ಳುತ್ತಿದ್ದೆ. ಅಜ್ಜಿ ಬೇರೆ ಹೊಸ ಕತೆ ಹೇಳುವೆನೆಂದು ಪ್ರಸ್ತಾಪಿಸಿದರು.

ಅಜ್ಜಿ ಹೇಳತೊಡಗಿದಳು : ಪೋಯಾಂಗ್ ಸರೋವರದ ಬಳಿ ನೂರು ವರ್ಷಗಳ ಹಿಂದೆ ಒಂದು ಕುಟುಂಬವಿತ್ತು. ಅವರಿಗೆ ಮೂವರು ಚೆಲುವೆಯ ರಾದ ಮಕ್ಕಳು. ತಂದೆ–ತಾಯಿ ತುಂಬ ಶ್ರೀಮಂತರು, ಸುಸಂಸ್ಕೃತರು. ತಮ್ಮ ವಂಶವನ್ನು ಮುಂದೆ ನಡೆಯಿಸಿಕೊಂಡು ಹೋಗಲು ಅವರಿಗೆ ಸಂತಾನ ವಿಲ್ಲ. ಬಹಳ ಚಿಂತೆಯಾಯಿತು. ತಮ್ಮ ಮನೆಯ ಹೆಸರನ್ನು ಇಟ್ಟು ಕೊಂಡು ಮನೆ ಅಳಿಯನಾಗಲು ಒಡಂಬಡುವ ಒಬ್ಬ ಅಳಿಯ ಬೇಕಾಗಿದ್ದ.

ಒಬ್ಬ ಯುವಕ ಇದ್ದ. ಆದರೆ ಅವನು ತುಂಬಾ ಬಡವ. ಅಂತೇ ಅವನಿಗೆ ಸಮಾಜದಲ್ಲಿ ಸ್ಥಾನ–ಮಾನಗಳಿರಲಿಲ್ಲ. ಆದರೆ ತುಂಬಾ ಸುಂದರ. ಕಪ್ಪು ಕುರುಳು, ನೀಳವಾದ ಕೈ, ಉದ್ದುದ್ದ ಬೆರಳು, ಅವನಿಗಿದ್ದ ಬುದ್ಧಿಯ ದ್ಯೋತಕವಾಗಿದ್ದವು. ಬಡತನದಲ್ಲೂ ಅವನು ತುಂಬ ಸುಸಂಸ್ಕೃತನಾಗಿಯೇ ಇದ್ದ. ಬಹಳ ಜಾಣ. ಚಿಕ್ಕ ವಯಸ್ಸಿನಲ್ಲಿಯೆ ನಾಲ್ಕೂ ಪಠ್ಯಪುಸ್ತಕ ಓದಿ ಮುಗಿಸಿ. ಕಾನ್‌ಫುಷಿಯಸ್‌ನ ಐದು ಸಾಹಿತ್ಯ ಕೃತಿಗಳನ್ನೂ ಅಭ್ಯಾಸಮಾಡಿದ್ದ. ಸುಂದರವಾದ ಅಕ್ಷರ. ವೈಮುರಿದು ಕೆಲಸ ಮಾಡುತ್ತಿದ್ದ. ಯುವಕನ ಈ ಗುಣಗಳನ್ನೆಲ್ಲ ಕಂಡು ಮಕ್ಕಳಿಲ್ಲದ ಆ ತಂದೆ-ತಾಯಿ ಅವನೊಂದಿಗೆ ಸ್ನೇಹ ಬೆಳೆಸಿದರು. ಆ ಯುವಕನಿಗೆ ಮಾತ್ರ ಇದಾವುದೂ ಗೊತ್ತಾಗಿರಲಿಲ್ಲ.

ಕೆಲ ದಿನ ಕಳೆದ ಮೇಲೆ ಹಿರಿಯ ಮಗಳನ್ನು ಕರೆದು ಆ ಯುವಕನನ್ನು ಮದುವೆಯಾಗಲು ಆ ತಂದೆ–ತಾಯಿ ಹೇಳಿದರು. ಅದಕ್ಕವಳು "ಅಂತಹ ದರಿದ್ರನನ್ನು ಮದುವೆ ಮಾಡಿಕೊಂಡರೆ ನಾನು ಕೂಳಿಲ್ಲದೆ ಸತ್ತೇಹೋದೇನು! ತೊಡಲು ಬಟ್ಟೆಯೇ ಇಲ್ಲದವನನ್ನು ಹೇಗೆ ಮೆಚ್ಚಿದಿರಿ?" ಎಂದು ಹೇಳಿ ನಿರಾಕರಿಸಿದಳು.

ಎರಡನೆಯ ಮಗಳನ್ನು ಕೇಳಿದರು. "ಸಮಾಜದಲ್ಲಿ ಸ್ಥಾನ-ಮಾನಗಳಿಲ್ಲದ ಇವನನ್ನು ಮದುವೆಯಾದರೆ ನಮ್ಮ ಕುಟುಂಬಕ್ಕೇ ಗೌರವ ಕಡಮೆ" ಎಂದಳು.

ಕೊನೆಗೆ ಮೂರನೆಯ ಮಗಳನ್ನು ಕೇಳಲಾಯಿತು. ಅವಳು ಉತ್ತರ ಕೊಡಲಿಲ್ಲ. ನಾಚಿ ಬಾಗಿ ತಂದೆ-ತಾಯಿಗಳನ್ನೂ ವಂದಿಸಿ "ಐಶ್ವರ್ಯ, ಸ್ಥಾನ ಮಾನಕ್ಕಿಂತ ನಡತೆ ಮುಖ್ಯ. ಒಳ್ಳೇ ನಡತೆ ಇದ್ದರೆ ಎಲ್ಲವೂ ಬರುತ್ತವೆ" ಎಂದಳು.

ತಂದೆ-ತಾಯಿ ಅವಳ ವಿವೇಕಕ್ಕೆ ಸಂತೋಷಗೊಂಡು ನಿಶ್ಚಯಕಾರ್ಯವನ್ನು ಗೊತ್ತು ಮಾಡಿದರು.

ಇಷ್ಟು ಕತೆ ಹೇಳಿ ಅಜ್ಜಿ ಆ ಮೂರನೆ ಮಗಳದು ಕಾನ್‌ಫ್ಯೂಷಿಯಸ್ ಹೇಳಿದ ಪ್ರಕಾರ ಎಷ್ಟು ಒಳ್ಳೆ ನಡತೆ, ವಿಧೇಯತೆ, ಸಾತ್ತ್ವಿಕತೆ ಎಂದು ಅವಳನ್ನು ಹೊಗಳಿದರು. ಕಥೆ ಮುಂಬರಿಯಿತು. ಕನ್ಯಾವಲೋಕನ ಮುಗಿಯಿತು. ಚಿಕ್ಕ ಮಗಳು ತನ್ನ ಗಂಡನ ಬುದ್ಧಿಶಕ್ತಿ–ಪಾಂಡಿತ್ಯ

ಕುರಿತು ಕನಸು ಕಾಣಹತ್ತಿದಳು. ಸಮಾಜದಲ್ಲಿ ತನ್ನ ಬುದ್ಧಿಶಕ್ತಿಯಿಂದ ಗಣ್ಯ, ಮಾನ್ಯ ಸ್ಥಾನ ದೊರಕಿಸುತ್ತಾನೆ. ತಾವಿಬ್ಬರೂ ಸುಖವಾಗಿ ಬಾಳ್ವೆ ಮಾಡಬಹುದು. ಆ ಯುವಕನೋ ತನ್ನನ್ನು ಮೊದಲಿನ ಇಬ್ಬರೂ ಬೇಡವೆಂದರು, ಮೂರನೆಯವಳು ಮದುವೆಯಾಗುತ್ತೇನೆ ಎಂದಳೆಂದು ಕೇಳಿ, ಅವಳನ್ನು ಮನಸಾ ಪ್ರೀತಿಸತೊಡಗಿದ. ಮುಂದೆ ಅವರಿಬ್ಬರಿಗೂ ಮದುವೆಯಾಯಿತು. ಸುಖವಾಗಿ ಇದ್ದರು. ಜೊತೆಯಾಗಿ ಇದ್ದು, ಜೊತೆಯಾಗಿ ದುಡಿದು, ಹೆಚ್ಚು ಊರ್ಜಿತ ಸ್ಥಿತಿಗೆ ಮುಟ್ಟಿದರು.

ಕೆಲವು ವರ್ಷ ಕಳೆದ ಮೇಲೆ ಮೊದಲಿನ ಮಗಳ ಗಂಡ ತನ್ನ ಐಶ್ವರ್ಯವನ್ನೆಲ್ಲ ಕಳೆದುಕೊಂಡ. ಹೆಂಡತಿಯ ಸಮೇತ ಚಿಕ್ಕವಳ ಮನೆಯಲ್ಲಿ ಬಂದಿರಬೇಕಾಗಿ ಬಂತು. ಎರಡನೆಯ ಮಗಳ ಗಂಡನಿಗೂ ಏನೂ ಕೈಹತ್ತದೆ ಶಕುನ ಹೇಳುತ್ತ ಬದುಕಬೇಕಾಯಿತು. ಮೂರನೆ ಮಗಳನ್ನು ಊರಿನಲ್ಲಿ ಎಲ್ಲರೂ ಹೊಗಳಹತ್ತಿದರು.

ಇಷ್ಟು ಕತೆ ಹೇಳಿ ಅಜ್ಜಿ ತುಂಬ ಹೊತ್ತು ಸುಮ್ಮನೆ ಕುಳಿತಳು. ನನಗೇನೋ ಕತೆ ರುಚಿಸಿರಲಿಲ್ಲ. ಆದರೆ ಲಕ್ಷ್ಯಗೊಟ್ಟು ಕೇಳುತ್ತಿದ್ದೆ. ಇದಾದ ಮೇಲೆ ಇನ್ನೊಂದು ಒಳ್ಳೇ ಕತೆ ಕೇಳಬಹುದೆಂಬ ನಿರೀಕ್ಷೆ. ಅಕ್ಕನೂ ಉಳಿದವರೂ ಶ್ರದ್ಧೆಯಿಂದ ಕೇಳುತ್ತಿದ್ದರು. ಆಗ ಅಜ್ಜಿ "ಈ ಕತೆ ಹುಡುಗಿಯರಿಗೆ ರುಚಿ. ಆದರೆ ಕಷ್ಟಪಟ್ಟು ದುಡಿವರೆ ಹುಡುಗರಿಗೂ ಒಳ್ಳೇ ಹೆಂಡತಿ ಸಿಗುತ್ತಾಳೆ. ಎಲ್ಲರೂ ಕತೆ ಮುಗಿಯುವವರೆಗೂ ಕೇಳಿ" ಎಂದು ಕಥೆಯನ್ನು ಮುಂಬರಿಸಿದಳು.

ಹುಡಿಗಿಯರೆಲ್ಲ ಚೆನ್ನಾಗಿ ತಿಳಿದುಕೊಳ್ಳಿ. ಹಣವಿದೆಯೆಂದು ನಡತೆ ಸರಿಯಿಲ್ಲದವನನ್ನು ಮದುವೆಯಾಗಬಾರದು. ಆ ಮೂರನೆ ಹುಡುಗಿಗಿಂತಲೂ ನಮ್ಮ 'ಟ್ಸೊಯ್-ಚಿನ್' (ನಮ್ಮ ಅಕ್ಕ) ನ ಅದೃಷ್ಟ ಚೆನ್ನಾಗಿದೆ. ಅಂದು ಸೈಕಲ್ ಮೇಲೆ ಬಂದ ಯುವಕನಿಗೆ ಇವಳನ್ನು ಕೊಡುತ್ತಾರೆ. ಆತ ತುಂಬ ಒಳ್ಳೇ ನಡತೆಯುಳ್ಳವನು, ಚೆಲುವ, ಬುದ್ಧಿವಂತ. ಹಣವಂತನೂ ಹೌದು" ಎಂದು ಹೇಳಿ ಹೊಟ್ಟೆ ತುಂಬಾ ನಕ್ಕರು. ನಾವೆಲ್ಲರೂ ಅಕ್ಕನನ್ನೇ ನೋಡಿದೆವು ಅಕ್ಕನಿಗೆ ವಿಪರೀತ ನಾಚಿಕೆಯಾಯಿತು. ಅಂದಿನಿಂದ ಕಥೆ

ಕೇಳಲು ಬರಲಿಲ್ಲ. ಉಳಿದ ಹುಡುಗಿಯರು 'ಅವಳಿಗೀಗ ಗಂಡನ ವಿಚಾರ ಮೊದಲಾಗಿದೆ. ಇಲ್ಲಿಗೇಕೆ ಬಂದಾಳು ?' ಎಂದರು.

ಇದನ್ನೆಲ್ಲ ನಾನು ತಲೆಗೆ ಹಚ್ಚಿಕೊಳ್ಳಲೇ ಇಲ್ಲ. ನಾನು ನಿರುಪದ್ರವಿ. ಕುಚೇಷ್ಟೆ, ಹಾಸ್ಯ ನನಗೆ ಸೇರುತ್ತಿರಲಿಲ್ಲ. ಒಂದು ದಿನ ಹಿಟ್ಟಿನಿಂದ ಮಾಡಿದ ಅಂಣತಮ್ಮಂದಿರ ಗೊಂಬೆಗಳನ್ನು ತಂದರು. ಎರಡು-ಮೂರು ದಿನ ಗಳಾಗುತ್ತಲೆ ಆ ಹಿಟ್ಟು ಒಣಗಿ ಗೊಂಬೆಗಳೆಲ್ಲ ಮುರಿದು ಹೋದವು. ಅವಕ್ಕೆ ಕೆಂಪು ಗುಲಗಂಜಿಯ ಕಣ್ಣನ್ನು ಇಟ್ಟಿದ್ದರು ಆ ಕೆಂಪು, ನಡುವೆ ಕಪ್ಪು ಚುಕ್ಕೆ, ಬಹಳ ಚೆನ್ನು. ಆ ಗುಲಗಂಜಿಗಳನ್ನೆಲ್ಲ ಕೆಂಪು ಕಾಗದದಲ್ಲಿ ಪೊಟ್ಟಣ ಕಟ್ಟಿಟ್ಟೆವು. ಅನಂತರ "ಟೆಯಾಂಗ್" ಕವಿಯ, ಗುಲಗಂಜಿಯನ್ನು ಕುರಿತ ಬರೆದ ಪದ್ಯವನ್ನು ಅಂದವಾಗಿ ಬರೆದು, ಅದನ್ನು ಹೂವಿನ ಚಿತ್ರಗಳಿಂದ ಚೆಂದಗೊಳಿಸಿ ಅಂದವಾದ ಒಂದು ಭರಣಿಯಲ್ಲಿ ಇಟ್ಟೆವು. ಅದನ್ನು ಅಕ್ಕನ ಬಾಚಣಿಗೆ ಪೆಟ್ಟಿಗೆಯಲ್ಲಿ ಅವಳಿಗೆ ಗೊತ್ತಾಗದಂತೆ ಇರಿಸಿದೆವು. ಇದೆಲ್ಲಾ ವಿನೋದಕ್ಕಾಗಿಯೇ. ನಾನೇ ಅದನ್ನು ಇಟ್ಟು ಬಂದೆ. ಒಂದು ದಿನ ಆಗುವ ವರೆಗೂ ಇದನ್ನು ಯಾರಿಗೂ ಹೇಳಬಾರದು.

ನನಗೆ ಅಕ್ಕನೊಂದಿಗೆ ಸರಿಯಾಗಿ ಮಾತನಾಡುವದಾಗಲಿಲ್ಲ. ಮರು ದಿನ ಬೆಳಿಗ್ಗೆ ನನ್ನ ಮೂವರು ತಂಗಿಯರೂ ಅಕ್ಕನ ಕೋಣೆಯಲ್ಲಿ ಕಿಟಕಿ ಯಿಂದ ಇಣಿಕಿ ನೋಡುತ್ತಿದ್ದರು. ನಾನೂ ಬಾಗಿಲು ಸಂದಿಯಿಂದ ಒಳಗೆ ನೋಡಿದೆ. ಅಕ್ಕ ಬಾಚಣಿಗೆ ಪೆಟ್ಟಿಗೆ ತೆಗೆದು ಕವಿತೆ ಓದುತ್ತಿದ್ದುದನ್ನು ಕಂಡೆ ಓದಿಕೊಂಡು ಭಾವಪರವಶಳಾದಂತೆ ಕಣ್ಣು ಮುಚ್ಚಿ ಏನೋ ಆಲೋಚನೆ ಯಲ್ಲಿದ್ದಳು. ಬಹಳ ಹೊತ್ತಿನವರೆಗೂ ಕೂದಲು ಬಾಚಿಕೊಳ್ಳಲೇ ಇಲ್ಲ. ನಾವು ಉತ್ಸುಕತೆಯಿಂದ ನೋಡುತ್ತಿದ್ದೆವು. ತೀರ ಚಿಕ್ಕ ತಂಗಿ ಬಿದಿರು ಸ್ಟೂಲಿನಿಂದ ಬಿದ್ದು ಸದ್ದುಮಾಡಿದಳು. ನಾವೆಲ್ಲರೂ ಗೊಂದಲದಲ್ಲಿ ಬಿದ್ದು ಓಡಿಹೋದೆವು. ತುಸು ಹೊತ್ತಾದಮೇಲೆ, ಅಕ್ಕ ಏನು ಮಾಡುತ್ತಾಳೆಂಬು ದನ್ನು ನೋಡಿಬರಲು ನಾನು ಹೋದೆ. ತಲೆ ಬಾಚಿಕೊಳ್ಳುವುದೇನೋ ಮುಗಿಯುತ್ತ ಬಂದಿತ್ತು. ಆದರೆ, ವಿಚಾರದ ಗುಂಗಿನಲ್ಲಿಯೇ ಇದ್ದಳು. ನಾನಿನ್ನೂ ಚಿಕ್ಕವ. ಅಕ್ಕನ ಈ ವಿಚಿತ್ರ ವರ್ತನೆ ನನಗಾಗ ಅರ್ಥ ಆಗಲಿಲ್ಲ. ಬರೀ ಮೋಜಿನಲ್ಲಿದ್ದೆ. ಅಕ್ಕನನ್ನು ಎಲ್ಲರೂ ಪೀಡಿಸುತ್ತಿದ್ದರು. 'ಏನು

ಹಾಗಿದೀಯೆ ? ಏನು ಚಿಂತೆಯಮ್ಮ ನಿನಗೆ?' ಎಂದು ಅಕ್ಕನನ್ನು ಪೀಡಿಸುತ್ತಿದ್ದರು. ಅಕ್ಕ ಉತ್ತರವನ್ನೇ ಕೊಡುತ್ತಿರಲಿಲ್ಲ. ಸಾಯಂಕಾಲ ಮೂರನೆ ತಂಗಿ ಬಾಚಣಿಗೆ ಪೆಟ್ಟಿಗೆಯನ್ನು ತೆರೆದಾಗ ಮಾತ್ರ ಅಕ್ಕ ಸಿಟ್ಟಿಗೆದ್ದಳು.

ಆ ಪೆಟ್ಟಿಗೆ ಅವಳ ವರ ಕಳಿಸಿದ ಪ್ರೀತಿಯ ಉಡುಗೊರೆ ಎಂದು ಎಲ್ಲರೂ ಹಾಸ್ಯ ಮಾಡಿದರು. ಹಾಗೆಂದರೆ ನನಗೆ ತಿಳಿಯಲಿಲ್ಲ. ಗುಲಗಂಜಿಗೆ ನಮ್ಮ ಭಾಷೆಯಲ್ಲಿ 'ಸಿಯಾಂಗ್ ಸೂಟ್ಸೊ' ಎನ್ನುತ್ತಾರೆ. "ಉತ್ಕಟ ಅಪೇಕ್ಷೆ" ಎಂತ. ಒಬ್ಬ ವಿಧವೆ ಈ ಗುಲಗಂಜಿಯ ಕಂಟಿಯ ಕೆಳಗೆ ಕೂತು ಇನಿಯ ನನ್ನು ನೆನೆದು ಪ್ರಾಣಬಿಟ್ಟ ಒಂದು ಕತೆ ಇದೆ. ಅದರ ಬಗ್ಗೆ ಸುಪ್ರಸಿದ್ಧ ಕವಿ ಒಂದು ಕವಿತೆ ಬರೆದಿದಾನೆ. 'ಅಂದಿನಿಂದ ಪ್ರಿಯನಿಗಾಗಿ ಕಾಯುತ್ತಿರುವ ಪ್ರೇಯಸಿ'ಯ ಒಲವಿಗೆ ಕುರುಹು ಆಗಿದೆ ಈ ಗುಲಗಂಜಿ. ಚೈನಾದಲ್ಲಿ ಯಾರೂ ಬಹಿರಂಗವಾಗಿ "ಪ್ರೇಮ"ದ ಹೆಸರೆತ್ತರು. ಎತ್ತಿದರೆ ಅನರ್ಥ ಪರಿಣಾಮವೇ. ಎತ್ತುವವರು ಅನಾಗರಿಕರು.

ಆದ್ದರಿಂದ ನಮ್ಮ ಕವಿಗಳು "ಪ್ರೇಮ"ವನ್ನು ಸೂಚಿಸುವ ಅನೇಕ ಸಂಕೇತಗಳನ್ನು ಕಲ್ಪಿಸಿದಾರೆ. "ಟಿಯಾಂಗ" ಕವಿಯ ಕವಿತೆ ಒಂದು ಹೀಗಿದೆ.

ಬೆಳೆಯುವುದು ದೂರ ದಕ್ಷಿಣದಲ್ಲಿ ಗುಲಗಂಜಿ
ಗಿಡ ಚಿಗುರಿ ಮಳೆಗಾಲದಲ್ಲುದುರೆ ಗುಲಗಂಜಿ
ಆರಿಸಿಡು ಆರಿಸಿಡು ಹೆಚ್ಚಾಗಿ ಗುಲಗಂಜಿ
ಕುರುಳ ಹಿಂಡುವ ಬಯಕೆ ತುಳುಕುತಿದೆ ಗುಲಗಂಜಿ.

ಈ ಕವಿತೆ ಪ್ರೇಯಸಿಯೊಬ್ಬಳು ದಕ್ಷಿಣಕ್ಕೆ ಪ್ರವಾಸ ಹೋಗಿದ್ದ ತನ್ನ ಪ್ರಿಯನಿಗೆ ಬರೆದು ಕಳಿಸಿದ್ದು ಎನ್ನುತ್ತಾರೆ. ಶಾಲೆಯಲ್ಲಿ ಕಂಠಪಾಠ ಮಾಡಿದೆವು. ಇದರ ಅರ್ಥ ನಮಗಾಯಿತೇ ಎಂದು ಶಿಕ್ಷಕರಾಗಲಿ, ತಂದೆ-ತಾಯಿಯಾಗಲಿ ಚಿಂತಿಸಿಲ್ಲ. ಈ ಕವಿತೆಗಳನ್ನು ಹಿರಿಯರು ಓದುತ್ತಿರುವಾಗ ಕೇಳಿ, ಸ್ವರ ಪರಿಚಯ ಮಾಡಿಕೊಂಡೆವು. ಅಕ್ಕನಿಗೆ ಈ ಕವಿತೆ ತಿಳಿದೇ ಇರಬೇಕು. ತಿಳಿಯದೆ ನಾನು ಕುಚೇಷ್ಟೆ ಗೈದೆನೆಂದು ನನಗೀಗ ತಿಳಿದಿದೆ.

ಅಕ್ಕನ ನಿಶ್ಚಿತಾರ್ಥ ಹೆಚ್ಚು ವಿಜೃಂಭಣೆಯಿಂದ ಜರುಗಲಿಲ್ಲ. ಇದಾದ

ಮೇಲೆ ಅವಳ ಗಂಡ ಅವಳನ್ನು ಕಿಯು-ಕಿಯಾಂಗದ ಅಮೇರಿಕನ್ ಮಿಷನ್ ಹೈಸ್ಕೂಲಿಗೆ ಕಳಿಸಿಕೊಡಲೇ ಬೇಕೆಂದು ಒತ್ತಾಯ ಪಡಿಸಿದ. ಬೀಗರ ಮನೆ ಆಗಲೇ ಸುಧಾರಿಸಿತ್ತು. ಬಾವನ ತಂದೆ ತೆರಿಗೆ ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದರು. ಪಾಶ್ಚಿಮಾತ್ಯ ಅಧಿಕಾರಿಗಳ ಸಂಪರ್ಕದಿಂದ ಅವರ ನಡೆ-ನುಡಿಗಳ ಪರಿಚಯ ಮಾಡಿಕೊಂಡಿದ್ದರು. ಪರಿಣಾಮವಾಗಿ ತನ್ನ ಮಗನನ್ನು ಮಿಷನ್ ಶಾಲೆಗೆ ಕಳಿಸಹತ್ತಿದರು. ಆ ಊರಲ್ಲಿ ಮೊದಲು ಸೈಕಲ್ ಹತ್ತಿದವನು ನಮ್ಮ ಬಾವನೇ ಎಂದು ಹೇಳಬಹುದು. ಹುಡುಗರ ಶಾಲೆ, ಹುಡುಗಿಯರ ಶಾಲೆ, ಒಂದರ ಬದಿ ಒಂದು ಇದ್ದವು. ಹುಡುಗರ ಶಾಲೆಯಲ್ಲಿ ಓದುವ ಪ್ರತಿಯೊಬ್ಬನೂ ಹುಡುಗಿಯರ ಶಾಲೆಯಲ್ಲಿ ಓದುವ ಕನ್ನೆಯನ್ನೇ ಮದುವೆಯಾಗಲು ಅಪೇಕ್ಷಿಸುತ್ತಿದ್ದ. ಮೊದಲೇ ಗೊತ್ತಾಗಿದ್ದರೆ ಅವಳನ್ನು ಆ ಶಾಲೆಗೆ ಕಳಿಸಿಕೊಡಲೇಬೇಕೆಂದು ಹಟ ಹಿಡಿಯುತ್ತಿದ್ದ. ಈ ಬದಲಾವಣೆಯಿಂದ ಗೊತ್ತಾದ ಅನೇಕ ಮದುವೆಗಳು ಮುರಿದು ಹೋದವು. ಈ ಎರಡೂ ಶಾಲೆಗಳ ಬಗ್ಗೆ ನಮ್ಮ ಊರಿನ ಹಿರಿಯರಲ್ಲಿ ಒಳ್ಳೇ ಅಭಿಪ್ರಾಯವಿರಲಿಲ್ಲ. ಈ ಶಾಲೆಗಳಲ್ಲಿ ಪ್ರೇಮಪತ್ರ ಬರೆಯುವುದನ್ನೂ, ಹಿರಿಯರ ಮಾತನ್ನು ಮೀರಿ ನಡೆಯುವುದನ್ನೂ ಕಲಿಸಿಕೊಡುತ್ತಾರೆಂದು ತಿಳಿದಿದ್ದರು. ಇದಕ್ಕೆ ಕಾರಣ, ನಮ್ಮ ಹಿರಿಯರಿಗಾರಿಗೂ ಕ್ರೈಸ್ತ ಮತ ಸಾಂಪ್ರದಾಯ ಏನೂ ಗೊತ್ತಿರಲಿಲ್ಲ. ಆದ್ದರಿಂದ ಶುಭ ಪರಿಣಾಮ ಅವರಿಗೆ ಕಾಣಲಿಲ್ಲ. ಈ ಶಾಲೆಗಳನ್ನು 'ಮದುವೆ' ಶಾಲೆ ಎನ್ನುತ್ತಿದ್ದರು. ಆದ್ದರಿಂದ ನನ್ನ ಬಾವನಿಗೆ ನನ್ನ ಅಕ್ಕ ಈ ಶಾಲೆಯಲ್ಲಿ ಕಲಿಯಬೇಕೆಂದು ಮನಸ್ಸಾಗುವುದು ಸ್ವಾಭಾವಿಕ. ನಮ್ಮ ತಂದೆಗೆ ಕಪಟವಿಲ್ಲ. ಸಂಪ್ರದಾಯದಂತೆ ಬೆಳೆದು ಬಂದಿದ್ದರೂ, ಅನಿವಾರ್ಯವಾದ ಬದಲಾವಣೆಗಳನ್ನು ಸಂತೋಷದಿಂದ ಅಂಗೀಕರಿಸುತ್ತಿದ್ದರು. ಅವರೇ ಕೊನೆಗೆ ಅಜ್ಜನನ್ನೂ ಇದಕ್ಕೆ ಒಪ್ಪಿಸಿದರು.

ಮಿಷನ್ ಶಾಲೆಗೆ ಹೋಗುವುದರಿಂದ ಅಕ್ಕನಲ್ಲಿ ಸಾಕಷ್ಟು ಬದಲಾವಣೆ ಕಂಡು ಬಂತು. ಗಂಡನಾಗುವವನ ವಿಷಯ ಮಾತನಾಡಲು ಮೊದಲಿನ ಹಾಗೆ ನಾಚಿಕೊಳ್ಳುತ್ತಿರಲಿಲ್ಲ. ಶಾಲೆಯ ತನ್ನ ಅನುಭವದ ಕತೆಯನ್ನು ಹೇಳಿ ಚಿಕ್ಕವರಾದ ನಮ್ಮನ್ನು ಸಂತೋಷಗೊಳಿಸುತ್ತಿದ್ದಳು. ನಮ್ಮ ಶಾಲೆ

ಗಳಿಗಿಂತ ಈ ಶಾಲೆ ತೀರ ಬೇರೆ. ನನಗೆ ತುಂಬ ಆಶ್ಚರ್ಯ. ನಮ್ಮ ಮನೆಯಲ್ಲಿ ಮೊದಲು ಇಂಗ್ಲೀಷು ಕಲಿತದ್ದೆಂದರೆ ಅಕ್ಕನೇ. ಅವಳು ಇಂಗ್ಲೀಷ್ ಓದುವಾಗ ಜೊತೆಗೆ ನಾನೂ ಕೆಲವು ಅಕ್ಷರ ಕಲಿತೆ. ಅವಳ ಉಚ್ಚಾರಣೆ ಸರಿಯೆಂದು ತಿಳಿದಿದ್ದೆ

ಅವಳಂತೆ ಇಂಗ್ಲೀಷ್ ಬರೆಯಲೂ ಪ್ರಾರಂಭಿಸಿದೆ. ಒಂದೆರಡು ತಿಂಗಳಾದ ಮೇಲೆ ನನಗೆ ಇದು ಹಳೆಯ ಮಾತಾಯಿತು. ಬೇಸರ ಬಂತು. ಹೊಸತನ ಮಾಯವಾಯಿತು. ಅವಳಿಗೆ ಆ ವಾತಾವರಣ ಪರಕೀಯವೆನಿಸಿದ್ದರಿಂದ ಕಲಿಯಲು ಆಗಲೇ ಇಲ್ಲ. ಒಂದು ವರ್ಷ ಕಳೆದ ಅನಂತರ ಅಕ್ಕನ ಮದುವೆಯಾಯಿತು. ಶಾಲೆಯನ್ನೂ ಬಿಟ್ಟದ್ದಾಯಿತು. ಈಗ ಅವಳಿಗೆ ಹಿಂದೆ ಕಲಿತ ಇಂಗ್ಲೀಷ್ ಅಕ್ಷರಗಳ ನೆನಪಾದರೂ ಇದೆಯೋ ಇಲ್ಲವೋ, ನನಗೆ ಸಂದೇಹ !



ಸಿಲ್ಕು ಬಟ್ಟೆ ಮಾರುವವನು

# ೧೧. ವಸಂತ ಭೋಜನಗಳು

ಹೊಸ ವರ್ಷದ ಹಬ್ಬ ಮೂರು ದಿನ ನಡೆಯುತ್ತಿತ್ತು. ಅದು ನಡೆದ ಕೂಡಲೇ ನಮ್ಮ ಮನೆಯವರು ವರ್ಷದ ಮೊದಲನೆ ಎರಡನೆ ತಿಂಗಳಲ್ಲಿ ಆಗ ಬೇಕಾದ ಭೋಜನ ಸಮಾರಂಭಗಳನ್ನು ಏರ್ಪಡಿಸಿದರು. ನಮ್ಮ ಆಪ್ತರೂ ಮಿತ್ರರೂ ಕೂಡ ಹೀಗೇ ಮಾಡುತ್ತಿದ್ದರು. ಈ ಭೋಜನ ಸಮಾರಂಭದ ವ್ಯವಸ್ಥೆಯನ್ನು ಊರೊಳಗಿನ ದೊಡ್ಡ ಹೋಟಲಿನವರು ಮಾಡುತ್ತಿದ್ದರು. ಮನೆಯವರಿಗೆ ಹೆಚ್ಚು ಶ್ರಮವಿರುತ್ತಿರಲಿಲ್ಲ ನಾವು ಇವನ್ನು "ಚನ್-ಚಿಯೂ" ವಸಂತಕಾಲದ ಪಾನೀಯ ಎನ್ನುತ್ತಿದ್ದೆವು.

ಈ ಭೋಜನಗಳಲ್ಲಿ ಮೊದಲನೆಯದು ಕೇವಲ ಮಹಿಳೆಯರಿಗಾಗಿ. ಅಜ್ಜಿ ಈ ಊಟದ ಏರ್ಪಾಡು ಮಾಡುತ್ತಿದ್ದಳು. ನಾನಿನ್ನೂ ತೀರ ಚಿಕ್ಕವನು. ಅಜ್ಜಿ ಇಂಥ ಒಂದು ಔತಣದ ಓಲೆಗಳನ್ನು ಅಣ್ಣನ ಕೈಯಲ್ಲಿ ಕಳಿಸುತ್ತಿದ್ದಳು. ಕೆಂಪು ಕಾಗದದಲ್ಲಿ ಈ ಔತಣದೋಲೆಯನ್ನು ಬರೆಯುತ್ತಿದ್ದರು. ನಾಲ್ಕೋ ಆರೋ ಎಂಟೋ ಆಗಿ ಕರೆಯುವ ಜನರ ಸಂಖ್ಯೆಯ ಪ್ರಕಾರ ಅದನ್ನು ಮಡಿಸುತ್ತಿದ್ದರು. ಅಜ್ಜಿ ಹೇಳಿದಂತೆ ಹೆಸರುಗಳನ್ನೂ ವಿಳಾಸಗಳನ್ನೂ ಬರೆದರು. ಭೋಜನದ ದಿನಾಂಕವನ್ನೂ ಅಜ್ಜಿಯ ಹೆಸರನ್ನು ಹಾಕಿ ಮಡಿಸುತ್ತಿದ್ದರು. ಮೇಲುಗಡೆ ದೊಡ್ಡ ಅಕ್ಷರಗಳಲ್ಲಿ "ಔತಣದೋಲೆ" ಎಂದು ಬರೆಯುತ್ತಿದ್ದರು. ಅವನ್ನು ಸೇವಕನೊಡನೆ ಎಲ್ಲ ಅತಿಥಿಗಳ ಮನೆಗೂ ಕೊಟ್ಟು ಕಳಿಸಲಾಯಿತು.

ಆಹ್ವಾನಿತರು ತಮ್ಮ ಹೆಸರಿನ ಮುಂದೆ ಒಪ್ಪಿಗೆಯೋ ಇಲ್ಲವೋ ಬರೆಯುತ್ತಿದ್ದರು. ಬರಲು ಒಪ್ಪಿದವರಿಗೆಲ್ಲ ಕರೆದೊಯ್ಯಲು ಮೇಣೆ ಯಾವಾಗ ಬರುತ್ತದೆಂಬುದನ್ನು ಸೇವಕ ಹೇಳಿ ಬರುತ್ತಿದ್ದ. ಔತಣ ಕೊಟ್ಟು ಸೇವಕ

ಮರಳಿ ಬಂದಾಗ ಎಷ್ಟು ಜನ ಭೋಜನಕ್ಕೆ ಬರುವರೆಂದು ಅಜ್ಜಿಗೆ ಗೊತ್ತಾಗು ತ್ತಿತ್ತು. ಅಷ್ಟೇ ಜನರಿಗೆ ಏರ್ಪಾಟು ಮಾಡುತ್ತಿದ್ದಳು. ಸಾಮಾನ್ಯವಾಗಿ ಯಾರೂ ನಿರಾಕರಿಸುತ್ತಿರಲಿಲ್ಲ. ಕಾಯಿಲೆಯಾದವರು ಬಿಡುವು ಇಲ್ಲದವರು ಹೊರತು ಉಳಿದವರೆಲ್ಲರೂ ಬರುತ್ತಿದ್ದರು.

ಭೋಜನದ ದಿನ ಅತಿಥಿಗಳನ್ನು ಕರೆತರಲು ಅಜ್ಜಿ ಮೇಣೆ ಕಳಿಸಿಕೊಡು ತ್ತಿದ್ದಳು. ಸಾಯಂಕಾಲ ೫ ಗಂಟೆಯ ಮೇಲೆ ಊಟ. ಆದರೂ ಮಧ್ಯಾಹ್ನ ದಿಂದಲೇ ಅತಿಥಿಗಳೆಲ್ಲ ಬರುತ್ತಿದ್ದರು. ಮಕ್ಕಳು ಮರಿಗಳನ್ನು ಹೆಂಗಸರು ಕರೆತರುತ್ತಿದ್ದರು. ಊಟದ ಹೊತ್ತಿಗೆ ಸರಿಯಾಗಿ ಬರುವುದು ಆಚಾರವಲ್ಲ. ಹೀಗೆ ಬಂದರೆ ಬರೀ ಊಟಕ್ಕಾಗಿಯೆ ಬಂದಂತೆ. ಸಮಾರಂಭದ ಉದ್ದೇಶ್ಯ ಮನಬಿಚ್ಚಿ ಮಾತನಾಡುವುದು. ಊಟಕ್ಕೆ ಮೊದಲೇ ಇಷ್ಟಾಗೋಷ್ಠಿ, ಸಲ್ಲಾಪ ನಡೆಯುತ್ತಿತ್ತು. ಚಿಕ್ಕಮಕ್ಕಳ ತಾಯಂದಿರು ಮಾತ್ರ ಊಟ ವಾದೊಡನೆ ಬೇಗ ಹೊರಟು ಹೋಗುತ್ತಿದ್ದರು. ಹೋಗುವಾಗಲೂ ಮೇಣೆ ಗಳ ವ್ಯವಸ್ಥೆ ಇರುತ್ತಿತ್ತು.

ಅತಿಥಿಗಳ ಮಕ್ಕಳನ್ನು ನೋಡಿಕೊಳ್ಳುತ್ತಿದ್ದುದರಿಂದ ನನಗೂ ಈ ಊಟಕ್ಕೆ ಔತಣವಿರುತ್ತಿತ್ತು. ಆಹ್ವಾನದ ಕ್ರಮದ ಪ್ರಕಾರ ಅತಿಥಿಗಳು ಊಟಕ್ಕೆ ಕೂಡುತ್ತಿದ್ದರು. ದೊಡ್ಡ ಉದ್ಯೋಗಸ್ಥರು ಕೂಡುವಾಗ ತಮ್ಮ ಪ್ರತಿಷ್ಠೆ ತೋರಿಸುತ್ತಿದ್ದರು. ಎಂಟು ಜನ ಕೂಡುವ ಮೂರು ದೊಡ್ಡ ದೊಡ್ಡ ಮೇಜುಗಳ ಮೇಲೆ ಊಟ. ಮಕ್ಕಳನ್ನೆಲ್ಲ ದಾದಿಯರೊಂದಿಗೆ ಬೇರೆ ಕೂಡಿ ಸುತ್ತಿದ್ದರು. ಎಲ್ಲರೂ ಆನಂದವಾಗಿರುತ್ತಿದ್ದರು. ಅತಿಥಿಗಳೆಲ್ಲ ಉತ್ತಮ ಉಡುಪು ಉಟ್ಟು, ಕೂದಲನ್ನು ಸೊಗಸಾಗಿ ಬಾಚಿ, ಹೂ ಮುಡಿದುಕೊಂಡಿರು ತ್ತಿದ್ದರು. ಅವರು ಏನು ಹರಟೆ ಹೊಡೆಯುತ್ತಿದ್ದರೋ ನೆನಪಿಲ್ಲ. ಕೇಳಿದರೂ ಅವರ ಮಾತು ಅರ್ಥವಾಗುತ್ತಿರಲಿಲ್ಲ. ಮುಖ್ಯವಾಗಿ ಹೊಸಬಟ್ಟೆ, ನಾಜೂಕು, ಹಪ್ಪಳ, ಉಪ್ಪಿನಕಾಯಿ ಕುರಿತು ಹರಟೆ ಸಾಗುತ್ತಿತ್ತೆಂದು ತೋರುತ್ತದೆ. ಗಂಡಸರೆಲ್ಲ ಅಂದು ಬೇರೆಲ್ಲಿಯೋ ಹೊತ್ತು ಕಳೆಯುತ್ತಿದ್ದರೆಂದು ಮನೆಯಲ್ಲಿ ಸೇವಕರೇ ಇರುತ್ತಿರಲಿಲ್ಲ. ಈ ದಿನ ಬರೀ ಹೆಂಗಸರದೇ ಸಂಭ್ರಮ!

ಎರಡನೆ ಭೋಜನ ಗಂಡಸರದು. ಅಜ್ಜಿಯನ್ನು ಕೇಳಿ ತಂದೆ ಮಾಡು ತ್ತಿದ್ದರು. ಅಜ್ಜ ತೀರ ಮುದುಕ. ಯಾವುದರಲ್ಲಿಯೂ ಭಾಗ ವಹಿಸುತ್ತಿರ

ಲಿಲ್ಲ. ಆದರೆ ಔತಣ ಮಾತ್ರ ಅಜ್ಜನ ಹೆಸರಿನಿಂದಲೇ. ಈ ಸಲ ಎಲ್ಲ ಅತಿಥಿಗಳೂ ಗಂಡಸರೇ. ಅವರ ಜೊತೆಗೆ ಮಕ್ಕಳು ಬರುತ್ತಿರಲಿಲ್ಲ. ಅವರಿಗೆ ಮೋಜಿಣಿ ಕುಳಿಸುತ್ತಿರಲಿಲ್ಲ. ಊಟದ ವೇಳೆಗೆ ಬಂದರೆ ಸಾಕು ಎಂದು ಇದ್ದರೂ ಹೊತ್ತಿಗೆ ಸರಿಯಾಗಿ ಗಂಡಸರೆಂದೂ ಬಂದವರೇ ಅಲ್ಲ. ಕೇವಲ ೧೨ ಜನ ಮಾತ್ರ ಔತಣ ಸ್ವೀಕರಿಸಿದ್ದರು. ಒಂದೇ ಮೇಜಿನ ಮುಂದೆ ಅವರನ್ನು ಕೂಡಿಸಲಾಯಿತು. ಅವರಲ್ಲಿ ಒಬ್ಬ ತಂದೆಯವರ ಬಾಲ್ಯಸ್ನೇಹಿತ, ಚಿತ್ರ ಕಾರ, ತುಂಬಾ ಕುಡುಕ. ಅನೇಕ ಸಲ ಕುಡಿದ ಮೇಲೆ ಒಂದು ಹೊಸ ಆಟ ಆಡೋಣ ಎಂದ. ಹೆಸರು "ಚಿ-ಕು-ಟ್ಸುಯಿ-ಹೂ"; ಹೂ ಅರಳಲಿ ಎಂದು ಕುರಿಯ ಚರ್ಮದ ನಗಾರಿಯನ್ನು ಬಾರಿಸುವುದು. ಹತ್ತಿರ ಇದ್ದ ಹೂವಿನ ಪಾತ್ರೆಯಿಂದ ಹೂ ಒಂದನ್ನು ತಂದರು. ನಗಾರಿಯನ್ನೂ ತಂದರು ನಗಾರಿ ಬಾರಿಸಲು ನನ್ನನ್ನು ಕರೆದರು. ನನ್ನ ಮನಸ್ಸಿಗೆ ಬಂದಂತೆ ಆ ನಗಾರಿ ಹೊಡೆಯಬಹುದು. ಮಧ್ಯೆ ಮಧ್ಯೆ ನಿಲ್ಲಿಸಿ, ಮತ್ತೆ ಹೊಡೆಯ ಬೇಕು. ನಗಾರಿ ಬಾರಿಸುತ್ತಿದ್ದಾಗ ಆ ಹೂವನ್ನು ಕೈಯಿಂದ ಕೈಗೆ ಬದಲಾ ಯಿಸುತ್ತಿದ್ದರು. ಬಾರಿಸುವುದನ್ನು ನಿಲ್ಲಿಸಿದಾಗ ಯಾರ ಕೈಯಲ್ಲಿ ಹೂ ಇರು ತ್ತದೋ ಅವರು ಒಂದು ಬಟ್ಟಲು ಮದ್ಯವನ್ನು ಒಂದೇ ಗುಟುಕಿಗೆ ಕುಡಿಯ ತಕ್ಕದ್ದು. ಯಾರು ಈ ಆಟ ಹೇಳಿಕೊಟ್ಟರೋ ಅವರ ಕೈಯಲ್ಲೇ ಆ ಹೂ ಇರಬೇಕೆ, ನಾನು ಬಾರಿಸುವುದನ್ನು ನಿಲ್ಲಿಸಿದಾಗ? ನಮ್ಮ ತಂದೆ "ಹೆಚ್ಚು ಕುಡಿಯಲು ಇದೊಂದು ಉಪಾಯ" ಎಂದು ಗೆಳೆಯನನ್ನು ಚೇಷ್ಟೆಮಾಡಿ ದರು. ಉಳಿದ ಅತಿಥಿಗಳು ನಕ್ಕರು. ಮುಂದೆ ಆಟ ಸಾಗಿತು. ಎರಡನೆಯ ಸಲ, ಮೂರನೆಯ ಸಲವೂ ಇದೇ ರೀತಿ ಆಯಿತು. ನಾನು ದೂರ ಕುಳಿತು ನಗಾರಿ ಬಾರಿಸುತ್ತಿದ್ದೆ. ಮನ ಬಂದಾಗ ನಿಲ್ಲಿಸುತ್ತಿದ್ದೆ. ಹೂ ಯಾರ ಕೈ ಯಲ್ಲಿದೆಯೋ ನೋಡಲಿಲ್ಲ. ಹೆಚ್ಚಾಗಿ ಕುಡಿದಿದ್ದ ಆ ಅತಿಥಿಗೆ ಸಿಟ್ಟು ಬಂತು. ಬೇಕೆಂತಲೇ ಈ ರೀತಿ ಮಾಡಿದೀರಿ, ನಾನಿನ್ನು ಕುಡಿಯುವುದಿಲ್ಲ ಎಂದು ಆಟ ಕೆಡಿಸಿದ. ನನ್ನನ್ನೆಲ್ಲಿ ಹಿಡಿದು ಥಳಿಸುತ್ತಾನೋ ಎಂದು ನನಗೆ ಹೆದರಿಕೆ. ಮೆಲ್ಲನೆ ಕಾಲುಕಿತ್ತಿದೆ. ಇದಕ್ಕೆ ಒಂದು ದಂತ ಕಥೆಯಿದೆ. ಟಯಾಂಗ ಮನೆತನದ ರಾಣಿ ಲೂತ್ಸಾಯಿ ತೀನ್ ಸಾಮ್ರಾಜ್ಞಿ ಆದಳು. ತಾನು ಹೇಳಿದ್ದು ನಡೆಯಲೇ ಬೇಕು ಎಂಬ ಗರ್ವ ಅವಳದು. ಶರತ್ ಋತುವಿನಲ್ಲಿ ಒಂದು ದಿನ ತನ್ನ ಅರ

ಮನೆಯ ತೋಟದಲ್ಲಿ ಉತ್ಸವ ನೆರೆಸಬೇಕೆಂದು ಬಯಸಿದಳು. ತೋಟದ ಹೂ ಗಿಡ ಬಳ್ಳಿಗಳೆಲ್ಲ ಹೂ ಬಿಡಬೇಕೆಂದು ಅಪ್ಪಣೆ ಮಾಡಿದಳು. ಅರಮನೆಯ ಮುಖ್ಯ ಪರಿಚಾರಕನಿಗೆ ಒಂದು ಕವಿತೆ ಬರೆದು ಆ ಹಲಗೆಯನ್ನು ತೋಟದಲ್ಲಿ ತೂಗು ಹಾಕಲು ಅಪ್ಪಣೆ ಮಾಡಿದಳು.

ಅರಳಬೇಕಲರೆಲ್ಲ ಈ ರಾತ್ರಿ
ಅಂದವಾಗಲಿ ವನವು ಬೇಗಲೇ
ತಿಳಿಸಿದನು ವಸಂತನಿಗೆ ಈಗಲೇ
ಬರುವೆ ನಾ ಬೆಳಗಿನಲಿ ನಾಳೆಗೇ
ಕಾಯದಿರಲಿ ನಸುಕಿನ ಗಾಳಿಗೇ
ತಡವಿಲ್ಲ ಆಗಬೇಕು ಈ ರಾತ್ರಿ.

ರಾಣಿಯ ಮಾತಿಗೆ ಎದುರಿಲ್ಲ. ಪರಿಚಾರಕ ಏನೂ ಹೇಳದಾದ. ಅವನೂ ಉಳಿದ ಸೇವಕರೂ ತುಂಬ ವಿವಂಚನೆಗೆ ಒಳಗಾದರು. ಇದರಿಂದ ಪಾರಾಗಲು ಉಪಾಯ ಹುಡುಕಿ, ಕೆಲವು ಜನರನ್ನು ಕರೆದು ಬೇಗ ಹೂ ಅರಳುವಂತೆ ಒತ್ತಾಯ ಪಡಿಸಲು ನಗಾರಿ ಬಾರಿಸಲು ಹೇಳಿದರು. ಬೆಳಗ್ಗೆ ಹೂ ಬಿಟ್ಟಿದ್ದವು.

ವಸಂತದ ಭೋಜನ ಸಮಾರಂಭಗಳಿಂದ ಗಂಡಸರ ಹೆಂಗಸರ ರುಚಿ, ಮನಸ್ಸು ಹೇಗೆ ಬೇರೆ ಬೇರೆಯೋ ಸ್ಪಷ್ಟವಾಗಿ ತಿಳಿಯಿತು. ಇಬ್ಬರನ್ನೂ ಬೇರೆ ಬೇರೆ ಕರೆಯುವುದೇ ಸರಿ ಎಂದು ತೋರುತ್ತದೆ. ಇಬ್ಬರಿಗೂ ಮನಬಿಚ್ಚಿ ಮಾತನಾಡಿಕೊಳ್ಳಲು ಹೆಚ್ಚು ಅನುಕೂಲ. ಗೊತ್ತಿಲ್ಲದ ವಿಷಯ ಮಾತನಾಡಬೇಕೆಂಬ ಒತ್ತಾಯವಿರದು. ಇಂದಿನ ಮಹಿಳೆ ಮನೆಯ ಮಾತನ್ನು ಬಿಟ್ಟು ಉಳಿದ ವಿಷಯ ತನಗೆ ಗೊತ್ತಿಲ್ಲವೆನ್ನಲು ಒಪ್ಪಳು. ಗಂಡಸರೂ ಕೂಡ ಮಹಿಳೆಯ ಉಡುಪು ತೊಡುಪು ಬಟ್ಟೆ ಬರೆ ವಜ್ರ ವೈಡೂರ್ಯಗಳ ವಿಷಯವನ್ನು ತಿಳಿದುಕೊಳ್ಳಬೇಕಾಗುತ್ತದೆ ಕಾಲದ ಗತಿಯೊಂದಿಗೆ. ನಾನೇನೋ ಈ ಕಾಲಕ್ಕೆ ಬಹಳ ಹಿಂದೆ ಬಿದ್ದಿದೇನೆ ಎನಿಸುತ್ತಿದೆ.

# ೧೨. ಬೆಳುದಿಂಗಳ ನೌಕಾಕ್ರೀಡೆ

"ಕಿಯು - ಕಿಯಾಂಗ"ನ ದಕ್ಷಿಣದ್ವಾರದ ಹೊರಗೆ "ಕ್ಯಾನ್ - ಟಾಂಗ" ಸರೋವರವಿದೆ ಎಂದು ಮೊದಲೇ ಹೇಳಿದ್ದೇನೆ.

ಸುಮಾರು ಸಾವಿರ ವರ್ಷದ ಹಿಂದೆ ಕಟ್ಟಿದ್ದು. ನೋಡಲು ಚೆನ್ನಾಗಿದೆ. ಸುತ್ತಲೂ ಕಟ್ಟಿದ ಏರಿ, ನಡುವಿನ ಸೇತುವೆ ಬಹಳ ಅಂದವಾಗಿವೆ. ಏರಿಯ ಮೇಲೆ ದಟ್ಟವಾಗಿ ಹುಲ್ಲು ಬೆಳೆದು, ಗಿಡ-ಮರಗಳೂ ಹುಟ್ಟಿ ಸರೋವರದ ಸೌಂದರ್ಯ ಮತ್ತಿಷ್ಟು ಹೆಚ್ಚಾಗಿದೆ. ಕೆರೆಯ ತುದಿಯಲ್ಲಿ ನಿಸರ್ಗದ ಅಂಚಿನಲ್ಲಿ ಬೌದ್ಧ ದೇವಾಲಯ ಒಂದು ಇದೆ. ಎತ್ತರದ ಗಿಡಗಳು ದೇವಾಲಯಕ್ಕೆ ಮಂಟಪದಂತೆ ಶೋಭಿಸುತ್ತಿವೆ.

ಚೈನಾದ ಬೇರೆ ಸರೋವರಗಳಿಗೆ ಹೋಲಿಸಿದರೆ, "ಕ್ಯಾನ್ - ಟಾಂಗ್" ಸಣ್ಣದು. ಆದರೂ ಇದರಲ್ಲಿ ಏಕಕಾಲಕ್ಕೆ ಇಪ್ಪತ್ತು, ಮೂವತ್ತು ಹಡಗು ಕಣ್ಣಿಗೆ ಕಾಣದಷ್ಟು ದೂರ ವಿಹರಿಸಬಹುದು. ಸರೋವರದಲ್ಲಿ ಎರಡು ಭಾಗ. ಎರಡು ಬೇರೆ ಬೇರೆ ಹೆಸರುಗಳೇ ಇವೆ. ಮನೆಗಳು, ಬೇರೆ ಕಟ್ಟಡಗಳು ಸುತ್ತುವರಿದ ಭಾಗ 'ನೈಹೂ.' ಸೇತುವೆಯ ಕೆಳಗೆ ಇದರ ನೀರು ಹರಿದು ಯಾಂಗ್ಟಿಸಿ ನದಿಗೆ ಸೇರುತ್ತದೆ. ಈ ಭಾಗಕ್ಕೆ ಇನ್ನೊಂದು ಒಳಭಾಗದ್ದು: "ಲೈಹೂ". ಇದರ ಸುತ್ತಲೂ ಗುಡ್ಡಗಳು. ಸಾಮಾನ್ಯವಾಗಿ ನೈಹೂನಲ್ಲಿ ನೌಕಾಕ್ರೀಡೆ ಮಾಡುವ ಜನ ಹೆಚ್ಚು. ಅದರ ದಂಡೆಯಗುಂಟ ಜನರು ಸದಾ ನೆರೆದಿರುತ್ತಾರೆ. ಹಗಲು ಉರಿಬಿಸಿಲಲ್ಲಿ ನೌಕೆಯಲ್ಲಿ ವಿಹರಿಸುವ ಜನ ಇಲ್ಲದಿದ್ದರೂ, ದಂಡೆಯಗುಂಟ ಮೀನು ಹಿಡಿಯಲು ಸಾಕಷ್ಟು ಜನ ಇರುತ್ತಾರೆ. ಆಗೀಗ ಕೆಲವರು ತರುಣರೂ, ಮಧ್ಯವಯಸ್ಸಿನವರೂ ಈಸುತ್ತಿರುತ್ತಾರೆ. ಆದರೆ ಸಾಮಾನ್ಯವಾಗಿ ಇಲ್ಲಿ ಈಸಲು ಬಿಡುವುದಿಲ್ಲ. ಊರಿನ ಹೆಂಗಸರು, ಹುಡು

ಗಿಯರು ದಂಡೆಯಗುಂಟ ಬಟ್ಟೆ ಒಗೆಯುತ್ತ ಯಾವಾಗಲೂ ಇರುತ್ತಾರೆ. ಅವರೆದುರು ಈಜುವುದು ಸರಿಯಲ್ಲ. ಬಣ್ಣ-ಬಣ್ಣದ ಬಟ್ಟೆ ತೊಟ್ಟು, ಹಾಡು ಹಾಡುತ್ತ ಬಟ್ಟೆ ಒಗೆಯುತ್ತಿರುವ ಈ ನೋಟ, ಮನೋಹರವಾಗಿ, ಕಾವ್ಯ ಮಯವಾಗಿ ಕಂಡುಬರುತ್ತದೆ. ವಸಂತದಿಂದ ಮಳೆಗಾಲದವರೆಗೆ " ಕಿಯು – ಕಿಯಾಂಗ " ಜನರೆಲ್ಲ ಇಲ್ಲೇ ಆಡುತ್ತಾರೆ. ಸುದೈವದಿಂದ ಆ ದಿನಗಳಲ್ಲಿ ಮೋಟಾರ ಬೋಟು ಬಂದಿರಲಿಲ್ಲ.

ಕ್ಯಾಂಟಾಂಗ ಸರೋವರದಲ್ಲಿ ನೌಕಾಕ್ರೀಡನವೆಂದರೆ ತಂದೆಯವರಿಗೆ ತುಂಬ ಪ್ರೀತಿ. ಬೌದ್ಧ ಮಂದಿರದ ಮುಖ್ಯ ಭಿಕ್ಷು ತಂದೆಯವರಿಗೆ ಚೆನ್ನಾಗಿ ಪರಿಚಯ. ನೌಕಾಕ್ರೀಡನಕ್ಕೆ ರಾತ್ರಿ ಹೋದರೆ ಅವರು ಅಲ್ಲಿಯೇ ಮಲಗು ತ್ತಿದ್ದರು.

ತಂದೆಯವರ ಮಿತ್ರರಲ್ಲಿ ಮುಕ್ಕಾಲುಪಾಲು ಜನ ಚಿತ್ರಕಾರರು. ಒಳ್ಳೇ ಮಿಾನುಗಾರರು. ಒಬ್ಬರಲ್ಲ ಒಬ್ಬರು ತಂದೆಯವರು ಹೋದಾಗ ಅಲ್ಲಿ ಸಿಗು ತ್ತಿದ್ದರು. ಬೆಳುದಿಂಗಳಲ್ಲಿ ಮೀನು ಹಿಡಿಯುವುದು ತಂದೆಯವರಿಗೆ ಇಷ್ಟ. ಮಂದಿರದ ಮುಂದಿನ ಗಿಡಗಳ ಕೆಳಗೆ, ಭಿಕ್ಷುವಿನೊಂದಿಗೆ ಕೂತು ಕುಡಿಯುತ್ತ, ಚಂದ್ರನನ್ನು ನೋಡುತ್ತ ಆನಂದಿಸುತ್ತಿದ್ದರು. ಈ ಕಾರಣವೇ ಇರಬೇಕು ಅವರಿಬ್ಬರ ಗಾಢ ಸ್ನೇಹಕ್ಕೆ.

ಬೇಸಗೆಯ ಮಧ್ಯಾಹ್ನ ಮನೆಯಲ್ಲಿ ತಡೆಯಲಾರದಷ್ಟು ಸೆಕೆ. ಆಗ ತಂದೆಯವರು ನಮ್ಮನ್ನೆಲ್ಲ ಕರೆದುಕೊಂಡು ಸರೋವರ ವಿಹಾರಕ್ಕೆ ಹೊರಟರು. ನಮಗೆಲ್ಲ ತುಂಬ ಆನಂದವಾಯಿತು. ಸಂಜೆ ಆರು ಗಂಟೆಗೆ ನಾವೆಲ್ಲರೂ ಊಟ ಮುಗಿಸಿದೆವು. ಎಂಟು ಜನ ನೌಕಾಕ್ರೀಡನಕ್ಕೆ ಎದ್ದೆವು. ಸೂರ್ಯ ಮುಳುಗಿದ್ದರೂ ಸೆಕೆ ಹೆಚ್ಚಾಗಿಯೇ ಇತ್ತು. ಬಿದಿರು ಕೊಳಲನ್ನೂ ಕೆಲವು ಬಿದಿರು ಬುಟ್ಟಿಗಳನ್ನೂ ತರಲು ತಂದೆ ಅಕ್ಕನಿಗೆ ಹೇಳಿದರು. ಸರೋವರಕ್ಕೆ ಹೋದೆವು. ದೋಣಿ ನಡೆಸಲು ಒಬ್ಬನನ್ನು ಕರೆದೆವು. ನೌಕೆಯಲ್ಲಿದ್ದ ಚಪ್ಪರದ ಕೆಳಗೆ ಒಂದು ಮೇಜಿನ ಸುತ್ತಲೂ ಕುಳಿತುಕೊಂಡೆವು. ದೋಣಿ ನಡೆಸುವವನು ಹಿಂದೆ ಕೂತಿದ್ದ. ಮೊದಲು " ಲೈಹೂ " ಸರೋವರದಲ್ಲಿ ಸುತ್ತಾಡಿ, ಜನರೆಲ್ಲರೂ ಹೋದಮೇಲೆ " ನೈಹೂ " ಭಾಗಕ್ಕೆ ಹೋದೆವು.

ದೋಣಿ ಸಾಗುತ್ತಿರುವಾಗ ತಂಪಾಗಿ ಕುಂದಮಾರುತ ಬೀಸಿತು. ಸರೋವರದ ಮಧ್ಯಕ್ಕೆ ದೋಣಿ ಹೋದಾಗ ನಾವಿಕ ಹುಟ್ಟು ಹಾಕುವುದನ್ನು ನಿಲ್ಲಿಸಿದ. ತಾವರೆ ಹೂವಿನ ಕಾಲ ಅದು. "ಕ್ಯಾಂಟಾಂಗ" ಸರೋವರದಲ್ಲಿ ಇದು ತಾನೇ ಬೆಳೆಯುತ್ತದೆ ಹತ್ತಿರದಲ್ಲಿರುವ ಜನ ಇದನ್ನು ಕೊಯ್ಯುತ್ತಾರೆ ಇದೇ ಇಂಗ್ಲಂಡ್, ಅಮೇರಿಕೆಗಳಲ್ಲಿ ಬೆಳೆಯುತ್ತಿದ್ದರೆ ದೊಡ್ಡ ಕಂಪನಿಯೊಂದು ಇದರ ಗುತ್ತಿಗೆ ಹಿಡಿದು ವ್ಯಾಪಾರಮಾಡುತ್ತಿತ್ತು. ಬೇರೆ ಯಾರೂ ಹೂ ಕೊಯ್ಯಬಾರದೆಂದು ವಿಧಿಸುತ್ತಿತ್ತು. ಆದರೆ ನಮ್ಮ ದೇಶದಲ್ಲಿ ಅಂಥ ವ್ಯಾಪಾರ ದೃಷ್ಟಿಯಿಲ್ಲ. ಹರಿಗೋಲಿನಂಥ ಬುಟ್ಟಿಯಲ್ಲಿ ಕೂತು ಯಾವ ಹಳ್ಳಿಯ ಹುಡುಗಿಯಾದರೂ ಬೇಕಾದಷ್ಟು ಹೂವನ್ನು ಆರಿಸಬಹುದು. ಸಂಧ್ಯಾಸಮಯಕ್ಕೆ ಅತ್ಯಂತ ಪ್ರೇಕ್ಷಣೀಯವಾದ ದೃಶ್ಯ. ತಂದೆಯವರು ನನಗೆ ಅದನ್ನು ಮುಖ್ಯವಾಗಿ ತೋರಿಸಿದರು. ಆಗ ತಾನೆ ಚಿತ್ರ ಬರೆಯಲು ಪ್ರಾರಂಭಿಸಿದ್ದ ನನಗೆ ಈ ಸನ್ನಿವೇಶದಿಂದ ತುಂಬ ಸಹಾಯವಾಯಿತು.

ಅಂಣ ಇದನ್ನು ಕುರಿತು ಒಂದು ಕವನ ಬರೆಯತೊಡಗಿದಂತೆ ಧ್ಯಾನ ಮಗ್ನನಾಗಿ ನೋಡುತ್ತಿದ್ದ. ನಾನು ದೋಣಿಯ ಅಂಚಿನಿಂದ ಬಗ್ಗಿ ನೋಡಿದೆ. ನಮ್ಮ ದೋಣಿ ಕಮಲದ ಹೂಗಳ ನಡುವೆ ಹಾದು ಹೋಗುತ್ತಿತ್ತು. ದೋಣಿ ಅವುಗಳ ನಡುವೆ ಹೋಗುವಾಗ ವಿಚಿತ್ರ ಶಬ್ದವಾಗುತ್ತಿತ್ತು. ನಾನು ಕೆಲವು ಹೂ ಕೊಯ್ಯಲು ಹೋದೆ. ಆದರೆ ಅಣ್ಣ, ಅಕ್ಕ ಇಬ್ಬರೂ ಕೇಕೆ ಹಾಕಿದರು. ಅತ್ತಿಗೆ ಹೂ ಕೊಯಿದುಕೊಟ್ಟಳು.

ಬುಟ್ಟಿಯಂಥ ಹರಿಗೋಲಿನಲ್ಲಿ ಕೂತು ಹೂ ಕೊಯ್ಯುವ ಹೆಂಗಸರು, ಹುಡುಗರು ಮೆಲ್ಲನೆ ಹಾಡುವುದು ಕೇಳಿಸುತ್ತಿತ್ತು. ಹಾಡಿನ ಶಬ್ದಗಳು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಆ ಮಂದಸ್ವರ ಕಿವಿಗೆ ಇಂಪಾಗಿತ್ತು. ಅತ್ತಿಗೆ ತನಗೂ ಆ ಹಾಡು ಬರುತ್ತದೆ ಎಂದಳು. ಆಕೆಯ ಕೆಲಸಗಾತಿಯೊಬ್ಬಳು ಮೊದಲು ಈ ಹೂ ಕೊಯ್ಯುತ್ತಿದ್ದಳಂತೆ. ಅವಳಿಂದ ಆ ಹಾಡನ್ನು ಕಲಿತಳಂತೆ. ಅದರ ಹೆಸರು "ಕಮಲದ ಹೂ ಕೊಯ್ಯುವ ಹಾಡು." ಅದನ್ನು ಹಾಡಿ ತೋರಿಸಲು ಅತ್ತಿಗೆಯನ್ನು ಪೀಡಿಸಿದೆವು. ಆಕೆ ಹಾಡಿದಳು. ತುಂಬ ದೊಡ್ಡ ಹಾಡು. ಆದ್ದರಿಂದ ಈಗ ನೆನಪಿಲ್ಲ. 'ಕಮಲದ ಬೀಜಗಳನ್ನು ಸಂಗ್ರಹಿಸುವ ಹಾಡೊಂದು ಇದೆ' ಎಂದ ಅಣ್ಣ. ಇದನ್ನು ಕೇಳಿ ತಂದೆ

ಚಪ್ಪಾಳೆ ತಟ್ಟಿ ಅದನ್ನು ಹಾಡು ಎಂದರು. ಈಗ ಒಳ ಕೆರೆಗೆ ಬಂತು ದೋಣಿ. ಇಲ್ಲಿ ಬಹಳ ಪ್ರಶಾಂತ. ಸುತ್ತಲೂ ಗುಡ್ಡಗಳು ಹಸಿರು ಮುರಿಯುವ ಎಲೆಗಳ ನಡುವೆ ಕಮಲದ ಹೂ ಶೋಭಿಸುತ್ತಿವೆ. ಅಕ್ಕ ಒಂದು ಕಮಲದ ಹೂವನ್ನು ಕಿತ್ತುಕೊಳ್ಳಲು ಪ್ರಯತ್ನಿಸಿದಳು. ತಂದೆ ಅವಳನ್ನು ತಡೆದು "ಬೇಡ. ಬಳ್ಳಿಯಲ್ಲಿಯೇ ಅವು ಹೆಚ್ಚು ಶೋಭಿಸುತ್ತವೆ" ಎಂದರು. ಆಗ ಅಂಣ "ಕಮಲದ ಬೀಜಗಳ ಹಾಡ"ನ್ನು ಹಾಡಿದ

ಸಂಜೆಯಾಯಿತು. ನಮ್ಮ ತಲೆಯ ಮೇಲೆ ಚಂದ್ರ ಕಾಣಿಸಿಕೊಂಡ. ನೀರಿನಲ್ಲಿ ಬೆಳುದಿಂಗಳು ಕಂಗೊಳಿಸಿತು. ಇದರಿಂದ ವಾತಾವರಣ ಎಷ್ಟು ಶಾಂತವಾಗಿತ್ತು ಎಂಬ ಕಲ್ಪನೆ ಬಂತು ನಮ್ಮ ದೋಣಿ ಗುಡ್ಡದ ಇಳುಕಲಿನ ಗುಂಟ ಸರೋವರದಲ್ಲಿ ಸಾಗಿತ್ತು. ಸೇತುವೆಯ ಕೆಳಗಿಂದ ಹಾಯ್ದು 'ನ್ಯೆ-ಹೂ" ಗೆ ಇಳಿಯಿತು. ಇಲ್ಲ ಬಬ್ಬ ಇನ್ನೂ ಮೀನು ಹಿಡಿಯುತ್ತಿದ್ದ. ಬೆಳುದಿಂಗಳ ಹಾಲು ಬೆಳಕಿನಲ್ಲಿ ಅವನ ಆಕಾರ ಕಾಣುತ್ತಿತ್ತು.

ಸರೋವರ ಶಾಂತವಾಗಿದ್ದರೂ ದಂಡೆಗುಂಟ ದೀಪಗಳ ಪ್ರತಿಬಿಂಬ ಕಾಣುತ್ತಿದ್ದುದರಿಂದ ಸರೋವರಕ್ಕೂ ಪಟ್ಟಣದ ಕಳೆ ಬಂದತಿಂತ್ತು. ಬೆಳುದಿಂಗಳಿನಲ್ಲಿ ದೀಪಗಳು ಕೆಂಪಾಗಿ ಕಂಡವು. ಕೆರೆಯಲ್ಲಿದ್ದ ನಡುಗಡ್ಡೆಯನ್ನು ನಮ್ಮ ದೋಣಿ ಸುತ್ತುವರಿದು ದೂರ ಸಾಗಿತ್ತು ಈ ನಡುಗಡ್ಡೆಯ ಗಿಡಗಳ ಮಧ್ಯೆ ಒಂದು ದೇವಾಲಯ ಸರೋವರದ ದೇವತೆಯದು. ಆದರೆ ಸಾಮಾನ್ಯವಾಗಿ ಕವಿಗಳು, ಚಿತ್ರಕಾರರು, ಬರೆಹಗಾರರು, ಸಾಹಿತಿಗಳು ಕುಳಿತುಕೊಳ್ಳುವ ಸ್ಥಳವದು. ನಾವು ಅಲ್ಲಿ ಇಳಿಯಲು ಬಯಸಲೇ ಇಲ್ಲ.

ಆಗಾಗ ಬೇರೆ ದೋಣಿ ನಮ್ಮನ್ನು ದಾಟಿ ಹೋದವು. ಒಂದು ನೌಕೆಯಿಂದ "ಚ್ಯೆ" (ಬಿದಿರು ಕೊಳವೆ) ವಾದ್ಯ ಬಾರಿಸುವ ಸ್ವರ ಕೇಳಿ ಬಂತು. ಕೂಡಲೆ ಅಕ್ಕನಿಗೆ ತನ್ನ ಕೊಳಲಿನ ನೆನಪಾಗಿ ಒಂದು ಹಾಡನ್ನು ಬಾರಿಸಿ ತೋರಿಸಿದಳು. ಆವಳಿಗೆ ಬಾರಿಸಲು ಚೆನ್ನಾಗಿ ಬರುತ್ತಿರಲಿಲ್ಲ. ನಮ್ಮಲ್ಲಿ ಅವಳಷ್ಟೂ ಕೂಡ ಬಾರಿಸಬಲ್ಲವರು ಯಾರೂ ಇರಲಿಲ್ಲ. ಆವಳಿಗೆ ಬರುತ್ತಿದ್ದುದೂ ಪ್ರೇಮಗೀತ, ಜಾನಪದ ಸಂಗೀತ. "ಈ ಸಮಯಕ್ಕೆ ತಕ್ಕ ಸಂಗೀತ ಇದಲ್ಲ' ಎಂದರು ತಂದೆ. ಅಂಣ 'ಟ್ಯೂ ಚಿಂಗ್' ಎಂಬ ಹಾಡನ್ನು

ಬಾರಿಸಲು ಹೇಳಿದ. ಮೆಲ್ಲನ್ನ ದನಿಯಿಂದ ತಾನೂ ಹಾಡಿದ. ಹಳೆಯ ಕಾಲದ ಹಾಡು. ಹನ್ನೆರಡು ನುಡಿ. ಅಕ್ಕ ಜೊತೆಗೆ ಕೊಳಲು ಬಾರಿಸುತ್ತಲಿದ್ದಳು.

ಕೆರೆಯ ದಂಡೆಯಲೊಮ್ಮೆ, ಕೆರೆಯ ನೀರಲ್ಲೊಮ್ಮೆ
ಬರುತಿಹನು ಮುದುಕ; ಅವನೊಬ್ಬ ಮೀನುಗಾರ.
ಒಬ್ಬನೇ ನೌಕೆಯಲಿ ಬಂದು ಹೋಗುವನವನು
ಯಾವ ಎಡೆತಡೆ ಅವಗೆ ಇಲ್ಲ ಇಲ್ಲ.

ಕೆರೆಯ ದಂಡೆಯ ಮೇಲೆ
ಏಡಿ ಮೊಸಳೆಗಳಿರಲಿ !
ದೂರ ನೀರಲಿ ದೀಪವಿಲ್ಲದಿರಲಿ !

ಕಿವಿಯೊಳುಲಿಯುವ ಮಂದ ಮಾರುತ
ಕೆರೆಯ ದಂಡೆಯ ಮರವ ಸೇರುತ
ತಂಪುಗೊಳಿಸುವ ಬಿಸಿಲ ದಿನವನು.

ಹೊತ್ತು ಮುಳುಗಲು ಕತ್ತಲಾಗಲು
ಒತ್ತಿ ಹಾಡುವೆ ಹಾಡನೊಂದನು–ರಾತ್ರಿಯಾಗುತಿದೆ.
ತೆರೆಯ ನೀರನು ಸರಿಸಿ ಕಂಡೆನು
ಹೊನ್ನ ಬಿಂಬವ ನೊಂದನು
ಮೇಲೆ ಮುಗಿಲಲಿ ನೋಡೆ ಪೂರ್ವದ
ದಿನ್ನೆಯೇರುವ ಚಂದ್ರನು.

ಸಂಜೆಯ ಆ ತಂಗಾಳಿಯಲ್ಲಿ ಈ ಸ್ವರಗಳು ಕೂಡಿಕೊಂಡವು. ನಾವಿಕರೂ ಕೇಳಿ ತನ್ಮಯರಾಗಿ ಕೆಲಹೊತ್ತು ಹುಟ್ಟು ಹಾಕುವುದನ್ನು ಬಿಟ್ಟು ಕುಳಿತರು. ನೌಕೆ ತಾನೇ ಸಾಗಿತ್ತು.

ಅಲ್ಲಿ ಕುಳಿತವರೆಲ್ಲ ಒಂದು ಹಾಡನ್ನೋ - ಒಂದು ಕತೆಯನ್ನೋ ಹೇಳಿದರು. ನನ್ನ ಸರದಿ ಬರುತ್ತಲೇ, "ನಾನೊಂದು ಕವಿತೆ ಬರೆದಿದ್ದೇನೆ" ಎಂದೆ. ಎಲ್ಲರೂ ಇದ್ದಕ್ಕಿದ್ದಂತೆ ಸ್ತಂಭಿತರಾದರು. ವಿನೋದ ಮಾಡಿವೆ ಎಂದು

ನಗತೊಡಗಿದರು. ತಂದೆಯವರು ಮಾತ್ರ ನಾನು ಬರೆದ ಕವಿತೆಯನ್ನು ಓದಲು ಹೇಳಿದರು. ಓದಿದೆ.

ಕೆರೆಯ ನಡುವೆ ದೋಣಿ
ಹರಿಯುತಿದೆ ಸಾಗಿ
ಆಗಸದಲಿ ಚಂದ್ರ
ಮೆರೆಯುತಿಹನೀಗ
ಕೆರೆಯ ತಳದಿ ಕೂಡ
ಹೊಳೆಹೊಳೆವ ಚಂದ್ರ
ಸುತ್ತಲೂ ಸುಮರಾಶಿ
ಮತ್ತೇನು ಚಿಂತೆ ?

ಅಂಣ ಇದನ್ನು ಕೇಳಿ ತಪ್ಪು ಎಂದ. ಛಂದಸ್ಸು, ಪ್ರಾಸ ಇರಲಿಲ್ಲ. ಇಂಥ ಕವಿತೆಯೇಕೆ ಎಂದ. ಆದರೆ ತಂದೆ ಛಂದಸ್ಸು, ಲಯ, ಪ್ರಾಸ ಇಲ್ಲದೆ ಹೋದರೂ ಭಾವವನ್ನು ವ್ಯಕ್ತಗೊಳಿಸುವ ಕಲೆ ಸಾಧಿಸಿದೆ. ಕವಿತೆ ಹೇಗೆ ಬರೆಯಬೇಕೋ ನೀನು ಹೇಳಿಕೊಡು " ಎಂದರು.

ಇಷ್ಟಕ್ಕೆ ಎಲ್ಲರೂ ಸುಮ್ಮನಿರುತ್ತಿದ್ದರೇನೋ ? ಹಿಂದಿನ ನಮ್ಮ ಭಾಷೆಯಲ್ಲಿ ಹೂ ಎಂದರೆ ಹುಡುಗಿ ಎಂಬ ಅರ್ಥ ಎಂದು ಯಾರೋ ಹೇಳಿದರು. ಇದರಿಂದ ನನ್ನ ಕವಿತೆಯ ಕೊನೆಯ ಸಾಲನ್ನು ಎತ್ತಿಕೊಂಡು ಎಲ್ಲರೂ ನನ್ನನ್ನು ಪೀಡಿಸಲು ಒಳ್ಳೇ ಅವಕಾಶ ದೊರೆತಂತಾಯಿತು. 'ಈ ಕವಿತೆ ಬರೆಯುವಾಗ ಯಾವ ತರುಣಿ ನಿನ್ನ ಮನದೆದುರು ಸುಳಿದಳು ?' ಎಂದು ಕೆಣಕಿದರು. ನನಗೆ ಕಣ್ಣು ತುಂಬ ನೀರು ಹರಿದವು. ತಂದೆ ನನ್ನನ್ನು ರಮಿಸಲು ಶಾಂತಗೊಳಿಸಲು "ಚನ್ನಾಗಿ ಅಭ್ಯಾಸ ಮಾಡಿದರೆ ಸುಂದರ ಹೆಂಡತಿ ಸಿಗುವುದೇನೂ ಕಷ್ಟವಲ್ಲ " ಎಂದು ಹೇಳುತ್ತ ಮತ್ತಿಷ್ಟು ಗಾಸಿಗೊಳಿಸಿದರು.

ಈ ಘಟನೆ ಮರೆಯುವಂತಾಗಲು ಅನೇಕ ತಿಂಗಳು ಬೇಕಾದವು. "ಕ್ಯಾಂಟ್ಯಾಂಗ " ಸರೋವರದಲ್ಲಿ ಕಳೆದ ಆ ಸಂಧ್ಯಾ ಸಮಯದ ಈ ಕವಿತೆ, ಆ ವಿನೋದ ಇಂದಿಗೂ ನನಗೆ ಚನ್ನಾಗಿ ನೆನಪು ಇದೆ.

---

# ೧೩. ಚಿಂಗ್ ಮಿಂಗ್ ಜಾತ್ರೆ

ಮಳೆಗಾಲ ಕಳೆದು ಬಿಸಿಲು ಸುಡುವ ಮೊದಲು ಈ ಜಾತ್ರೆ ನಡೆಯುವು ದನ್ನು ನೋಡಿದರೆ ಜನರಿಗೆ ಆನಂದ, ವಿನೋದ ಉಂಟಾಗಲೆಂದೇ ಮಾಡಿದ ಹಾಗಿದೆ. ಚಿಂಗ್–ಮಿಂಗ್ ಎಂದರೆ ಹೊರಗೆ ತಿರುಗಾಡಲು ಅನುಕೂಲ ವಾದ ಶುಭ್ರ ಸ್ವಚ್ಛ ಹವೆ. ಅದಕ್ಕೆ ಸರಿಯಾಗಿ ನಮ್ಮ ಮೂರನೆ ತಿಂಗಳಲ್ಲಿ, ಏಪ್ರಿಲ್ ಕೊನೆಗಾಗಲಿ ಮೇ ಮೊದಲಿಗಾಗಲಿ, ಜಾತ್ರೆ ನೆರೆಯುತ್ತದೆ. ಇದೇ ಸಮಯದಲ್ಲಿ ಮನೆಯ ಜನರನ್ನೆಲ್ಲ ಅವರವರ ಪೂರ್ವಜರ ಸಮಾಧಿಗಳ ದರ್ಶ ನಕ್ಕೆ ಕರೆದುಕೊಂಡು ಯಾತ್ರೆ ಹೋಗುವ ವಾಡಿಕೆಯೂ ಉಂಟು. ಕಾನ್ ಫೂಷಿಯಸ್‌ನ ಉಪದೇಶದಿಂದ ನಾವು ನಮ್ಮ ಪೂರ್ವಜರ ಪೂಜೆಗೆ ತುಂಬ ಮಹತ್ತ್ವ ಕೊಡುತ್ತೇವೆ. ಈ ಜಾತ್ರೆ ಹತ್ತಿರ ಬರುತ್ತಲೆ ನಮ್ಮ ಮನೆಯ ಹಿರಿಯರಿಗೆ ಯಾತ್ರೆಯ ವಿಚಾರ ಬಂತು. ನಾನೋ, ಹಳ್ಳಿಯ ಕಡೆಗೆ ಹೋಗಲು ತುಂಬ ಉತ್ಸುಕನಾಗಿದ್ದೆ. ಈ ಯಾತ್ರೆಗಾಗಿ ಈ ಸಮಯವನ್ನು ಆರಿಸಿಕೊಂಡ ಕಾನ್‌ಫುಷಿಯಸ್ ಎಷ್ಟು ಬುದ್ಧಿವಂತ!

ಯಾತ್ರೆಗೆ ಮಕ್ಕಳನ್ನು ಕರೆದುಕೊಂಡು ಹೋಗಲು ಅವರಿಗೆ ಕನಿಷ್ಠ ಹನ್ನೆರಡು ವರ್ಷ ಆಗಿರಬೇಕು. ನಮ್ಮ ವಂಶಜರ ಸಮಾಧಿಗಳು ಗುಡ್ಡದ ತುದಿಯ ಕಾಡಿನಲ್ಲಿ ಇದ್ದುದರಿಂದ ಅಲ್ಲಿಗೆ ನಡೆದೇ ಹೋಗಬೇಕು. ಮೇಣೆಯ ಹೊರತು ಬೇರಾವ ವಾಹನವೂ ಹೋಗುತ್ತಿರಲಿಲ್ಲ. ಕೇವಲ ಮುದುಕರಿಗಾಗಿ ಮಾತ್ರ ಮೇಣೆ. ಈ ಯಾತ್ರೆ "ಚಿಂಗ-ಮಿಂಗ" ಜಾತ್ರೆಗಿಂತ ಮುಂಚೆಯೆ ನಡೆಯಬಹುದು. ಅವರವರ ಅನುಕೂಲ ನೋಡಿ ಯಾತ್ರೆಗೆ ಹೋಗಿ ಬರ ಬೇಕಾಗಿತ್ತು.

ಹತ್ತು ದಿನ ಮುಂಚೆಯೆ ಪ್ರಯಾಣ ಸನ್ನಾಹ ಪ್ರಾರಂಭ. ಬಣ್ಣದ ಕಾಗದಗಳನ್ನು ಬೇಕಾದಷ್ಟು ತಂದರು. ಹೆಂಗಸರು ಕುಳಿತು ಅವನ್ನು ಹರಿದು ಸಮಾಧಿ-ಬಾವುಟ ಮಾಡಿದರು ಬಣ್ಣಬಣ್ಣದ ಕಾಗದಗಳನ್ನು ಉದ್ದಕ್ಕೆ ಕತ್ತರಿಸಿ ಒಂದು ಕೋಲಿಗೆ ಬಣ್ಣ ಬದಲಾಯಿಸುತ್ತ ಸುತ್ತುತ್ತಾರೆ. ತುದಿಗೆ ಬಾವುಟದಂತೆ ದೊಡ್ಡ ಕಾಗದ. ಗಾಳಿಗೆ ಅವು ಪಟ ಪಟ ಬಾವುಟ ದಂತೆ ಹಾರಾಡುತ್ತವೆ. ಈ ಹಾರಾಟ ಪೂರ್ವಜರು ಬಂದು ತಮ್ಮ ಮನೆಯ ಜನರನ್ನೆಲ್ಲ ನೋಡಿ ಹೋದರೆಂಬುದನ್ನು ಸೂಚಿಸುತ್ತದೆ. ಹೂಗಳನ್ನು ಸಮಾಧಿಯ ಮೇಲೆ ಇಡಕೂಡದು. ವರ್ಷಕ್ಕೆ ಒಂದಾವರ್ತಿ ಈ ಕಾಗದದ ಬಾವುಟ ನೆಟ್ಟು ಬರುವುದೇ ವಾಡಿಕೆ.

ನಮ್ಮ ಮನೆತನದ ಉಳಿದ ಹುಡುಗರಂತೆ ನಾನೂ ಹನ್ನೆರಡನೆಯ ವಯಸ್ಸಿನಲ್ಲಿ ಯಾತ್ರೆಗೆ ಹೊರಟೆ. ನನ್ನ ಮನಸ್ಸಿನಲ್ಲಿ ಈ ಯಾತ್ರೆಯ ನೆನಪು ಅಚ್ಚೊತ್ತಿದಂತೆ ಈಗಲೂ ಮೂಡಿ ಇದೆ. ಅಜ್ಜ-ಅಜ್ಜಿ ತುಂಬ ಮುದುಕರಾದುದರಿಂದ ಬರಲಿಲ್ಲ. ನಮ್ಮ ದೊಡ್ಡಪ್ಪ ಈ ಯಾತ್ರೆಯ ಹೊಣೆ ವಹಿಸಿಕೊಂಡ. ಎಲ್ಲ ಹಿರಿಯ ಗಂಡಸರೂ ಮನೆಬಿಟ್ಟು ಯಾತ್ರೆಗೆ ಹೋಗಲು ಶಕ್ಯವಿರಲಿಲ್ಲ. ಹಿರಿಯ ಹೆಂಗಸರು ಬೆಟ್ಟ ಗುಡ್ಡ ಹತ್ತಿ ಅಷ್ಟು ದೂರ ನಡೆಯಲಾರರು. ಕೊನೆಗೆ ನಮ್ಮ ತಂದೆ, ಇಬ್ಬರು ಕಕ್ಕಂದಿರು, ದೊಡ್ಡಪ್ಪ ನಿಗೆ ಸಹಾಯಕ್ಕಾಗಿ ಹೊರಟರು. ನಾವೆಲ್ಲರೂ ಒಮ್ಮೆಲೆ ಹೊರಟೆವಾದರೂ ಕೂಡಲೆ ಬೇರೆ ಬೇರೆ ಮೂರು ಗುಂಪು ಮಾಡಿಕೊಂಡೆವು. ನಾನು ನಮ್ಮ ತಂದೆಯ ಗುಂಪಿನಲ್ಲಿದ್ದೆ. ಈ ಗುಂಪಿನಲ್ಲಿಯೇ ನಮ್ಮ ದೊಡ್ಡಪ್ಪ ಇದ್ದರು. ಇಬ್ಬರು ಕಕ್ಕಂದಿರು ಎರಡು ಗುಂಪು ಮಾಗಿಸಿಕೊಂಡು ನಡೆದರು. ಹೀಗೆ ಬೇರೆ ಬೇರೆಯಾಗಿ ಹೊರಡುವ ಮೊದಲು ಕಿಯು-ಕಿಯಾಂಗಿನಿಂದಲೂ ಪರ್ವತದ ಮಧ್ಯೆ ಇರುವ ಒಂದು ಹಳ್ಳಿಯಲ್ಲಿ ಎಲ್ಲರೂ ಮತ್ತೆ ಸೇರಬೇಕೆಂದು ಗೊತ್ತುಮಾಡಿಕೊಂಡೆವು. ಆ ಹಳ್ಳಿಯಲ್ಲಿ ಒಂದು ಸೊಗಸಾದ ಅನ್ನ ಸತ್ರವಿತ್ತು.

ಆ ದಿನ ತುಂಬ ಆಲ್ಹಾದಕರವಾಗಿತ್ತು. ಅಷ್ಟು ಸೆಕೆಯೂ ಇಲ್ಲ; ಚಳಿಯೂ ಇಲ್ಲ. ಸೂರ್ಯ ಚನ್ನಾಗಿ ಪ್ರಕಾಶಿಸುತ್ತಿದ್ದ. ಮಧ್ಯೆ ತುಸು

ತುಸು ಮಳೆಯೂ ಬಂದು ಹೋಗುತ್ತಿತ್ತು. ನನಗೋ ಮಳೆ ಎಂದರೆ ತುಂಬಾ ಪ್ರೀತಿ. ಸುತ್ತಲಿನ ಗುಡ್ಡಗಳೆಲ್ಲ ಹಸಿರಾಗಿ ಕಾಣುತ್ತಿದ್ದವು.

ಹೊಲಗಳಲ್ಲಿ ಬಂಗಾರದ ಮುದ್ದೆಗಳಂತೆ ಹಚ್ಚಗೆ ಬಿಟ್ಟ ಸೆಣಬಿನ ಪಯಿರು, ಹೊಲಗಳ ಮೇಲೆಲ್ಲ ಬಂಗಾರವನ್ನು ಹಾಸಿದಂತೆ ಇತ್ತು. ಕೆಲವು ಹೊಲಗಳಲ್ಲಿ ಭತ್ತ ಗೋಧಿಯ ಸಸಿ ಕಂಗೊಳಿಸುತ್ತಿದ್ದವು. ಅಲ್ಲಲ್ಲಿ ಒಕ್ಕಲಿಗರು ಕಾಣುತ್ತಿದ್ದರು. ಕೆಲವರಿನ್ನೂ ಬಿತ್ತುತ್ತಿದ್ದರು. ಕೆಲವರು ಗಳೆ ಹೂಡಲು ಎತ್ತುಗಳನ್ನು ಹಿಡಿದುಕೊಂಡು ಹೋಗುತ್ತಿದ್ದರು. ಕೆಲವರು ಹಾಡು ಹಾಡುತ್ತಿದ್ದರು. ಈ ಹಾಡುಗಳೊಂದಿಗೆ ಪಕ್ಷಿಗಳ ಕಿಲಕಿಲ ಧ್ವನಿ. ಬೇರಾವ ಶಬ್ದವೂ ಕೇಳಿಸುತ್ತಿರಲಿಲ್ಲ. ಗಿಡಗಳೊಳಗಿಂದ ಹಾಯ್ದು ಹೋಗುವ ಮಂದಮಾರುತವನ್ನೂ ಕೇಳಬಹುದಾದಷ್ಟು ಪ್ರಶಾಂತ. ಪ್ರತಿ ಗುಡಿಸಲ ಬಳಿಯೂ ಹೂ ಬಿಟ್ಟ ತಾಳೆಯ ಗಿಡ. ಝರಿಗಳ ಪಕ್ಕದಲ್ಲಿ ಎಲ್ಲೆಲ್ಲೂ ಹೂಗಳೇ. ಪ್ರಕೃತಿ ಬಹಳ ರಮ್ಯವಾಗಿತ್ತು.

ಕಣ್ಣುಮುಚ್ಚಿ ಕುಳಿತು ಈಗಲೂ ಆ ನೋಟವನ್ನೆಲ್ಲ ನೆನಪಿಸಿಕೊಳ್ಳಬಲ್ಲೆ. ಹಳದಿ, ಹಸಿರು, ಗುಲಾಬಿ, ಬಿಳಿ, ನಡುನಡುವೆ ಹಳ್ಳಿಯ ಹುಡುಗಿಯರು. ಕೆಂಪು ಚಲ್ಲಣ, ಅಂಗಿ. ಪಂಚವರ್ಣದ ದೃಶ್ಯ ! ನಾವು ನೋಡಿದ ಜನರೆಲ್ಲರೂ ತುಂಬ ಉಲ್ಲಸಿತರಾಗಿ ಕಾಣುತ್ತಿದ್ದರು ಪರಸ್ಪರ ವಂದನೆಗಳನ್ನು ಅರ್ಪಿಸಿ, ಆ ಜನರಿಂದ ನಮ್ಮ ದಾರಿಯನ್ನು ಕೇಳಿ ತಿಳಿದುಕೊಳ್ಳುತ್ತಿದ್ದೆವು. ದಾರಿ ತಪ್ಪಿದಾಗಲೆಲ್ಲ ನನಗೊಂದು ಬಗೆಯ ಮೋಜು ಅನಿಸುತ್ತಿತ್ತು. ನಗುತ್ತ ತಿರುಗಿ ಸರಿಯಾದ ದಾರಿಗೆ ಬರುತ್ತಿದ್ದೆವು. ಈ ಬಾಲಲೀಲೆಯ ಆನಂದ ವರ್ಣನಾತೀತ. ಹೊಸದಾಗಿ ಬಂಧುಗಳನ್ನು ಕಳೆದುಕೊಂಡ ದುಃಖದ ಕೆಲವರು ಯಾತ್ರಿಕರೂ ಸಿಕ್ಕಿದರು.

ದೊಡ್ಡಪ್ಪ ತನಗೆ ಬೇಕೆನಿಸಿದಾಗ ನನ್ನನ್ನು ಕರೆದು ತನ್ನ ಮೇಣೆಯಲ್ಲಿ ಕೂಡಿಸಿಕೊಳ್ಳುತ್ತಿದ್ದರು. ಬೇಸರ ಕಳೆಯಲು ನನ್ನೊಡನೆ ಹರಟೆ ಹೊಡೆಯುತ್ತಿದ್ದರು. ಕೆಲವು ಹಳ್ಳಿಯ ಕತೆಗಳನ್ನೂ ಹೇಳಿದರು. ಕಾಡಿನಲ್ಲಿ ಬೆಳೆದ ಗಿಡ ಮೂಲಿಕೆಗಳನ್ನು ತೋರಿಸಿ ಅವುಗಳ ಪರಿಚಯ ಮಾಡಿಕೊಟ್ಟರು. ನಾನು ತೀರ ಚಿಕ್ಕವನಿರುವಾಗ ನಮ್ಮ ತಂದೆ ಕಲಿಸಿದ ಕವಿತೆಯೊಂದನ್ನು ನೆನಪಿಗೆ ತಂದು ಅದನ್ನು ಹೇಳಿದರು. ಅಷ್ಟು ಜನರಿದ್ದಾಗ ಆ ಕವಿತೆ ಹೇಳಲು ಬಹಳ

ನಾಚಿಕೆ ಬಂತು. ತುಂಬ ಪ್ರೋತ್ಸಾಹ, ಆಶ್ವಾಸನ ಕೊಟ್ಟಮೇಲೆ ಹೇಳಿದೆ. ಚಿಂಗ್‌ಮಿಂಗ್ ಜಾತ್ರೆಯನ್ನು ಕುರಿತು ಬರೆದ ಕವಿತೆ ;

ಚಿಂಗ್-ಮಿಂಗ್ ಉತ್ಸವ ದಿನದಂದು ಹನಿಹನಿಮಳೆ ಸುರಿಯುತಲಿತ್ತು.
ದಾರಿಯ ಮೇಲಿನ ಯಾತ್ರಿಕರು ಕಂಡರು ಎದೆಯೊಡೆದವರಂತೆ.
ಗಂಡಂಗದಂಗಡಿ ಎಲ್ಲಿದೆ ಎಂದು ನಾ ಕೇಳಲು ದನಕಾಯುವನು
ದೂರದಿ ಗಿಡಗಳ ಗುಂಪಿನಲಿ ಕೈಯನು ಚಾಚುತ ತೋರಿದನು.

ಈ ಕವಿತೆ ಹೇಳಿದಾಗ ಎಲ್ಲರೂ ಸಂತೋಷಗೊಂಡರು. ದೊಡ್ಡಪ್ಪನಿಗೂ ತಂದೆಯವರಿಗೂ ಮದ್ಯವೆಂದರೆ ಅತಿ ಪ್ರೀತಿ. ಅವರಿಗೆ ಈ ಕವಿತೆ ತುಂಬ ಹಿಡಿಸಿತು. ನನಗೂ ಆ ಕವಿತೆಯ ಅರ್ಥ ಮೊದಲನೆ ಸಲ ತಿಳಿಯಿತು.

ನಾವು ನೋಡಬೇಕಾದ ಸಮಾಧಿಗಳು ಎರಡು ಗುಡ್ಡಗಳ ಮೇಲೆ ಇದ್ದವು. ಉತ್ತರ ಚೀನಾದಿಂದ ಕಿಯುಕಿಯಾಂಗಕ್ಕೆ ಮೊದಲು ಬಂದ ನಮ್ಮ ಮೂಲ ಪುರುಷನ ಸಮಾಧಿಯೂ ಇಲ್ಲಿತ್ತು. ನಾವು ಚಿಕ್ಕವರು. ಬೇಗ ಬೇಗ ಬಾವುಟ ಬಿಚ್ಚಿದೆವು, ತಿಂಡಿ ತೆಗೆದೆವು. ಮೊದಲು ಆ ಸಮಾಧಿಯ ಮೇಲೆ ಕೆಲವು ಬಾವುಟ ನಿಲ್ಲಿಸಿದೆವು. ಅದರ ಮುಂದೆ ತಿಂಡಿ ಇರಿಸಿದೆವು. ಧೂಪ ಹಾಕಿ ನಮ್ಮ ವಯಸ್ಸಿನ ಕ್ರಮದಲ್ಲಿ ಮೊಳಕಾಲೂರಿ ಎಲ್ಲರೂ ನಮಸ್ಕರಿಸಿದೆವು. ಒಂದು ಬದಿಯಲ್ಲಿ ಸತ್ತವರ ಹೆಸರು, ಕಲ್ಲಿನ ಮೇಲೆ ಜನನ–ಮರಣ ಕಾಲ, ಅವರ ಹೆಂಡತಿ, ಅವರು ನಮ್ಮ ವಂಶವನ್ನು ಇಲ್ಲಿಗೆ ತಂದದ್ದು, ಎಲ್ಲವನ್ನೂ ಕೆತ್ತಿದ್ದರು.

ಇದಾದ ಮೇಲೆ ಉಳಿದ ಗೋರಿಗಳತ್ತ ಸಾಗಿದೆವು.

ನಮ್ಮ ತಾಯಿಯದು ಬೇರೆ ಗುಡ್ಡದ ಮೇಲಿತ್ತು. ಉಳಿದವರೆಲ್ಲ ಒಂದು ಗುಡಿಸಿಲಿನಲ್ಲಿ ವಿಶ್ರಾಂತಿ ತಕ್ಕೊಳ್ಳುತ್ತಿದ್ದಾಗ ತಂದೆಯವರು ನನ್ನನ್ನೂ ನನ್ನ ಅಕ್ಕ–ಅಣ್ಣನನ್ನೂ ಅಲ್ಲಿಗೆ ಕರೆದೊಯ್ದರು. ಮೊದಲೇ ನಾವು ಅಲ್ಲಿಗೇಕೆ ಹೋಗಲಿಲ್ಲವೆಂದು ನಾನು ದಾರಿಯಲ್ಲಿ ತಂದೆಯವರನ್ನು ಕೇಳಿದೆ ಹಿರಿಯರನ್ನು ಮೊದಲು ವಂದಿಸಬೇಕೆಂದು ಹೇಳಿದರು. ತಂದೆಯವರು ತುಂಬ ಆದರದಿಂದ ಹೀಗೆ ಹೇಳಿದರೂ ನನಗೇನೋ ನನ್ನ ತಾಯಿಗಿಂತ ಹಿರಿಯರಾರೂ ಇಲ್ಲ

ಎನಿಸಿತು. ಆದರೆ ತಂದೆಯ ಗಂಭೀರ ಮುಖಮುದ್ರೆಯನ್ನು ಕಂಡು ಮುಂದೆ ಪ್ರಶ್ನೆ ಕೇಳುವ ಮನಸ್ಸಾಗಲಿಲ್ಲ. ನಾವು ತಾಯಿಯ ಸಮಾಧಿಯನ್ನು ತಲಪಿದೆವು. ಸುತ್ತಲಿನ ಗಿಡಗಳು ಚನ್ನಾಗಿ ಬೆಳೆಯುತ್ತಿವೆ ಎಂದು ತಂದೆ ತಮ್ಮ ಸಮಾಧಾನವನ್ನು ವ್ಯಕ್ತಪಡಿಸಿದರು. ಸಮಾಧಿ ಮಾಡಿದಾಗ ತಂದೆಯವರೇ ಅಲ್ಲಿ ಪಾಯಿನ್ ಗಿಡಗಳನ್ನು ಹಚ್ಚಿದ್ದರು. ತುಸು ದೂರ ಇಳುಕಲಿನಲ್ಲಿ ಬೇರೆ ಕಾಡುಗಿಡಗಳು ತುಂಬ ಬೆಳೆದಿದ್ದವು. ಹಸಿರು ಕೆಂಪು ಬಣ್ಣಗಳ ಮಿಶ್ರಣದ ಆ ನೋಟ ಚಿತ್ರ ಬಿಡಿಸಿದಂತೆ ಬಹಳ ಅಂದವಾಗಿ ಕಾಣುತ್ತಿತ್ತು. ಆದರೂ ತಂದೆಯವರು ನೀಳವಾದ ನಿಟ್ಟುಸಿರು ಬಿಟ್ಟರು. ಧೂಪಹಾಕಿ ಎಡೆಮಾಡಿದ ಮೇಲೆ ತಂದೆ ಸಮಾಧಿಯನ್ನು ಮೂರು ಸಲ ವಂದಿಸಿದರು. ಸತ್ತ ಆ ತಾಯಿಯ ಮಕ್ಕಳು ನಾವು ಮೊಳಕಾಲೂರಿ ಮೂರು ಮೂರು ಸಲ ನಮಸ್ಕರಿಸಿದೆವು. ತಂದೆ ಏನೂ ಮಾತನಾಡಲಿಲ್ಲ. ಕಲ್ಲಿನ ಮೇಲೆ ಬರೆದುದನ್ನು ಓದಿಕೊಳ್ಳಲು ಹೇಳಿದರು. ಕೆಲ ಹೊತ್ತು ನಾವು ಮೌನದಿಂದ ಇದ್ದೆವು.

ಮರಳಿ ಗುಡಿಸಿಲಿಗೆ ಬಂದೆವು. ಆ ಗುಡಿಸಿಲಿನಲ್ಲಿದ್ದ ಜನ ಸಮಾಧಿಗಳಿಗೆ ಕಾವಲಿದ್ದವರು. ನಮ್ಮ ದೊಡ್ಡಪ್ಪ ಆ ಜನರಿಗೆ ಎಲ್ಲ ಸಮಾಧಿಗಳನ್ನು ಸರಿಯಾಗಿ ನೋಡಿಕೊಳ್ಳಲು ಏನೋ ಹೇಳಿದರು. ತಂದೆಯವರು–ನಮ್ಮ ತಾಯಿಯ ಸಮಾಧಿಯ ಬಗ್ಗೆ ಎರಡು ಮಾತು ಹೆಚ್ಚು ಹೇಳಿದರು. ನಾವು ಅಲ್ಲಿಂದ ಹೊರಡುವಾಗ ಸುತ್ತಲಿನ ಗಿಡಗಳ ಟೊಂಗೆಗಳನ್ನು ತಕ್ಕೊಂಡೆವು. ನಮ್ಮ ಪೂರ್ವಜರು ಈ ಗಿಡಗಳಂತೆ ನಮ್ಮನ್ನೆಲ್ಲ ಸಂರಕ್ಷಿಸಿಕೊಂಡು ಹೋಗಲಿ ಎಂದು ಆಚಾರ. ವಸಂತ ಕಾಲದ ಕುರುಹಿಗಾಗಿಯೂ ಈ ಕೊಂಬೆಗಳನ್ನು ತರುವ ವಾಡಿಕೆ.

ಇದಾದ ಕೆಲವು ಗಂಟೆಗಳ ಅನಂತರ ನಮ್ಮ ಬಿಡಾರಕ್ಕೆ ಬಂದೆವು. ಅಲ್ಲಿ ಆಗಲೇ ಉಳಿದ ಎರಡು ಗುಂಪಿನ ಜನರೂ ಬಂದಿದ್ದರು. ಸತ್ರದ ತುಂಬಾ ನಮ್ಮ ಗುಂಪೇ. ನಮ್ಮಂತೆ ಅವರೂ ಹಸಿರು ರೆಂಬೆಗಳನ್ನು ತಂದಿದ್ದರು. ಎಲ್ಲರೂ ಏನೇನೋ ಹರಟೆ ಕೊಚ್ಚುತ್ತ ಇದ್ದೆವು. ತಂದೆ ನಮಗೆಲ್ಲರಿಗೂ ಊಟದ ವ್ಯವಸ್ಥೆ ಮಾಡಿಸಿದರು. ನಾನು ಸುಮ್ಮನೆ ನೋಡುತ್ತಿದ್ದೆ. ದಣಿವಾಗಿತ್ತು. ನನ್ನ ಸುತ್ತಲೂ ಕುಳಿತ ಅರಳಿದ ಮುಖಗಳನ್ನು ನೋಡುವುದೇ ನನಗೊಂದು

ಆನಂದ. ಅಷ್ಟು ಬೇಗ ದಣಿದದ್ದಕ್ಕೆ ಕಕ್ಕ ನನ್ನನ್ನು ಗೇಲಿಮಾಡಿದರು. ಆದರೆ ನಾನು ತಿರುಗಿ ಮನೆಗೆ ನಡೆದುಕೊಂಡೇ ಬರುತ್ತೇನೆಂದು ಬಿಂಕವಾಗಿ ಹೇಳಿದೆ. ಸಾಯಂಕಾಲದ ಹೊತ್ತಿಗೆ ನಾವು ಮರಳಿ ಮನೆ ಸೇರಿದೆವು.



ಜ್ಯೋತಿಷ್ಯ ಹೇಳುವವನು



ತಾವರೆ ಹೂ ಮಾರುವವನು

# ೧೪. ಪ್ರೇಮಬಂಧ

ಅಕ್ಕನ ಮದುವೆಯ ಸಿದ್ಧತೆ ಬಹಳ ದಿನದಿಂದಲೂ ನಡೆಯಿತು. ಶಾಲೆಗೆ ಹೋಗುವುದನ್ನು ನಿಲ್ಲಿಸಿದ್ದಳು. ಮದುವೆಗೆಂದು ಕಸೂತಿ ಕೆಲಸವನ್ನು ಒತ್ತರದಿಂದ ಮಾಡಿ ಮುಗಿಸಲು ಯತ್ನಿಸಿದ್ದಳು. ಆದರೂ ಮದುವೆಯ ಹೊತ್ತಿಗೆ ಕೆಲಸ ಮುಗಿದೀತೋ ಇಲ್ಲವೋ ಎಂಬ ಕಾತರ. ನಮ್ಮ ತಾಯಿ ಜೀವಿಸಿದ್ದರೆ, ಪಾಪ, ಅಕ್ಕನಿಗೆ ಹೀಗಾಗುತ್ತಿರಲಿಲ್ಲ. ಅಕ್ಕ ಒಬ್ಬಳೇ ಈಗ ಎಲ್ಲ ಕೆಲಸವನ್ನೂ ಮಾಡಿಕೊಳ್ಳಬೇಕಾಯಿತು.

ಮದುವೆಗೆ ಮುನ್ನಾ ದಿನ ವಧು ಹಾಕಿದ ಕಸೂತಿ, ಹೊಲಿಗೆ ಕೆಲಸ ವನ್ನು ವರನ ಆಪ್ತೇಷ್ಟರಿಗೆ, ಉಳಿದವರಿಗೆ ತೋರಿಸುವುದು ನಮ್ಮ ಆಚಾರ. ತನ್ನ ಕೆಲಸ ಚೆನ್ನಾಗಿದೆ ಎನಿಸಿಕೊಳ್ಳಲು ಎಲ್ಲ ಕನ್ಯೆಯರಿಗೂ ಆಸೆ. ಅಣ್ಣನ ಮದುವೆಗೆ ಮೊದಲು ಅತ್ತಿಗೆ ನಮ್ಮ ಮನೆಗೆ ಬರುತ್ತಿದ್ದಳು. ಅಕ್ಕ ನಿಂದ ಕಸೂತಿ ಕೆಲಸ ಹೇಳಿಸಿಕೊಳ್ಳುತ್ತಿದ್ದಳು. ಆದರೆ ಅತ್ತಿಗೆಗೆ ತನ್ನ ಕಸೂತಿಯನ್ನು ಪ್ರದರ್ಶಿಸುವ ಅವಕಾಶವೇ ದೊರೆಯಲಿಲ್ಲ. ಕಸೂತಿ ಕೆಲಸ ದಲ್ಲಿ ಅತ್ತಿಗೆ ತುಂಬ ಜಾಣೆ. ಬಣ್ಣಗಳ ಜೋಡಣೆಯಲ್ಲಿ ಅತ್ತಿಗೆಗೆ ಯಾರೂ ಸಾಟಿಯಿಲ್ಲ. ತಂದೆ ಕೂಡ ಅತ್ತಿಗೆಯನ್ನು ತುಂಬ ಹೊಗಳುತ್ತಿದ್ದರು.

ಅಕ್ಕ ಕೂಡ ಚನ್ನಾಗಿ ಕಸೂತಿ ಹಾಕುತ್ತಿದ್ದಳು. ಆದರೆ ತುಸು ನಿದಾನ. ಅಲ್ಲದೆ ಬಣ್ಣಗಳ ಹೊಂದಾಣಿಕೆಗಾಗಿ ಆಕೆ ಪೇಚಾಡುತ್ತಿದ್ದಳು. ಇದು ಅವಳ ತಪ್ಪಲ್ಲ. ಪೇಟೆಯಲ್ಲಿ ಮಾರುತ್ತಿದ್ದ ಕಸೂತಿ ಚಿತ್ರಗಳನ್ನು ಕೊಳ್ಳಲು ಬಿಡದೆ ತಂದೆ ತಾವೇ ಬೇರೆ ಚಿತ್ರ ಬರೆದು ಕೊಡುತ್ತಿದ್ದರು. ಈ ಹೊಸ ಚಿತ್ರಗಳಿಗೆ ಬಣ್ಣ ಹೊಂದಿಸುವ ಕೆಲಸ ಕಠಿಣ. ಪೇಟೆಯ ಚಿತ್ರಗಳಿಗೆ ಪರಂಪರೆಯ ಬಣ್ಣ

ಹಾಕುವುದು ಸುಲಭ. ಆದರೂ ಮದುವೆಗೆ ಮೊದಲು ಕೆಲ ತಿಂಗಳು ಅತ್ತಿಗೆ ಅಕ್ಕನಿಗೆ ಸಹಾಯ ಮಾಡಿದಳು.

ಆದರೆ ಇನ್ನೂ ಕೆಲಸ ಬಹಳಷ್ಟು ಇತ್ತು. ವರನ ಮನೆಯವರು ಪ್ರಸ್ತದ ಕೋಣೆಯಲ್ಲಿ ಹೊಸ ಹಾಸಿಗೆ, ಒಂದೆರಡು ಕುರ್ಚಿ ಮೇಜು, ಇಷ್ಟು ಕೊಟ್ಟರೆ ಸಾಕು. ಉಳಿದುದನ್ನೆಲ್ಲ ವಧುವಿಗೆ ಮನೆಯವರೇ ಒದಗಿಸಬೇಕೆಂಬುದು ನಮ್ಮೂರಿನ ಸಂಪ್ರದಾಯ.

ಈ ಪ್ರಸಂಗಕ್ಕೆ ಹಿತ್ತಾಳೆಯ ಮಂಚ ವರನಿಗೆ ಬೇಕಾಗಿತ್ತು. ಆದರೆ ತಂದೆ ವರನ ತಂದೆಯೊಡನೆ ಮಾತಾಡಿ ಕುರ್ಚಿ, ಮೇಜು, ಕಪಾಟುಗಳ ಜೊತೆಗೆ ಹಳೇ ಮಾದರಿಯ ಮಂಚಕ್ಕೆ ಅವರನ್ನು ಒಪ್ಪಿಸಿದರು. ತಾವು ಮೂರು ಚಿತ್ರ ಬರೆದು ಬಣ್ಣಕೊಟ್ಟು ಮಂಚದ ಮೇಲ್ಭಾಗಕ್ಕೆ ತೂಗುಹಾಕಿದರು.

ಅಕ್ಕನ ಕೆಲಸ ಹೆಚ್ಚಾಗಿಯೆ ಇತ್ತು. ಹಾಸಿಗೆಯ ಮೇಲಕ್ಕೆ ಒಂದು ದೊಡ್ಡ ಮಗ್ಗಲುಹಾಸಿಗೆ, ಎರಡು ದಿಂಬಿನ ಚೀಲಗಳು, ಅವುಗಳ ಮೇಲೆ ದೊಡ್ಡ ಸಮುದ್ರ-ಹಂಸದ ಚಿತ್ರ, ಚಿಕ್ಕ ಪರದೆಗಳು ಇತ್ಯಾದಿ. ಇಲ್ಲದೆ ಕಿಟಕಿಯ ಹಾಗೂ ಬಾಗಿಲಿನ ಪರದೆಗಳು, ಕುರ್ಚಿಯ ದಿಂಬಿನ ಮೇಲು ಬಟ್ಟೆಗಳು, ಕನ್ನಡಿಯ ಪರದೆಗಳು-ತನ್ನ ಬಟ್ಟೆಬರೆಗಳು, ಕಾಲಲ್ಲಿ ಹಾಕಿಕೊಳ್ಳಲು ಬೂಟ್ಸುಗಳು, ಇವೆಲ್ಲವನ್ನೂ ಒದಗಿಸಿಕೊಂಡು ರೇಷ್ಮೆಯ ಕರವಸ್ತ್ರಗಳು, ಮುಖಕ್ಕೆ ಚೂರ್ಣ ಹಾಕಿಕೊಳ್ಳುವ ಮೆತ್ತನೆ ಒತ್ತುಬಿಲ್ಲೆಗಳು, ವಿಜಿಟಿಂಗ್ ಕಾರ್ಡುಗಳನ್ನಿರಿಸಲು ಚಿಕ್ಕ ಚಿಕ್ಕ ಪಾಕೀಟು, ಪುಸ್ತಕಗಳಲ್ಲಿ ನಡುವೆ ಇಡುವ ರೇಷ್ಮೆ ದಾರ, ಮದುವೆಯಾದ ಮೇಲೆ ವರ ತನ್ನವರಿಗೆ ಕಾಣಿಕೆ ಕೊಡುವ ಚಿಕ್ಕ ಚಿಕ್ಕ ಹೂ ಬುಟ್ಟಿಗಳು. ಈ ಎಲ್ಲಕ್ಕೂ ಕಸೂತಿ ಹಾಕುವ ರೂಢಿ: ಉದಾಹರಣೆಗೆ-ಬಾತುಕೋಳಿ, ಕಮಲ, ಕೊಕ್ಕರೆ ಇತ್ಯಾದಿ. ಗಿಡಗಳ ಮೇಲೆ ಹಾರಾಡುವ ಜೊತೆ ಪಕ್ಷಿಗಳು, ಸನಾಯಿ ಬಾರಿಸುವ ಚಿತ್ರ, ಕುದುರೆ, ಹೇಸರಗತ್ತೆ, ನವಿಲು, ಗುಲಾಬಿ ಹೂ, ಹೂಗಳಿಂದ ಜೇನು ಸಂಗ್ರಹಿಸುವ ಜೇನು ನೊಣಗಳ ಜೊತೆ, ಒಂದೇ ದೇಟಿನಲ್ಲಿದ್ದ ಎರಡು ಕಮಲಗಳು, ಇದೇ ಪ್ರಕಾರ. ಈ ಎಲ್ಲವುಗಳನ್ನೂ ಅನೇಕ ಬಗೆಯಾಗಿ ಬೇರೆಬೇರೆ ಬಿಡಿಸಬಹುದು.

ತಂದೆಯವರಿಗೆ ಈ ಕೆಲಸ ಬಹಳ ಪ್ರೀತಿ. ಇದರಲ್ಲಿ ಕೆಲವು ಸಾಮಾನ್ಯ, ಕೆಲವು ತೊಡಕಿನದು. ಬಾಗಿಲಿಗೆ ಹಾಕುವ ಒಂದು ಪರದೆ, ಹೂ ಬುಟ್ಟಿ ಕೂಡಿದ ಮಾದರಿ ನೆನಪಿಗೆ ಬರುತ್ತವೆ. ತಂದೆಯವರಿಗೆ ಈ ಚಿತ್ರ ಬರೆದು ಕೊಡಲು ಎಷ್ಟು ದಿನವಾಯಿತು! ಮುಂದೆ ಆದರಂತೆ ಕಸೂತಿ ಹಾಕಲು ಅಕ್ಕನಿಗೆ ಅದಕ್ಕೂ ಹೆಚ್ಚು ಸಮಯ ಹಿಡಿಯಿತು. ಕಸೂತಿ ಹಾಕಲು ತಕ್ಕ ಕಾಲ ಸಮಶೀತೋಷ್ಣದ ವಸಂತಕಾಲ. ಅಂತೂ ಅಕ್ಕ ಮದುವೆಗೆ ಎರಡು ವರ್ಷ ಮೊದಲೇ ಕಸೂತಿ ಕೆಲಸ ಕೈಕೊಂಡಿದ್ದಳು.

ಮದುವೆಯ ಎಲ್ಲ ಸಿದ್ಧತೆಯೂ ಸರಾಗವಾಗಿ ಸಾಗಬೇಕೆಂದು ನಮ್ಮ ಭಾವನೆ. ಅಕ್ಕನಿಗಾಗಿ ಒಂದು ನಕ್ಷೆ ಪ್ರತಿಮಾಡಿಕೊಡುವ ಕೆಲಸ ನನಗೊಮ್ಮೆ ಬಂದಿತ್ತು. ನಾನು ಅದರಲ್ಲಿ ಒಂದು ಗೆರೆ ತಪ್ಪುಹಾಕಿದೆ. ಇದನ್ನು ತಂದೆಗೆ ತೋರಿಸಿ ಬೇರೊಂದು ಹೊಸ ಕಾಗದದಲ್ಲಿ ಮತ್ತೊಮ್ಮೆ ಬರೆಯುತ್ತೇನೆ ಎಂದೆ. ಅದಕ್ಕೆ ತಂದೆ ಒಪ್ಪಲಿಲ್ಲ. ಮಾಡಿದ್ದನ್ನು ಬದಲಾಯಿಸಲಾಗದು, ಅದರ ಬದಲು ನನ್ನ ನಕ್ಷೆಯಲ್ಲಿ ನಾನು ತಪ್ಪುಹಾಕಿದ ಗೆರೆ ಒಪ್ಪು ಕಾಣುವ ಹಾಗೆ-ಸುತ್ತಲೂ ಬೇರೆ ಗೆರೆಗಳನ್ನು ಹಾಕಿದರು. ಅಲ್ಲದೆ ಅಕ್ಕನಿಗೂ ಕಪ್ಪು ಬಣ್ಣದ ದಾರದಿಂದ ಕಸೂತಿ ಹಾಕಿದರೆ, ಆ ದಾರ ಬಿಚ್ಚ ಕೂಡದೆಂದೂ ಅದೇ ಒಪ್ಪಾಗಿ ಕಾಣುವಂತೆ ಬೇರೆ ಕಸೂತಿ ಹಾಕಬೇಕೆಂದೂ ಹೇಳಲಾಯಿತು. ತಪ್ಪು ಮಾಡಬಹುದೆಂಬ ಭಯದಿಂದ ತಂದೆಯವರು ಚಿತ್ರ ಬಿಡಿಸುವ ಮೊದಲು ತುಂಬ ವಿಚಾರ ಮಾಡುತ್ತಿದ್ದರು.

ಪ್ರೇಮ ಬಂಧದ ಗಂಟಿನ ಪ್ರಸಂಗ ನನ್ನ ನೆನಪಿನಲ್ಲಿದೆ. ಇದು ತೀರ ಸಾಮಾನ್ಯ ಕೆಲಸ. ಮದುಮಗಳೇ ಈ ಹೆಣಿಗೆ ಕೆಲಸ ಮಾಡುವ ಆಚಾರ ವಿದ್ದರೂ ಬಹಳ ಜನ ಇದನ್ನು ಕೈ ಬಿಟ್ಟಿದ್ದರು. ಆದರೆ ಅಕ್ಕ ಇದನ್ನು ಕಲಿತುಕೊಳ್ಳಬೇಕೆಂದು ತಂದೆಯವರು ಬಯಸಿದರು. ಅಂದಿನ ದಿನಗಳಲ್ಲಿ ವಧು ಹಾಕಿಕೊಳ್ಳುವ ನಿಲುವಂಗಿಗೆ ಗುಂಡಿಗಳನ್ನು ಉಪಯೋಗಿಸುತ್ತಿರಲಿಲ್ಲ. ಈಗಿರುವಂತೆ ಆಗ ಗುಂಡಿಗಳೂ ಇರಲಿಲ್ಲ. ದಪ್ಪನ್ನ ಎರಡು ರೇಷ್ಮೆ ಕಸೆಗಳನ್ನು ಹಚ್ಚುತ್ತಿದ್ದರು. ನಿಲುವಂಗಿಯನ್ನು ಹಾಕಿ ಎದೆಯ ಮೇಲೆ ಬರುವಂತೆ ಈ ಕಸೆಗಳನ್ನು ಗಂಟು ಹಾಕುತ್ತಿದ್ದರು. ವರ ಮದುವೆಯ ರಾತ್ರಿ ವಧುವಿನ ಈ ಕಸೆಯ ಗಂಟನ್ನು ತನ್ನಂತಿರುವ ಇನ್ನೊಂದು ಹೃದಯವನ್ನೇ

ತೆರೆಯುವೆನೆಂಬ ಭಾವನೆಯಿಂದ ಬಿಚ್ಚುವನು. ಈ ಗಂಟು ತೀರ ಸರಳ, ಸುಂದರ, ಸುಭಗವಾಗಿರುತ್ತದೆ. ವರನಿಗೆ ಅತಿ ಸುಲಭವಾಗಿ ಬಿಚ್ಚಲು ಬರುವಂತಿರುತ್ತದೆ. ವಧು ಸರಿಯಗಿ ಗಂಟು ಹಾಕಿರದೆ, ವರ ಗಾಬರಿ ಪಟ್ಟು ಈ ಗಂಟು ಸುಲಭವಾಗಿ ಬಿಡದೆ ಹೋದರೆ, ವಧೂವರರ ಮುಂದಿನ ಜೀವನ ಸುಗಮವಾಗಿ ಸಾಗಲಾರದೆಂದು ಸಂಕೇತ.

ಅಕ್ಕ ಈ ಗಂಟನ್ನು ಅತಿ ಸುಲಭವಾಗಿ ಹಾಕಲು ತುಂಬ ಸಾಧನೆ ಮಾಡಿದ್ದಳು. ಇದು ಮೂಢ ನಂಬಿಕೆಯೇ ಆದರೂ ಇದೊಂದು ಒಳ್ಳೇ ಭಾವನಾಮಯ ಪದ್ಧತಿ ಎಂದು ನನಗನಿಸುತ್ತದೆ.

ಅಕ್ಕನಿಗಾಗಿ ಕೊಟ್ಟ ವರದಕ್ಷಿಣೆಯಲ್ಲಿ ನಗದು ಹಣ ತೀರ ಕಡಿಮೆ. ಅವಳ ಮದುವೆಯ ವಸ್ತ್ರಗಳು, ತಂಪೆ ಚಿತ್ರಿಸಿದ ಕೆಲವು ಚಿತ್ರಗಳು. ಮದುವೆಯಾದ ಮೂರನೆಯದಿನ ವರನ ಮನೆಯ ಇಬ್ಬರು ಮುತ್ತೈದೆಯರನ್ನು ಕರೆದು ಚಿಕ್ಕ ಔತಣ ಮಾಡಿ ವಧುವಿನ ಬಟ್ಟೆಗಳನ್ನೂ ಉಳಿದ ವಸ್ತು ಒಡವೆಗಳನ್ನೂ ಎಣಿಸಿಕೊಡುವುದು ನಮ್ಮಲ್ಲಿ ಬಂದ ವಾಡಿಕೆ. ವಧುವಿನ ಬಟ್ಟೆ ಎಷ್ಟು ಹೆಚ್ಚೋ ವಧುವಿಗೆ ವರನ ಕಡೆಯುವರಿಂದ ಆದರವೂ ಅಷ್ಟು ಹೆಚ್ಚು. ಕೈತುಂಬ ವರದಕ್ಷಿಣೆ ಕೊಡದೆ ಮಗಳ ಮದುವೆ ಮಾಡುವುದು ನಿಜವಾಗಿ ತುಂಬ ಕಷ್ಟ ! ಸಾಮಾನ್ಯವಾಗಿ ನಮ್ಮ ಮನೆಯ ಜನರಿಗೆ ಬಟ್ಟೆ ಹೊಲೆಸಲು ವರ್ಷಕ್ಕೆ ಎರಡು ಸಲ ಸಿಂಪಿಗಳನ್ನು ಕರೆಸಿಕೊಳ್ಳುತ್ತಿದ್ದರು. ಆದರೆ ಅಕ್ಕನ ಮದುವೆಗಾಗಿ ಬಟ್ಟೆ ಹೊಲೆಯಲು ನಾಲ್ಕು ಜನ ಸಿಂಪಿಗಳು ತಿಂಗಳು ಗಟ್ಟಲೆ ದುಡಿದರು. ತಾಯಿ ತನ್ನ ಉಡುಗೊರೆಯಲ್ಲಿ ತಂದ, ಸಾಯುವವರೆಗೂ ಉಪಯೋಗಿಸದೆ ಹಾಗೆಯೇ ಉಳಿದ, ಕೆಲವು ರೇಷ್ಮೆಯ ಬಟ್ಟೆಗಳನ್ನು ತಂದೆ ಅಕ್ಕನಿಗೆ ಕೊಟ್ಟರು.

ಮದುವೆಗಿಂತ ಕೆಲವು ದಿನ ಮೊದಲೇ ಮದುವೆಯ ಕೆಲಸ ಮೊದಲಾಯಿತು. ಮದುವೆಯ ಮುನ್ನಾ ದಿನ ಅಕ್ಕನ ಹೊಲಿಗೆ ಕಸೂತಿ ಬಟ್ಟೆಗಳ ಪ್ರದರ್ಶನವಾಯಿತು. ವರನ ಮನೆ ನಮ್ಮ ಮನೆಗೆ ತೀರ ಹತ್ತಿರ. ಆದರೂ ಅವರು ಮನೆಗೆ ಅಕ್ಕನ ಕಸೂತಿ ಬಟ್ಟೆಗಳ ಮೆರವಣಿಗೆ ಹೊರಟಿತು. ಒಬ್ಬೊಬ್ಬರ ತಲೆಯ ಮೇಲೆ ಒಂದು ವಸ್ತು. ಹೆಜ್ಜೆಯ ಮೇಲೆ ಹೆಜ್ಜೆ ಹಾಕುತ್ತ ಮಂದಗತಿಯಲ್ಲಿ ಸಾಗಿತ್ತು. ಆದಷ್ಟು ಹೆಚ್ಚು ಜನ ಹೆಚ್ಚು ಹೊತ್ತು ನೋಡಲು

ಸಾಧ್ಯವಾಯಿತು. ಜೋಡಿ ಕೆಂಪು ದೀಪ ಹಿಡಿದು ಇಬ್ಬರು ಮುಂದೆ ಸಾಗಿದ್ದರು. ನಾಲ್ಕು ಜನ ವಾದ್ಯ ಬಜಂತ್ರಿ ಬಾರಿಸುತ್ತಿದ್ದರು. ಮನೆಯೊಳಗಿದ್ದವರೆಲ್ಲ ಬಂದು ಮೆರವಣಿಗೆ ನೋಡಲಿ ಎಂದು. ಮೆರವಣಿಗೆ ವರನ ಮನೆಗೆ ತಲುಪಲು ಅವರು ಉತ್ಸಾಹದಿಂದ ಮದ್ದು ಹಾರಿಸಿದರು. ಅದರ ಸಪ್ಪಳ ನಮ್ಮ ಮನೆಗೂ ಕೇಳುತ್ತಿತ್ತು ನಮ್ಮ ಮನೆಯಲ್ಲೇ ಕುಳಿತು ಅಜ್ಜಿ ತನ್ನ ಸಿ. ಐ. ಡಿ. ದಳವನ್ನು ಬಿಟ್ಟಿದ್ದಳು. ತನ್ನ ಮೊಮ್ಮಗಳ ಕಸೂತಿಯ ಕೆಲಸದ ಬಗ್ಗೆ ವರನ ಮನೆಯವರ ವಿಮರ್ಶೆಯನ್ನು ತಿಳಿದುಕೊಂಡು ಬಂದು ತನಗೆ ವರದಿ ಮಾಡಲು ಹೇಳಿಕಳಿಸಿದ್ದಳು.

ಮದುವೆಯ ದಿನ ಮದುಮಗಳಿಗಾಗಿ ವರನ ಮನೆಯವರು ಹೂವಿನಿಂದ ಸಿಂಗರಿಸಿದ ಮೇಣೆಯನ್ನು ಕಳುಹಿಸಿಕೊಡುವ ಪದ್ಧತಿ. ಮದುಮಗಳು ಸ್ನಾನಮಾಡಿ ವಧುವಿನ ಹೊಸ ಬಟ್ಟೆ ಧರಿಸಿಕೊಳ್ಳಬೇಕು. ಕೇಸರಿ ಅಥವಾ ಕೆಂಪು ಬಣ್ಣದ್ದಾಗಬೇಕು. ಆಪ್ತಳೊಬ್ಬಳನ್ನು ಅಕ್ಕನಿಗೆ ಜಡೆಹಾಕಲು ಕರೆಸಿತ್ತು. ಅವಳ ಕಪೋಲದ ಮೇಲ್ಭಾಗದಲ್ಲಿ (ಕಂಡೂಕಾಣದಂತಿದ್ದ) ಕೂದಲುಗಳನ್ನು ತೆಗೆಯಲಾಯಿತು. ಇದಕ್ಕೆ "ಕೈ-ಲೀನ್" ಎಂದು ಹೆಸರು. ಮುಖವನ್ನು ವಿಶಾಲವಾಗಿ ಕಾಣಿಸುವಂತೆ ಮಾಡುವ ಕಾರ್ಯ. ಮದುಮಗಳು ಅಂದು ಮೆತ್ತನೆ ಕೆಂಪು ಬೂಟ್ಸು ತೊಡಬೇಕು. ಮನೆಯಲ್ಲೂ ಅಂದು ಅವರು ಬರಿಗಾಲಿನಲ್ಲಿ ಓಡಾಡಕೂಡದು.

ಅವಳು ಹೊರಡುವ ಮೊದಲು ನಾಲ್ವರು ಯುವತಿಯರ ಜೊತೆಯಲ್ಲಿ ಅವಳಿಗೆ ಊಟ. ಅಕ್ಕ ಹೊಟ್ಟೆ ತುಂಬ ಊಟ ಮಾಡಲಿಲ್ಲ. ಅವಳ ಮನಸ್ಸು ಎಲ್ಲೋ ಸಿಕ್ಕಿಕೊಂಡಿತ್ತು. ಅಂಣ ಅಕ್ಕನನ್ನು ಎತ್ತಿ ಮೇಣೆಯಲ್ಲಿ ಕೂಡಿಸಿದ. ಬಳಗದ ನಾಲ್ವರು ತರುಣರು ಮೇಣೆಯ ಹಿಂದೆ ಹೊರಟರು.

ಮದುವೆ ಮುಗಿದ ಮೇಲೆ ನಮಗೆ ಮನೆಗೆಲಸದಲ್ಲಿ ನೆರವಾಗಲು ಬಂದ ಅತಿಥಿ-ಆಪ್ತೇಷ್ಟರಿಗೆ ಒಂದು ದೊಡ್ಡ ಔತಣ ಮಾಡಿದರು. ಅವರೆಲ್ಲರೂ ಸಂತೋಷದಿಂದ ಹೊಗಳುತ್ತ ಹೋದರು. 'ಆದಷ್ಟು ಬೇಗ ನಿಮಗೊಬ್ಬ ಮರಿಮಗ ಹುಟ್ಟಲಿ, ನಿಮ್ಮ ಆನಂದ ಮತ್ತಷ್ಟು ಹೆಚ್ಚಲಿ, ಅವಳ ಜೀವನ ಅತ್ಯಂತ ಸುಖದಿಂದ ಸಂತೋಷದಿಂದ ಸಾಗಲಿ' ಎಂದು ತಮ್ಮ ಶುಭ ಸಂದೇಶವನ್ನು ಬೀರಿ ಅಜ್ಜಿಗೆ ಹೇಳಿದರು.

ನನಗೋ ಅಂಣನ ಮದುವೆ ಹಿಂದೆ ಹಳ್ಳಿಯಲ್ಲಿ ಆದಾಗ ಎಷ್ಟು ಮನಸ್ಸಿಗೆ ಹಿಡಿಸಿತ್ತೋ ಅಷ್ಟು ಇದು ಈಗ ಹಿಡಿಸಲಿಲ್ಲ. ನನ್ನಲ್ಲೇ ದೊಡ್ಡ ಬದಲಾವಣೆಯಾಗಿದೆ ಅನಿಸಹತ್ತಿತು. ಅತಿಥಿಗಳೆಲ್ಲ ಹೋದಮೇಲೆ ದೊಡ್ಡ ದನಿ ತೆಗೆದು ಅತ್ತುಬಿಡಬೇಕೆಸಿತು. ಅಜ್ಜಿ ನನ್ನನ್ನು ರಮಿಸಲು ಯತ್ನಿಸಿದಳು. "ಹೆಣ್ಣುಮಕ್ಕಳು ದೊಡ್ಡವರಾದ ಮೇಲೆ ತವರು ಮನೆಯಲ್ಲೇ ನಿಲ್ಲುವುದು ಸಾಧ್ಯವೆ? ತಮ್ಮ ಮನೆಗೆ ಅವರು ಹೋಗಬೇಡವೆ? ಅಕ್ಕ ತನ್ನ ಹೊಸ ಮನೆಯಲ್ಲಿ ಸಂತೋಷದಿಂದ ಕಾಲ ಕಳೆದು ಅವಳೂ ಒಂದು ಮನೆಯ ಯಜಮಾನಿಯಾಗುತ್ತಿದಾಳೆ!" ಎಂದು ನನಗೆ ಸಮಾಧಾನ ಹೇಳಿದರು.

ಮರುದಿನ ಸಾಯಂಕಾಲ ಅಜ್ಜಿ "ಸುವಾಸನೆ ಎಂಣೆ"ಯ ಭರಣಿಯೊಂದನ್ನು ಕೊಟ್ಟು ವರನ ಮನೆಗೆ ನನ್ನನ್ನು ಕಳಿಸಿದಳು. ಮದುವೆಯಾದ ಮರುದಿನ ವಧುವಿನ ತಮ್ಮ ಈ ರೀತಿ ಒಯ್ದುಕೊಡುವುದು ವಾಡಿಕೆ. ಭರಣಿಯನ್ನು ಆಳು ತಂದರೂ ನಾನು ಜೊತೆಗೆ ಹೋಗಬೇಕು. ನಾನು ಅಕ್ಕನನ್ನು ಕಂಡೆ. ಆ ಅಪರಿಚಿತರ ಮಧ್ಯೆ ಅವಳೊಂದಿಗೆ ಮಾತನಾಡಲು ಆಗಲಿಲ್ಲ.

ನಾಲ್ಕನೆಯ ದಿನ ವಧೂ-ವರರು ನಮ್ಮ ಮನೆಗೇ ಬಂದರು. ಅಜ್ಜಿ ಅವರಿಗೊಂದು ಭಾರಿ ಔತಣ ಏರ್ಪಡಿಸಿದಳು. ಅಕ್ಕನ ಗೆಳತಿಯರನ್ನು ಊಟಕ್ಕೆ ಕರೆಯಲಾಗಿತ್ತು. ಆಗ ಅಕ್ಕನ ವಾಚಾಳಿತನವನ್ನು ಕಂಡು ಆಶ್ಚರ್ಯವಾಯಿತು. ಅವಳದೇ ಎಲ್ಲರಿಗಿಂತ ದೊಡ್ಡ ಧ್ವನಿ. ನನ್ನ ಭಾವನೇ ತುಂಬ ನಾಚಿಕೊಂಡಿದ್ದ. ಅಕ್ಕನ ಗೆಳತಿಯರು ತುಂಬಿಕೊಟ್ಟ ಮದ್ಯವನ್ನು ಕುಡಿಯಲಾಗಲಿಲ್ಲ. ಹೀಗೆ ಕೊಟ್ಟ ಮದ್ಯವನ್ನು ಬೇಡವೆನ್ನುವುದು ಸೌಜನ್ಯವಲ್ಲವೆಂಬ ಕಟ್ಟಿಗೆ ಕಟ್ಟುಬಿದ್ದು, ಊಟ ಮುಗಿದಾಗ ಭಾವ ಮೈಮರೆತಿದ್ದ. ಮರ್ಯಾದೆಗಳೆಲ್ಲ ಮುಗಿದವು. ಅಕ್ಕ ಇಷ್ಟು ಮಾತಿನಮಲ್ಲಿ ಆದುದಕ್ಕೆ ಆಶ್ಚರ್ಯದಲ್ಲಿ ಮುಳುಗಿದ್ದೆ ನಾನು.

# ೧೫. ದೇವಕನ್ನಿಕೆ

"ಲಂಡನಿನಲ್ಲಿ ಮೌನಿ ಪ್ರವಾಸಿ" ಎಂಬ ಪುಸ್ತಕದಲ್ಲಿ ನಾನು ಈ ಕತೆ ಹೇಳಿದೇನೆ. ದೇವರ ಬಟ್ಟೆ ನೇಯುವ ಹುಡುಗಿ ಒಬ್ಬಳು ಇದ್ದಳು. ಸ್ವರ್ಗದ ಸಾರ್ವಭೌಮನ ಮೊಮ್ಮಗಳು. ಬೆಳ್ಳಿಯ ಹೊಳೆಯು ಪೂರ್ವಕ್ಕೆ ಅವಳ ವಾಸ. ಕೆಲವು ವರ್ಷ ಕಳೆಯಿತು. ಸ್ವರ್ಗದ ಸಾರ್ವಭೌಮ ಬುದ್ಧಿವಂತಳಾದ ಅವಳು ಏಕಾಂಗಿ ಆಗಿರುವುದನ್ನು ಕಂಡು ಕನಿಕರಪಟ್ಟು ಅವಳನ್ನು "ಬೆಳ್ಳಿ ಹೊಳೆಯು" ಪಶ್ಚಿಮಕ್ಕೆ ಇದ್ದ "ದನಕಾಯುವ" ಹುಡುಗನಿಗೆ ಮದುವೆ ಮಾಡಿಕೊಟ್ಟ. ದುರ್ದೈವದಿಂದ ಅವಳ ಬುದ್ಧಿ ಕ್ಷೀಣವಾಯಿತು. ಕಡೆಗೆ ನೇಯುವದನ್ನೇ ಬಿಟ್ಟುಕೊಟ್ಟಳು. ಸಾರ್ವಭೌಮ ಸಿಟ್ಟಗೆದ್ದು ಅವಳನ್ನು ಮತ್ತೆ ಮೊದಲಿನ ಮನೆಗೇ ತಂದಿರಿಸಿ ಶಿಕ್ಷೆ ವಿಧಿಸಿದ. ವರ್ಷಕ್ಕೆ ಒಂದೇ ಸಲ ಏಳನೆ ತಿಂಗಳ ಏಳನೆ ರಾತ್ರಿ ಮಾತ್ರ ಅವಳು ತನ್ನ ಗಂಡನನ್ನು ಸೇರಬಹುದು. ಅದೇ ರಾತ್ರಿ ಭೂಲೋಕದಲ್ಲಿ ಹುಡುಗಿಯರೆಲ್ಲ ಅವಳನ್ನು ಕುರಿತು ಪ್ರಾರ್ಥಿಸುತ್ತಿದ್ದರು. ತಮಗೆ ಅಂದವಾಗಿ ಕಸೂತಿ ಹಾಕಲು ಬರುವಂತೆ ಅನುಗ್ರಹಿಸಲು ಅವಳನ್ನು ಬೇಡಿಕೊಳ್ಳುತ್ತಿದ್ದರು. ಒಳ್ಳೇ ಗಂಡ ದೊರೆಯಬೇಕೆಂದು ಬೇಡಿಕೊಳ್ಳುತ್ತಿದ್ದರು. ಆದ್ದರಿಂದ ಇದಕ್ಕೆ ಕನ್ನೆಯರ ಹಬ್ಬ ಎಂಬ ಹೆಸರು ಬಂತು.

ಈ ಹಬ್ಬದ ದಿನದ ಊಟವಾದ ಮೇಲೆ ಗಂಡು ಮಕ್ಕಳಿಗೆ ಇನ್ನೇನೂ ಕೆಲಸವಿಲ್ಲ.

ಆದರೆ ಒಂದುಸಲ ಮಾತ್ರ ನಮ್ಮ ಬಳಗದ ಹುಡುಗಿಯೊಬ್ಬಳು ಈ ಹಬ್ಬ ಮಾಡುವಾಗ ನಾವೂ ಅದರಲ್ಲಿ ಸೇರಿ ಕೊಂಡೆವು. ಅವಳದು ತುಂಬ ದಪ್ಪನ್ನ ದೇಹ. ಬೆರಳು ಕೂಡ ದಪ್ಪ ದಪ್ಪ. ಸರಿಯಾಗಿ ಸೂಜಿ ಹಿಡಿದು ಹೆಣೆಯಲು ಅವಳಿಗಾಗುತ್ತಿರಲಿಲ್ಲ. ಅವಳು ಹಾಕಿದ ಕಸೂತಿ ಅಂದವಾಗಿರಲಿಲ್ಲ. ನೋಡಲು

ತೀರ ಅಸಹ್ಯವಾಗಿತ್ತು. ಯಾರೂ ಅವಳ ಕೆಲಸವನ್ನು ಮೆಚ್ಚುತ್ತಿರಲಿಲ್ಲ. ಆದರೂ ಅವಳನ್ನು ಪ್ರೋತ್ಸಾಹಿಸುತ್ತಿದ್ದರು. ನಮ್ಮ ಕಕ್ಕಿಯೊಬ್ಬಳು–ಈ ಹಬ್ಬದ ದಿನ ದೇವಕನ್ಯೆಯನ್ನು ಬೇಡಿಕೊಂಡರೆ ನಿನಗೆ ಕಸೂತಿ ಹಾಕಲು ಬರುತ್ತದೆ ಎಂದು ಹೇಳಿದ್ದಳು. ಕಸೂತಿ–ಹೆಣಿಗೆ ಕೆಲಸಕ್ಕೆ ತನ್ನ ಶರೀರ ಅನುಕೂಲವಿಲ್ಲವೆಂದು ಗೊತ್ತಿದ್ದರೂ ಆಕೆಯ ಮಾತನ್ನು ನಂಬಿ, ಈ ಹಬ್ಬ ಬರುವ ದಿನದ ದಾರಿಯನ್ನೇ ಉತ್ಸುಕತೆಯಿಂದ ಕಾಯುತ್ತಿದ್ದಳು ಆ ಹುಡುಗಿ. ಅವಳಿಗಿಂತ ಹಿರಿಯರಾದ ಹುಡುಗಿಯರು ಶಾಸ್ತ್ರಕ್ಕಾಗಿ ಹಬ್ಬ ಆಚರಿಸಲಿಲ್ಲ. ಮನಸ್ಸಿಟ್ಟು ಭಾಗ ವಹಿಸಿದರು.

ಊಟ, ವಿಶ್ರಾಂತಿಗಳು ಮುಗಿದಾಗ ಇನ್ನೂ ಬೆಳಕಿತ್ತು. ನಾವು ಕೆಲವರು ಹುಡುಗರು ಹುಡುಗಿಯರನ್ನು ಹಿಂಬಾಲಿಸಿ ತೋಟಕ್ಕೆ ಹೋದೆವು. ಸಹಾಯ ಬೇಕಿದ್ದರೆ ಇರೋಣ ಎಂದು.

ಮೇಜನ್ನು ಸರಿಸಿಟ್ಟೆವು. ಅನಂತರ ಹುಡುಗಿಯರೆಲ್ಲರೂ ಕೂಡಿ ಧೂಪ ಹಾಕಿದರು. ಮೇಣಬತ್ತಿ ಹಚ್ಚಿದರು. ಹಣ್ಣು, ಸಿಹಿ ತಿಂಡಿ ಇತ್ಯಾದಿ ಎಡೆಯಿಟ್ಟರು. ಪಟಾಕಿ ಸುಡುವ ಕಾರ್ಯವೂ ಆಯಿತು. ಅನಂತರ ಆಕಾಶದ ಕಡೆಗೆ ನೋಡಿ ಮೂರು ಮೂರು ಸಲ ಸಾಷ್ಟಾಂಗವಾಗಿ ನಮಸ್ಕರಿಸಿದರು. ನಾವು ದೂರ ಸರಿದು ನಿಂತಿದ್ದೆವು. ಆ ದಪ್ಪನೆ ಹುಡುಗಿ ಭಕ್ತಿಭಾವ ತಾಳಿದ್ದಳು. ಶಾಸ್ತ್ರೋಕ್ತ ವಿಧಾನಗಳೆಲ್ಲ ಮುಗಿದಮೇಲೆ ಪ್ರತಿಯೊಬ್ಬಳೂ ತನ್ನ ಎಡಗೈಯಿಂದ ಒಂದೊಂದು ಸೂಜಿ ತೆಗೆದುಕೊಂಡು ಅದರಲ್ಲಿ ರೇಷ್ಮೆಯ ದಾರವನ್ನು ಪೋಣಿಸತೊಡಗಿದಳು. ಎಷ್ಟು ಬೇಗ ದಾರ ಪೋಣಿಸುವರೋ ಅಷ್ಟು ಕಸೂತಿ ಕೆಲಸದಲ್ಲಿ ಚುರುಕು ಎಂತ. ದಾರ ಪೋಣಿಸಲು ಸಾಕಷ್ಟು ಬೆಳಕು ಇನ್ನೂ ಇತ್ತು. ಅವರಲ್ಲಿ ಇಬ್ಬರು ಬೇಗ ಪೋಣಿಸಿದರು. ಆ ದಪ್ಪನೆ ತಂಗಿ ತನ್ನ ಕಣ್ಣುಗಳೆರಡನ್ನೂ ಚನ್ನಾಗಿ ಹಿಗ್ಗಿಸಿ ತೆರೆದು, ತುಟಿಯನ್ನು ಮತ್ತಿಷ್ಟು ಗಟ್ಟಿಯಾಗಿ ಕಚ್ಚಿಕೊಂಡು, ದಾರ ಪೋಣಿಸತೊಡಗಿದಳು. ಅವಳೆಣಿಸಿದಷ್ಟು ಬೇಗ ದಾರ ಪೋಣಿಸಲು ಆಗದೆ ಹೋದರೂ ಅವಳು ಕೊನೆಯವಳಾಗಲಿಲ್ಲ. ಕೊನೆಗೆ ಉಳಿದವಳು ಯಾರು ಗೊತ್ತೆ ? ನಿಜವಾಗಿ ಎಲ್ಲರಿಗಿಂತ ಹೆಚ್ಚು ಬುದ್ಧಿವಂತಳಾದ ಹುಡುಗಿ. ಈ ಹುಡುಗಿಯ ಮೇಲೆ ಕನಿಕರದಿಂದ ತಾನು ಬೇಕೆಂತಲೆ ಕೊನೆಯವಳಾದಳು.

ಇದರಲ್ಲಿ ಇನ್ನೊಂದು ಶಾಸ್ತ್ರೋಕ್ತ ವಿಧಾನ. ಬಿಳಿ ಪಿಂಗಾಣಿ ಪಾತ್ರೆಯಲ್ಲಿ ಗುಡ್ಡದ ಸೆಲೆಯ ನೀರನ್ನು ತುಂಬಿ ಪ್ರತಿಯೊಬ್ಬರೂ ಮೇಜಿನ ಮೇಲೆ ತನ್ನ ಹೆಸರಿನ ಚೀಟಿ ಬರೆದು ಇಡುವುದು. ಬೆಳಗ್ಗೆ ನೋಡಿದಾಗ ಅರ್ಧ ನೀರು ಇಂಗಿಹೋಗಿರುತ್ತಿತ್ತು. ಉಳಿದ ನೀರಿನಲ್ಲಿ ಪ್ರತಿಯೊಬ್ಬಳೂ ಒಂದೇ ಸಮನಾಗಿ ಕೊಯ್ದ ಹುಲ್ಲುಕಡ್ಡಿಯನ್ನು ಬಿಡಬೇಕು. ಈ ಗುಡ್ಡದ ನೀರಿಗೆ ಒಂದು ವಿಲಕ್ಷಣ ಗುಣ ಇದೆ. ಆ ಹುಲ್ಲುಕಡ್ಡಿ ಆ ನೀರಿನಲ್ಲಿ ತೇಲುತ್ತಿತ್ತು. ಗಡಿಬಿಡಿ ಮಾಡಿ ಬಟ್ಟಲ ನೀರನ್ನು ಕಲಕುವಂತೆ ಮಾಡಿದರೆ ಕಡ್ಡಿ ಮುಳುಗುತ್ತಿತ್ತು. ಈ ಹುಲ್ಲುಕಡ್ಡಿಯ ನೆರಳು ನೀರಿನ ತಳದಲ್ಲಿ ಎಷ್ಟು ಚಿಕ್ಕದಾಗಿ ಬಿದ್ದರೆ ಅಷ್ಟು ಹೆಚ್ಚಿನ ಕಸೂತಿ ಕೌಶಲ ಆ ಹುಡುಗಿಯದು. ಆ ದಪ್ಪನ್ನ ಹುಡುಗಿ ಮೊದಲೇ ಗಾಬರಿಗೊಂಡು, ನೀರನ್ನು ಅಲುಗಾಡಿಸಿ, ಕಡ್ಡಿಯನ್ನು ಒಗೆದಳು. ಅದು ನೀರಿನ ತಳ ಕೂಡಿತು. ಆಗ ಅವಳ ದುಃಖ ಹೇಳತೀರದು. ಯಾರು ಯಾವ ಸಮಾಧಾನವನ್ನು ಹೇಳಿದರೂ ಅವಳು ಸುಮ್ಮನಿರಲಿಲ್ಲ. ಈ ಕಾರ್ಯಕ್ರಮ ಅಷ್ಟೊಂದು ಮಹತ್ವದ್ದಲ್ಲ. ಕಸೂತಿ ಕೆಲಸ ಚೆನ್ನಾಗಿ ನಿನಗೆ ಬರಲು ಯಾವ ಆತಂಕವೂ ಇಲ್ಲ ಎಂದು ಅವಳನ್ನು ಸಮಾಧಾನಪಡಿಸಲು ತುಂಬ ಪ್ರಯತ್ನಿಸಿದರು. ಆದರೆ ಆ ಹುಡುಗಿ ಅಳುತ್ತ ಓಡಿಹೋದಳು.

ಕಸೂತಿ ಕಲೆಯ ಕೌಶಲಕ್ಕಾಗಿ ಆ "ದೇವಕನ್ಯೆ"ಯನ್ನು ಏಕೆ ಪ್ರಾರ್ಥಿಸಬೇಕೋ ? ಅವಳಿಗೋ, ಸದಾ ತನ್ನ "ದನಕಾಯುೞ"ವ ಇನಿಯನನ್ನು ಕೂಡಿಕೊಳ್ಳಬೇಕೆಂಬ ಕೊರಗು. ವಿರಹದ ನಲ್ಲ-ನಲ್ಲೆಯರು ಇವಳನ್ನು ಬೇಕಾದರೆ ಪೂಜಿಸಲಿ ತಮ್ಮ ಪ್ರೇಮ-ಮಿಲನಕ್ಕಾಗಿ. ಕಸೂತಿ ಕೆಲಸಕ್ಕೆ ಈಕೆ ಏನು ವರ ಕೊಟ್ಟಾಳು ? ಅರ್ಥವಿಲ್ಲದ ಈ ಆಚಾರವನ್ನು ಕಲ್ಪಿಸಿದ ಹಿರಿಯರ ಮಾತಿನಿಂದ ನಮ್ಮ ಹುಡುಗಿಯರೆಲ್ಲ ಮೋಸ ಹೋಗಿದಾರೆ.

---

# ೧೬. ಪಾತಿವ್ರತ್ಯ

ಎಲ್ಲೋ ಕೆಲವು ದಿನ ಬಿಟ್ಟರೆ 'ಲೈ ಮಾ-ಮಾ" ನಮ್ಮ ಮನೆಯಲ್ಲಿ ನಾಲ್ವತ್ತು ವರ್ಷ ಇದ್ದಳು. ನಮ್ಮ ತಂದೆಯ ದಾಯಿಯಾಗಿ ನಮ್ಮ ಮನೆಯ ಕೆಲಸಕ್ಕೆ ಬಂದಳು. ತಂದೆ ದೊಡ್ಡವರಾದ ಮೇಲೆ ಮನೆಗೆಲಸದವಳಾಗಿ ನಮ್ಮಲ್ಲಿಯೇ ಉಳಿದಳು. ನನಗೆ ಬುದ್ಧಿ ಬರುವ ವೇಳೆಗೆ ನಮ್ಮ ಮನೆಯಲ್ಲಿ ಅವಳಿಗೆ ಅಜ್ಜಿಗಿದ್ದಷ್ಟೇ ಸ್ಥಾನ-ಮಾನ. ನಾವು ಚಿಕ್ಕವರೆಲ್ಲ ಅವಳ ಮಾತನ್ನು ಮೀರುತ್ತಿರಲಿಲ್ಲ. ನಾನೊಂದು ಸಲ ಅವಳು ಹೇಳಿದ್ದನ್ನು ಕೇಳಲಿಲ್ಲ. ಅಜ್ಜಿ ಗದರಿಸಿದರು; ತಂದೆ ಬೆತ್ತ ತೆಗೆದುಕೊಂಡರು. ಆಗ ನನ್ನನ್ನು ಏಟು ತಿನ್ನ ದಂತೆ ಉಳಿಸಿದವಳು "ಲೈ ಮಾ-ಮಾ"ನೇ. ನನ್ನನ್ನು ಬಾಚಿಕೊಂಡು ತನ್ನ ಉಡಿಯಲ್ಲಿ ಹಾಕಿಕೊಂಡಳು. ಹಾಗೆ ನೋಡಿದರೆ ತಂದೆ ನನ್ನನ್ನು ಎಂದೂ ಹೊಡೆದಿಲ್ಲ.

"ಲೈ ಮಾ-ಮಾ" ನಮ್ಮ ಮನೆಗೆ ಬಂದಾಗ ಇಪ್ಪತ್ತುನಾಲ್ಕು ವರ್ಷ. ಮದುವೆಯಾಗಿತ್ತು. ಅವಳ ಗಂಡನೂ ನಮ್ಮ ಮನೆಯಲ್ಲೇ ಕೆಲಸಮಾಡು ತ್ತಿದ್ದ. ಇಬ್ಬರೂ ಕಲಿತವರಲ್ಲ. ಆದರೆ ಪ್ರಾಮಾಣಿಕರು, ನಿಷ್ಠರು, ಕಾನ್ ಫ್ಯುಷಿಯಸ್ ಅನುಯಾಯಿಗಳು. ಕೆಲವು ವರ್ಷಗಳ ಮೇಲೆ ಇಬ್ಬರೂ ತಮ್ಮ ಊರಿಗೆ ಹೋದರು. ಅಲ್ಲಿ ನಮ್ಮ ಹೊಲಗಳನ್ನೇ ಮಾಡಿಕೊಂಡು ನಮ್ಮ ರೈತರಾಗಿಯೇ ಇರಹತ್ತಿದರು. ಮುಂದೆ ಪ್ರತಿವರ್ಷ ಹೊಸ ಬತ್ತದ ಬೆಳೆಯನ್ನು ತೆಗೆದುಕೊಂಡು ಮೊದಲು ಬರುತ್ತಿದ್ದುದು ಲೈ ಮಾ-ಮಾ. ಹೊಲ-ಗದ್ದೆ ಗಳಲ್ಲಿ ಬೆಳೆಯುವ ಎಲ್ಲ ಕಲ್ಲಂಗಡಿ, ಮುಸುಕಿನ ಜೋಳ, ಕಾಯಿಪಲ್ಯಗಳನ್ನೂ ಲೈ ಮಾ-ಮಾ ತಂದುಕೊಡುತ್ತಲೇ ಇದ್ದಳು. ಬಂದಾಗಲೆಲ್ಲ ನಮಗೆ ಹಳ್ಳಿಯ ಜೀವನದ ಸಂಪರ್ಕವನ್ನು ಸದಾ ಸಜೀವಗೊಳಿಸುತ್ತಿದ್ದಳು.

ಅವಳ ಒಂದೇ ಮಗು ತೀರಿಕೊಂಡಿತು. ಮುಂದೆ ಗಂಡನೂ ತೀರಿಕೊಂಡ. ಆಗ ಅಜ್ಜಿ ಅವಳನ್ನು ನಮ್ಮ ಮನೆಯಲ್ಲೇ ಬಂದು ಇರಲು ಕರೆದಳು. ಅವಳಿಗೆ ಇದು ಸಂತೋಷವೇ ಆದರೂ ತನ್ನ ಗಂಡನೂ ತಾನೂ ಬಹು ಕಾಲ ಇದ್ದ ಊರನ್ನೂ ಹೊಲಗದ್ದೆಗಳನ್ನೂ ಬಿಟ್ಟು ಬರಲು ಅನುಮಾನಿಸಿದಳು. ಅವಳು ಕಾನ್‌ಫ್ಯುಷಿಯಸ್ ಪರಂಪರೆಯ ಒಳ್ಳೆ ಆದರ್ಶ ಪತ್ನಿ. ಕೆಲವು ದಿನ ನಮ್ಮಲ್ಲಿ ಇದ್ದು ತನಗೆ ಬೇಕೆನಿಸಿದಾಗ ಊರಿಗೆ ಹೋಗಬಹುದೆಂದು ಅಜ್ಜಿ ಸೂಚಿಸಿದರು, ಲೈ ಮಾ-ಮಾನ ಮನಸ್ಸಿನ ತೊಡಕನ್ನು ಬಿಡಿಸಲು. ಮರಳಿ ಹೋದಾಗ ನಮ್ಮ ರೈತರ ಮೇಲ್ವಿಚಾರಣೆಯ ಕೆಲಸವನ್ನೂ ನಮ್ಮ ಕಾಯಿಪಲ್ಯದ ತೋಟದ ಕೆಲಸವನ್ನೂ ಮಾಡಬಹುದೆಂದೂ ಸಲಹೆ ಕೊಟ್ಟರು. ಇದರಿಂದ ಲೈ ಮಾ-ಮಾಗೆ ಸಂತೋಷವಾಯಿತು. ಬಂದುಬಿಟ್ಟಳು. ಮನೆಯ ಬಳಕೆಗಾಗಿ ನಾವು ಧಾನ್ಯವನ್ನು ಕೊಂಡುಕೊಳ್ಳುವುದರಲ್ಲಿ ಲೈ ಮಾ-ಮಾನ ಸಹಾಯ ದೊರೆಯಿತು. ಅಜ್ಜಿ ಹೆಚ್ಚಾಗಿ ಹಳ್ಳಿಯಲ್ಲಿ ಬೆಳೆದವುಗಳನ್ನೇ ತಕ್ಕೊಳ್ಳುತ್ತಿದ್ದಳು. ಹಳ್ಳಿಯಲ್ಲಿ ಬೆಳೆದ ವಸ್ತುಗಳಲ್ಲಿರುವಷ್ಟು ಪೌಷ್ಟಿಕ ಆಹಾರ ಸತ್ತ್ವ ಪಟ್ಟಣದಲ್ಲಿ ಬೆಳೆದ ಕಾಳುಕಡಿ, ಹಣ್ಣು ಹಂಪಲು, ಕಾಯಿಪಲ್ಯಗಳಲ್ಲಿ ಇರುವದಿಲ್ಲವೆಂದು ಅಜ್ಜಿ ತಿಳಿದಿದ್ದಳು. ಈಗಲೂ ನನಗೆ ಅದು ಸರಿ ಅನಿಸುತ್ತಿದೆ. ಆಗಾಗ ಲೈ ಮಾ-ಮಾ ಹಳ್ಳಿಯಿಂದ ಆಗ ತಾನೆ ಕಿತ್ತು ತಂದು ಕಾಯಿಪಲ್ಯ, ಕಾಳುಕಡಿಗಳ ವಿಷಯ ಹೇಳುತ್ತಿದ್ದಳು. ಅವುಗಳಿಂದ ರುಚಿಯಾದ ಅಡಿಗೆ ಮಾಡಿಕೊಡುವೆನೆಂದು ಹೇಳುತ್ತಿದ್ದಳು. ಪ್ರತಿ ವಸ್ತುವಿನದೂ ಒಂದು ದಂತಕತೆ ಅವಳಿಗೆ ಗೊತ್ತಿರುತ್ತಿತ್ತು.

ಹೊಸ ಅಕ್ಕಿ ನಮಗೆಲ್ಲರಿಗೂ ತುಂಬ ರುಚಿ. ಸುಗ್ಗಿಯಾದ ಕೂಡಲೇ ರೈತರು ನಮಗೆ ಕುಟ್ಟಿದ ಹೊಸ ಅಕ್ಕಿಯನ್ನು ತಂದುಕೊಡುತ್ತಿದ್ದರು. ಅನ್ನ ಮಾಡಿದರೆ ಅದು ಕೆಂಪಗೆ ಆಗುತ್ತಿತ್ತು. ಸುವಾಸನೆ ಇರುತ್ತಿತ್ತು. ಇಂದು ಊಟಕ್ಕೆ ಹಳ್ಳಿಯಿಂದ ಬಂದ ಅಕ್ಕಿಯ ಅನ್ನ ಎಂದರೆ ನಾವು ಮನೆತುಂಬ ಕುಣಿಯುತ್ತಿದ್ದೆವು. ಈ ಅಕ್ಕಿ ಯಾವಾಗಲೂ ಸಿಗುತ್ತಿರಲಿಲ್ಲ. ಅಂತೇ ನಮಗದು ಹೆಚ್ಚು ರುಚಿ ಇದ್ದಿರಬಹುದು. ಸುಗ್ಗಿಯ ದಿನಗಳಲ್ಲಿ ಈ ಅಕ್ಕಿ ದೊರೆಯುತ್ತಿತ್ತು. ಮತ್ತೆ ಮುಂದಿನ ಸುಗ್ಗಿಯ ವರೆಗೂ ಕಾಯಬೇಕು. ನಮ್ಮ

ಹಿರಿಯರೇನೋ ಸದಾ ಆ ಅಕ್ಕಿಯನ್ನೇ ತಂದುಕೊಡಲು ಹೇಳುತ್ತಿದ್ದರು. ರೈತರು ತಂದುಕೊಡುತ್ತಿರಲಿಲ್ಲ. ಬಿಳಿಯ ಅಕ್ಕಿಯನ್ನೆ ಕೊಡುತ್ತಿದ್ದರು. ರೈತರಿಗೆ "ಆಹಾರ ಸತ್ತ್ವ" ಎಂಬ ಮಾತು ತಿಳಿಯದು. ಆದರೂ ಕುಟ್ಟಿದ ಅಕ್ಕಿಯೇ ಮೇಲು ಎಂದು ಹೇಳುತ್ತಿದ್ದರು. ಆರೋಗ್ಯಕರವಾದ ಸೊಪ್ಪಿನ ಪಲ್ಯ ಒಂದಿತ್ತು.

"ಬಂಗಾರ ಕಡ್ಡಿ ಪಲ್ಯ" ನಮ್ಮಲ್ಲಿ ಬೆಳೆಯುತ್ತಿರಲಿಲ್ಲ. ಒಣಗಿದ ಹೂವನ್ನೂ ಸೊಪ್ಪನ್ನೂ ಕೊಳ್ಳುತ್ತಿದ್ದೆವು. ಮಾಂಸದ ಚೂರು ಹಾಕಿ ಕುದಿಸಿದರೆ–ಇದು ಬಹಳ ರುಚಿಯಾಗಿರುತ್ತಿತ್ತು ನನಗೆ ಇದು ತುಂಬಾ ಇಷ್ಟ. ಬಾಣಂತಿಯರಿಗೆ ಹೆಚ್ಚಾಗಿ ಇದನ್ನು ಕೊಡುತ್ತಾರೆ.

ಬೇಸಿಗೆಯ ದಿನಗಳಲ್ಲಿ ಊಟವಾದ ಸ್ವಲ್ಪ ಹೊತ್ತಿಗೆ ಲೈ ಮಾ–ಮಾ ನಮಗೆ ಈ ಪಾಯಸವನ್ನು ಮಾಡಿಕೊಡುತ್ತಿದ್ದಳು. ಕೆಲಸದವರು ಈ ಹೂವನ್ನು ತೊಳೆದು ಸ್ವಚ್ಛಮಾಡಿದರೆ ಲೈ ಮಾ–ಮಾ ಎಳೆಯ ಹೂಗಳನ್ನೇ ಆರಿಸಿ ತೆಗೆದು ಕುದಿಸಿ, ಮತ್ತೊಂದು ಪಾತ್ರೆಯಲ್ಲಿ ಸಕ್ಕರೆ ಹಾಕಿ ಮತ್ತೆ ಕುದಿಸುತ್ತಿದ್ದಳು. ತಣ್ಣಗೆ ಆದಮೇಲೆ ಕುಡಿದರೆ ಅಮೃತಕ್ಕೆ ಸಮ ಅನಿಸುತ್ತಿತ್ತು.

ಲೈ ಮಾ–ಮಾ ಆದರ್ಶಪತ್ನಿ ಎಂದು ಹೇಳಿದೇನೆ. ಗಂಡ ತೀರಿಕೊಂಡ ಮೇಲೆ ಆಕೆ ಗಂಡಸರೊಡನೆ ಮಾತನಾಡುವುದನ್ನೇ ಬಿಟ್ಟುಬಿಟ್ಟಳೆಂದು ಹಿರಿಯರು ಹೇಳುತ್ತಿದ್ದರು. ನಮ್ಮ ಮನೆಯ ಗಂಡಸರೂ ಕೂಡ ಏನಾದರೂ ಹೇಳುವುದಿದ್ದರೆ ಬೇರೆ ಕೆಲಸಗಾತಿಯರ ಮೂಲಕ ಹೇಳಿಕಳಿಸುತ್ತಿದ್ದರು. ಅವಳ ಪಾತಿವ್ರತ್ಯದ ಪ್ರಸಂಗ ಒಂದು ನಾನು ಹುಟ್ಟುವ ಮೊದಲೇ ಜರುಗಿತ್ತು. ಆ ಕತೆಯನ್ನು ಹಲವು ಬಾರಿ ಕೇಳಿದ್ದೆ. ಆದದ್ದು ಇಷ್ಟು: ಲೈ ಮಾ–ಮಾ ವಿಧವೆಯಾಗಿ ಹತ್ತು ವರ್ಷ ಆಗಿದ್ದವು. ಅಜ್ಜ ಅಜ್ಜಿಯರಿಗಾಗಿ ಸಾಮಾನು ತರಲು ಅವಳು ಪೇಟೆಗೆ ಹೋಗಬೇಕಾಗುತ್ತಿತ್ತು. ಆಗಲೂ ಆಕೆ ಯಾರೊಡನೆಯೂ ಮಾತನಾಡಿರಲಿಲ್ಲ. ಬೇಕಾದ ಸಾಮಾನುಗಳನ್ನು ಕಾಗದದ ಮೇಲೆ ಬರೆಸಿಕೊಂಡು ಹೋಗಿ ಅಂಗಡಿಯವನ ಕೈಗೆ ಕೊಡುತ್ತಿದ್ದಳು. ಇದೇ ರೀತಿ ಸಾಗಿತ್ತು. ಒಂದು ದಿನ ಅಂಗಡಿಯವನು ಸಾಮಾನು ಕೊಡುವಾಗ ಲೈ ಮಾ–ಮಾಳ ಕೈಗೆ ಅವನ ಕೈ ಅಕಸ್ಮಾತ್ ತಾಕಿತು. ಲೈ ಮಾ–ಮಾ ಆ

ಸಾಮಾನುಗಳನ್ನೆಲ್ಲ ಅಲ್ಲಿಯೇ ಬಿಸುಟು ಅಳುತ್ತ ಮನೆಗೆ ಓಡಿಬಂದಳು. ಅಜ್ಜಿಗೆ ಸಂಗತಿ ಗೊತ್ತಾಯಿತು. ತಂದೆಯವರು ಆ ಅಂಗಡಿಯವನಿಂದ ಕ್ಷಮಾಪಣೆ ಬರೆಸಿ ತರಿಸಿದರು. ಅದರಿಂದ ಲೈ ಮಾ-ಮಾಗೆ ಸಮಾಧಾನ ವಾಗಲಿಲ್ಲ. ತನ್ನ ಗಂಡನಿಗೆ ತಾನೇನೋ ದ್ರೋಹ ಬಗೆದೆ ಅನಿಸಿತು. ಅಂದಿನಿಂದ ಅವಳು ನಮ್ಮ ಮನೆ ತೋಟ ಬಿಟ್ಟು ಹೊರಗೆಲ್ಲೂ ಹೋಗಲಿಲ್ಲ.

ಲೈ ಮಾ-ಮಾ ಮುದುಕಿಯಾದ ಮೇಲೆ ಮನೆಯ ಜನರಂತೆ ಅವಳನ್ನು ತುಂಬ ಚನ್ನಾಗಿ ನೋಡಿಕೊಳ್ಳಲಾಗಿತ್ತು. ಆದರೆ ಅವಳು ಯಾವ ಕೆಲಸ ವನ್ನೂ ಮಾಡದೆ ಇರುತ್ತಿರಲಿಲ್ಲ. ಬೇರೆ ಯಾವ ಮನೆಯಲ್ಲಿದ್ದರೂ ತಾನು ಇಷ್ಟುದಿನ ಬದುಕಿರಲು ಸಾಧ್ಯವೇ ಇರಲಿಲ್ಲವೆಂದು ಆಗಾಗ ಅನ್ನುತ್ತಿದ್ದಳು. ಕೊನೆಗೆ ನನಗೆ ಯಾರೂ ಇಲ್ಲ, ನಾನು ಸತ್ತಮೇಲೆ ನನ್ನನ್ನು ನಿಮ್ಮ ವಂಶದ ಸಮಾಧಿಗಳ ಬಳಿ ಸಮಾಧಿಮಾಡಿ ಎಂದು ಅಜ್ಜಿಯನ್ನು ಕೇಳಿಕೊಂಡಳು. ಅಜ್ಜಿ ಅವಳಿಗೆ ಈ ಆಶ್ವಾಸನ ಕೊಟ್ಟ ಮೇಲೆಯೆ ಲೈ ಮಾ-ಮಾ ಸಂತೋಷ ದಿಂದ ಜೀವ ಬಿಟ್ಟಳು. ಆಗ ಅವಳಿಗೆ ಎಪ್ಪತ್ತೊಂಬತ್ತು ವರ್ಷ. ನನಗೆ ಏಳು ವರ್ಷ. ಅವಳ ಅಂತ್ಯಕ್ರಿಯೆ ಯಥಾವಿಧಿಯಾಗಿ ಜರುಗಿತು. ನಾವೆಲ್ಲರೂ ತುಂಬ ದುಃಖಿಸಿದೆವು. ನಮ್ಮ ವಂಶಜರ ಸಮಾಧಿಯ ಹತ್ತಿರವೇ ಒಂದು ಸ್ಥಳ ವನ್ನು ಕೊಂಡು ಅಲ್ಲಿ ಅವಳನ್ನು ಹೂಳಿದೆವು. ಪ್ರತಿ ವರ್ಷ ನಮ್ಮ ವಂಶ ಜರ ಸಮಾಧಿಗಳಿಗೆ ಯಾತ್ರೆ ಹೋದಾಗ ಅದನ್ನೂ ನೋಡಿ ಬರುತ್ತಿದ್ದೆವು. ಆಮೇಲೆಯೂ ಲೈ ಮಾ ಮಾಳನ್ನು ಸದಾ ನೆನೆದುಕೊಳ್ಳುತ್ತಿದ್ದೆವು.

ಈಗಿನ ನವನಾಗರಿಕತೆಯಲ್ಲಿ ಲೈಮಾಮಾ ವಿಧವೆಯಾದ ಮೇಲೆ ನಡೆದು ಕೊಂಡ ರೀತಿ ಶುದ್ಧ ಮೂರ್ಖತನ ಎಂದು ಕಾಣಬಹುದು. ಅವಳೂ ಬಹುಶಃ ಎಲ್ಲರಿಗಿಂತ ಹೆಚ್ಚು ಕಠೋರವಾಗಿ ಇದ್ದಿರಬಹುದು. ಕಾನ್‌ಫ್ಯುಷಿ ಯಸ್ ಹೆಣ್ಣು-ಗಂಡಿನ ಸಂಬಂಧ ಹೇಗಿರಬೇಕೆಂದು ಹಾಕಿದ ನೇಮಗಳನ್ನು ಚಾಚೂ ತಪ್ಪದೆ ಅನುಸರಿಸುತ್ತಿದ್ದಳು. ಅವಳ ಕಾಲದಲ್ಲಿ ಈ ಪ್ರಸಂಗವನ್ನು ನಮ್ಮವರು ಎಲ್ಲರೂ ಮೆಚ್ಚಿದ್ದರು. ಉದ್ದೇಶವೇನೇ ಇರಲಿ, ಅಂಗಡಿಕಾರ ತಪ್ಪು ನಡೆದ ಎಂದೇ ಎಲ್ಲರೂ ಹೇಳಿದರು. ಗಂಡ ಸತ್ತವರು ಸಾಯುವವ ರೆಗೂ ವಿಧವೆಯರಾಗಿಯೇ ಇರಬೇಕೆಂದು ವಿದ್ವಾಂಸರ ಮತ. ಅಂಥ ವಿಧವೆ ಯರನ್ನು ಅರಸರೂ ಗೌರವಿಸಿದ್ದಾರೆ.

ವಿಧವೆ ಮತ್ತೆ ಮದುವೆ ಮಾಡಿಕೊಂಡಲ್ಲಿ ಸಮಾಜದಲ್ಲಿ ಅವಳಿಗೆ ಗೌರವವಿರಲಿಲ್ಲ. ಆದ್ದರಿಂದ ಲೈ ಮಾ ಮಾ ಆದರ್ಶ ಪತ್ನಿಯೆಂದು ಹೊಗಳಿಸಿಕೊಂಡಳು. ನಾನು ಅವಳ ನಿಷ್ಠೆ, ಏಕಾಗ್ರತೆಗಳನ್ನು ಈಗಲೂ ಮೆಚ್ಚಿಕೊಳ್ಳುತ್ತೇನೆ. ಪ್ರೀತಿ ಇಲ್ಲದಿದ್ದರೆ ಬರೀ ಪಾತಿವ್ರತ್ಯ ಒಣ ಆಚಾರವಾಗುತ್ತದೆ. ಅದು ನನಗೆ ಹಿಡಿಸದು.

ಇದನ್ನೆಲ್ಲಾ ಯೋಚಿಸಿದರೆ ಚೀನಾದೇಶದಲ್ಲಿ ಪ್ರೇಮವನ್ನು ಯಾರಿಗೂ ಅರ್ಥ ಆಗದ ಹಾಗೆ ಮಾಡಿದಾರೆ ಎನಿಸುತ್ತದೆ. ಚೀನಾ ದೇಶದ ಸಂಸ್ಕೃತಿ ಹೇಗೆ ಅಂದ ಚಂದದ ಅಲಂಕಾರದಿಂದ ತುಂಬಿರುತ್ತದೆಯೋ ಪ್ರೇಮತತ್ವವೂ ಜಾಣತನದ ಆಚಾರಗಳಿಂದ ಹೆಣೆಯಲ್ಪಟ್ಟಿದೆ. ಮೇಲಿನ ಈ ನಯವಾದ ಪೊರೆಗಳನ್ನು ಕತ್ತರಿಸಿ ಪ್ರೇಮವನ್ನು ತಿಳಿದುಕೊಳ್ಳಲು ಯಾರಿಗೂ ಧೈರ್ಯವಾಗಿಲ್ಲ. ಮಡಿಕೆ ಹಾಳಾಗಿ ಹೋದೀತೆಂಬ ಭಯ.

ಲೈ ಮಾ-ಮಾ ತನ್ನ ಗಂಡನನ್ನು ಪ್ರೀತಿಸಲಿಲ್ಲ ಎಂದು ನಾನು ಹೇಳಲು ಹೊರಟಿಲ್ಲ. ಸಾಯುವವರೆಗೂ ತನ್ನ ಗಂಡನನ್ನು ಪ್ರೀತಿಸಿದಳು.

ಆದರೆ ಅವನು ತನ್ನ ಗಂಡ ಆದ್ದರಿಂದ ಸಾಯುವವರೆಗೂ ಅವನನ್ನು ಪ್ರೀತಿಸಬೇಕೆಂದು ನಿರ್ಧರಿಸಿದ್ದಳೆ ? ಲೋಕಾಪವಾದದ ಭಯವಿಲ್ಲದೆ ಆಕೆ ತನ್ನ ಹೃದಯವನ್ನು ಬಿಚ್ಚಿ ನೋಡಿಕೊಳ್ಳುವುದಕ್ಕೆ ಅವಕಾಶ ದೊರೆತಿದ್ದರೆ ಅವಳ ಬಾಳು ಇನ್ನೂ ಸುಖವಾಗಿ ಬೇರೆ ರೀತಿ ಇರುತ್ತಿತ್ತೋ ಏನೋ ! ಅವಳು ಬೇರೆ ಲೋಕದಲ್ಲಿದ್ದರೆ ನನ್ನ ಈ ಅಭಿಪ್ರಾಯದಿಂದ ಅವಳಿಗೆ ನೋವಾದರೆ ಕ್ಷಮೆ ಬೇಡುತ್ತೇನೆ. ಅವಳು ಬೆಳೆದು ಬಂದ ಆಚಾರ ವ್ಯವಹಾರದಲ್ಲೇ ನಾನೂ ಬೆಳೆದು ಬಂದಿರುವೆನಾದರೂ ನನ್ನ ಈ ಜೀವನದಲ್ಲಿ ಅನೇಕ ಬದಲಾವಣೆ ಆಗಿರದಿದ್ದರೆ ನಾನು ಈ ರೀತಿ ಅಭಿಪ್ರಾಯ ಪಡುತ್ತಿರಲಿಲ್ಲ. ತಾನು ಹಾಕಿದ ನಿಯಮಗಳನ್ನು ಇಷ್ಟು ಅಸ್ವಾಭಾವಿಕವಾಗಿ ಪಾಲಿಸುತ್ತಾರೆಂಬುದು ಕಾನ್ಫೂಷಿಯಸ್‌ಗೆ ಹೊಳೆಯಲಿಲ್ಲವೆನಿಸದೆ ಇಲ್ಲ. ಈ ತಪ್ಪು ಕಾನ್ಫೂಷಿಯಸ್ ಶಿಷ್ಯರದು. ಹೆಂಡತಿ ಸತ್ತರೆ ಗಂಡ ಮತ್ತೆ ಮದುವೆಯಾಗಬಾರದು, ಅದು ಅನ್ಯಾಯ ಎಂದು ಅವರು ಯಾರೂ ಹೇಳಲಿಲ್ಲ. ಸ್ವಾರ್ಥಿಗಳಾಗಿ ನಮ್ಮ ಹಿರಿಯರು ಎಂಥ ಭದ್ರವಾದ ಆಚಾರಗಳನ್ನು ಮಾಡಿದಾರೋ ಆಶ್ಚರ್ಯವಾಗುತ್ತದೆ !

ಆದರೆ ಈ ಪರಂಪರೆಯಲ್ಲಿಯೂ ಒಂದು ನೈತಿಕ ಔಚಿತ್ಯ ಕಂಡು ಬರುತ್ತದೆ. ಗಂಡ ಸತ್ತಮೇಲೆಯೂ ಸತಿ ಇಂಥ ಕಠಿನ ನಿಷ್ಠೆ ತೋರಬಹುದಾದರೆ ಗಂಡ ಬದುಕಿದ್ದಾಗ ಅಶ್ರದ್ಧೆ ತಾಳುವುದು ಅಶಕ್ಯವಾಗುವಂತೆ ಮಹಿಳೆಯರ ಮನಸ್ಸನ್ನು ಹದಗೊಳಿಸುವ ಹವಣು ಕಂಡುಬರುತ್ತದೆ. ಯಾವ ಆಕರ್ಷಣೆಗೂ ವಶರಾಗದ ಸ್ತ್ರೀಯರಿಗೆ ಬಹಳ ಗೌರವ. ದಾರ್ಢ್ಯವಿಲ್ಲದ ಸ್ತ್ರೀಯರಿಗೆ ಸಮಾಜದಲ್ಲಿ ಸ್ಥಾನಮಾನಗಳಿಲ್ಲ. ಇಂಥವರು ಆತ್ಮಹತ್ಯೆ ಮಾಡಿಕೊಂಡದ್ದೂ ಉಂಟು.

ಅನ್ಯಾಯವಾಗಿ ಹಣ ಗಳಿಸಿದ ಗಂಡಸರು ಸೂಳೆಯರನ್ನಿಟ್ಟುಕೊಳ್ಳುತ್ತಾರೆ. ದುರ್ಬಲ ಶೀಲದ ಹೆಂಗಸರು ಸೂಳೆಗಾರಿಕೆ ಮಾಡುತ್ತಾರೆ. ಇವರಿಗೆ ಸಮಾಜದಲ್ಲಿ ಸ್ಥಾನಮಾನ ಇಲ್ಲ. ಕಾನ್ಫುಷಿಯಸ್ ಪರಂಪರೆಯಲ್ಲಿ ಬೆಳೆದ ಸ್ತ್ರೀಯಾಗಲಿ ಹುಡುಗಿಯಾಗಲಿ ಸಾವು ಬಂದರೂ ಸೂಳೆಯಾಗಲಿಚ್ಛಿಸುವುದಿಲ್ಲ. ಹಣಕ್ಕೆ, ಒತ್ತಾಯಕ್ಕೆ, ಒಳಗಾಗದೆ ಪ್ರಾಣ ನೀಗಿದ ಅನೇಕ ಮಹಿಳೆಯರು ಇದಾರೆ. ಈ ವಿಷಯದಲ್ಲಿ ಲೈ ಮಾ-ಮಾ ಪ್ರಶಂಸನೀಯಳು. ನಮ್ಮಲ್ಲಿರದೆ ಎಲ್ಲಿಯೋ ಇದ್ದಿದ್ದರೂ ಆಕೆ ತನ್ನ ಬಡತನವನ್ನು ಸಹಿಸಿಕೊಂಡು ಅತ್ಯಂತ ಕಷ್ಟದ ಜೀವನ ನಡೆಸಿದರೂ ಪತಿ ಭಕ್ತಿಯಿಂದ ನಡೆಯುತ್ತಿದ್ದಳೆಂದು ಧಾರಾಳವಾಗಿ ಹೇಳಬಹುದು. ಈ ರೀತಿ ಗಟ್ಟಿ ಮನಸ್ಸು ಮಾಡಿಕೊಂಡು ಇರಬಲ್ಲ ಮಹಿಳೆಯರು ಎಷ್ಟು ಜನ !

ಈ ಚರ್ಚೆ ಮುಗಿಸಿ, ನಮ್ಮ ಮನೆತನದ ಪ್ರತಿಯೊಬ್ಬರ ಮನಸ್ಸಿನಲ್ಲೂ ಮರೆಯಲಾಗದಂತೆ ನಿಂತ ಲೈ ಮಾ-ಮಾಗೆ ನನ್ನ ಅಭಿವಂದನೆ. ನಮ್ಮ ಹಿರಿಯರು ಸದಾ ಅವಳ ವಿವೇಕಪೂರ್ಣ ವರ್ತನವನ್ನು ನೆನೆಸುತ್ತಾರೆ. ಲೈ ಮಾ-ಮಾ ಮನೆಯಲ್ಲಿ, ತೋಟದಲ್ಲಿ ಎಲ್ಲವೂ ಸರಿಯಾಗಿದೆಯೋ ಇಲ್ಲವೋ ಗೊತ್ತುಮಾಡಿಕೊಳ್ಳದೆ ಎಂದೂ ಮಲಗುತ್ತಿರಲಿಲ್ಲ. ಬಹಳ ಸಹನೆಯಿಂದ ರುಚಿ ರುಚಿಯಾದ ಅಡಿಗೆ ಮಾಡುತ್ತಿದ್ದಳು. ಅಕ್ಕನೂ ಇತರ ಹುಡುಗಿಯರೂ ಆಕೆಯ ಬಳಿ ಎಷ್ಟೋ ಬಗೆಯ ಅಡಿಗೆ ಕಲಿತರು. ರುಚಿ ರುಚಿಯಾದ ತಿಂಡಿ ತಿಂದಾಗೆಲ್ಲ ಲೈ ಮಾ-ಮಾಳ ನೆನೆಪು ಆಗುತ್ತದೆ ನಮಗೆ.

ನಮ್ಮ ಪಾದರಕ್ಷೆಯ ಜೊತೆಗೂ ಲೈ ಮಾ-ಮಾಳನ್ನು ಸ್ಮರಿಸುತ್ತೇವೆ. ಚೀನಾದಲ್ಲಿ ಸದಾ ತೊಗಲಿನ ಪಾದರಕ್ಷೆಗಳನ್ನು ಹಾಕಿಕೊಳ್ಳುತ್ತಿರಲಿಲ್ಲ. ಮಳೆ

ಬರುವಾಗ ಮಾತ್ರ. ದಿನಬಳಕೆಯ ಪಾದರಕ್ಷೆಗಳು ಬಟ್ಟೆಯಿಂದ, ರೇಷಿಮೆ ಯಿಂದ ತಯಾರಾದುವು. ಹಿಮ್ಮಡಿಯೂ ಬಟ್ಟೆಯದೇ. ಇದನ್ನು ಹೊಲೆಯಲು ಬಹಳ ಕೌಶಲ ಬೇಕು. ಇಲ್ಲದೆ ಹೋದರೆ ಬಾಳಿಕೆ ಬರಲಾರದು. ನಮ್ಮ ಮನೆಯ ಹೆಂಗಸರೆಲ್ಲ ಗಂಡಸರಿಗೆ ಈ ಪಾದರಕ್ಷೆಗಳನ್ನು ಮಾಡಿಕೊಡುತ್ತಿದ್ದರು. ಅಕ್ಕನೂ ಹುಡುಗಿಯರೂ ಅದಕ್ಕೆ ಹೂಗಳನ್ನು ಹೊಲೆಯುತ್ತಿದ್ದರು. ಆದರೆ ಹಿಮ್ಮಡಿ ಹೊಲೆಯುವ ಕೆಲಸ ಮಾತ್ರ ಲೈ ಮಾ-ಮಾನೇ ಮಾಡುತ್ತಿದ್ದಳು. ಒಂದು ವರ್ಷದಲ್ಲಿ ಎಷ್ಟು ಹಿಮ್ಮಡದ ಅಟ್ಟೆಗಳನ್ನು ಹೊಲೆಯುತ್ತಿದ್ದಳೋ. ಚೀನಾದೇಶದ ಮುಂದಿನ ಜನಾಂಗ ಮನೆಯಲ್ಲಿ ಮಾಡಿದ ಪಾದರಕ್ಷೆಗಳನ್ನು ಅರಿಯದೆಯೇ ಹೋಗುತ್ತಾರಲ್ಲ ಎಂದು ನನಗೆ ದುಃಖವಾಗುತ್ತದೆ.



ಬಾದಾಮಿ ಹಣ್ಣು ಮಾರುವವನು



ಮೊಟ್ಟೆ ಮಾರುವವನು

# ೧೭. ದೀಪದಹಬ್ಬ

ನಾನು ಚೀನಾದಲ್ಲಿ ಹುಟ್ಟಿರದಿದ್ದರೆ ದೀಪದ ಹಬ್ಬದ ಮನರಂಜನೆ ನನಗೆ ಗೊತ್ತಾಗುತ್ತಲೇ ಇರುತ್ತಿರಲಿಲ್ಲ. ವರ್ಷದ ಮೊದಲನೆ ತಿಂಗಳ ಹದಿನೈದನೆಯ ದಿನ ಈ ಹಬ್ಬ ಬರುತ್ತದೆ. ಕಿಯು-ಕಿಯಾಂಗಿನಲ್ಲಿ ಹದಿಮೂರನೆ ದಿನದಿಂದ ಹದಿನೈದನೆ ದಿನದವರೆಗೆ ನಡೆಯುತ್ತದೆ.

ಹೊಸ ವರ್ಷದ ಹಬ್ಬದಿಂದ ಈ ಹಬ್ಬದವರೆಗೂ ಪೇಟೆಯ ಅಂಗಡಿಗಳೆಲ್ಲ ಮುಚ್ಚಿರುತ್ತವೆ ಎಲ್ಲಿ ನೋಡಿದರೂ ಜನರ ಗುಂಪೇ. ಹೊಸ ವರ್ಷದ ಅಭಿನಂದನೆಗಳು ನಡೆಯುತ್ತಿರುತ್ತವೆ. ಈ ಹಬ್ಬ ಹತ್ತಿರ ಬರುತ್ತಿರುವಾಗ ಬಗೆಬಗೆಯ ದೀಪಗಳನ್ನು ಮಾರುತ್ತ ಬೀದಿಯಲ್ಲಿ ತಿರುಗಾಡುತ್ತಾರೆ. ನಮ್ಮ ಮನೆಯ ಮುಂದೆ ಚಿತ್ರವಿಚಿತ್ರವಾದ ಬಣ್ಣಬಣ್ಣದ ದೀಪಗಳನ್ನು ಹಿಡಿದು ತಿರುಗುತ್ತಿದ್ದ ಒಬ್ಬನ ನೆನಪು ನನಗೆ ಇದೆ. ಪಕ್ಷಿ, ಪಶು, ಹೂ, ಇನ್ನೂ ಹಲವು ಆಕಾರದ ದೀಪಗಳನ್ನು ಅವನು ಮಾರುತ್ತಿದ್ದ. ಚಿಕ್ಕ ಚಿಕ್ಕ ಓಣಿಗಳಲ್ಲಿ ದೊಡ್ಡ ದೊಡ್ಡ ಬೀದಿಗಳಲ್ಲಿ ದೀಪೋತ್ಸವ ನಡೆಯುತ್ತಿತ್ತು. ನಮ್ಮ ಮನೆಯ ಬೀದಿಯ ದೀಪೋತ್ಸವದ ವೆಚ್ಚವನ್ನು ನಾವು ಕೊಡುತ್ತಿದ್ದೆವು.

ಈ ದೆವ್ವದ ದೀಪಗಳು ಬಹಳ ಭಾರಿ. ೧೦-೧೫ ಜನ ಒಟ್ಟಿಗೆ ಅವನ್ನು ಹೊರುತ್ತಿದ್ದರು. ತಲೆಯ ಕಡೆ, ಬಾಲದ ಕಡೆ ಬಲವಾದ ಆಸಾಮಿಗಳಿರಬೇಕು. ಇವನ್ನು ಬಿದಿರಿನ ಕಡ್ಡಿಗಳಿಂದ, ತೆಳ್ಳನೆ ಬಣ್ಣಬಣ್ಣದ ರೇಷ್ಮೆ ಬಟ್ಟೆಗಳಿಂದಲೂ ಕಟ್ಟುತ್ತಿದ್ದರು. ಪಂಚವರ್ಣಗಳ ದೀಪ ಇವು. ಎಲ್ಲಕ್ಕಿಂತ ತಲೆಯ ಭಾಗ ಹೆಚ್ಚು ಭಾರ. ಅಲ್ಲಿ ಐವತ್ತಕ್ಕೂ ಹೆಚ್ಚು ಮೇಣದ ಬತ್ತಿ ಉರಿಯುತ್ತಿದ್ದವು. ಈ ಮೇಣದ ಬತ್ತಿ ಆರಬಾರದು. ಚೆನ್ನಾಗಿ ಉರಿಯುತ್ತಿರಬೇಕು. ಇದನ್ನು ನೋಡಿಕೊಳ್ಳುವುದಲ್ಲದೆ ತಲೆಯಕಡೆ ದೀಪವನ್ನು ಹೊತ್ತವನಿಗೆ ದೆವ್ವದ ನೃತ್ತವೂ ಬರಬೇಕು. ಒಳ ಅಂಗಳ ವಿಸ್ತಾರವಾಗಿದ್ದರೆ

ಮನೆಗಳ ಮುಂದೆಯೇ ಈ ನೃತ್ಯ ನಡೆಯುತ್ತಿತ್ತು. ಈ ದೀಪದ ಮುಂದೆ ನಾಲ್ಕು ಜನ ಕೆಂಪು ರೇಷ್ಮೆಯ ಚೆಂಡುಗಳನ್ನು ಹಿಡಿದುಕೊಂಡು ಬರುತ್ತಿದ್ದರು. ಈ ದೆವ್ವ ಅವರನ್ನು ಹಿಡಿಯಲು-ಬೇಟೆಯಾಡಲು ನುಗ್ಗುತ್ತಿತ್ತು. ಚೆಂಡು ಎತ್ತ ವಾಲಿದರೆ ಅತ್ತ ನುಗ್ಗಬೇಕು ಈ ದೀಪದ ದೆವ್ವ. ಅದರ ಜೊತೆಯಲ್ಲಿದ್ದವರು ಈ ನೃತ್ಯ ನಡೆದಾಗ ಅನೇಕ ವಾದ್ಯಗಳನ್ನು ಬಾರಿಸುತ್ತಿದ್ದರು. ಸುತ್ತಲೂ ನೆರೆದ ಜನ ಕೇಕೆ ಹಾಕುತ್ತಿದ್ದರು. ಶಬ್ದ ಹೆಚ್ಚಿದಂತೆ ಕುಣಿತ ಬಿರುಸು. ನನ್ನ ಬಾಲ್ಯದಲ್ಲಿ ನನಗೆ ಇದರಷ್ಟು ಆನಂದ ನೀಡಿದ ಆಟ-ನೋಟ ಇನ್ನೊಂದಿರಲಿಲ್ಲ. ವರ್ಷಕ್ಕೆ ಒಂದೇ ಸಲವಾದರೂ ಸಾಕು ಇಂಥದು. ಇಡೀ ರಾತ್ರಿ ಇಂತಹ ಅನೇಕ ನೃತ್ಯಗಳನ್ನು ನೋಡಬಹುದಾಗಿತ್ತು. ಎಲ್ಲರದೂ ಒಂದೇ ಬಗೆಯ ಕುಣಿತ.

ಈ ದೃಶ್ಯದಲ್ಲಿ ಮೆರವಣಿಗೆಯೇ ಮುಖ್ಯ. ಕಟ್ಟಕಡೆಯಲ್ಲಿ ಆ ಕಾಲಕ್ಕೆ ತಕ್ಕ ಅಂದವಾದ ಉಡುಪು ಉಟ್ಟು ಬರುವ ಮರಗಾಲು ನಡಿಗೆಯವರು ಕೆಲವರು ಇರುತ್ತಿದ್ದರು. ಹಗಲು ಹೊತ್ತು ಈ ಗುಂಪುಗಳವರು ಮನೆಮನೆಗೆ ಹೋಗಿ ತಮ್ಮ ಪ್ರದರ್ಶನವನ್ನು ಮಾಡಿಸಿ ಎಂದು ತಮ್ಮ ತಮ್ಮ ಮೇಳದ ಪರವಾಗಿ ಔತಣ ಪಡೆದು ಬರುತ್ತಿದ್ದರು. ಯಾರಿಗೆ ಈ ದೃಶ್ಯ ಬೇಡವಾಗಿತ್ತೋ ಅವರು ಬಿಡಬಹುದಾಗಿತ್ತು. ನಮ್ಮ ಅಜ್ಜಿಗೆ ಇದು ತುಂಬ ಇಷ್ಟ. ಮೂರು ರಾತ್ರಿ ಎರಡೆರಡು ಮೇಳಗಳಿಗೆ ಆಮಂತ್ರಣ ಕೊಡುತ್ತಿದ್ದಳು. ದೆವ್ವದ ದೀಪ ಬರುತ್ತಿದೆ ಎಂದು ಮೊದಲೇ ಒಬ್ಬ ಬಂದು ಹೇಳುತ್ತಿದ್ದ. ಅವನಿಗೆ ರೇಷ್ಮೆಯ ಬಟ್ಟೆ, ಮೇಣದಬತ್ತಿ ಕೊಡುತ್ತಿದ್ದರು. ಅನಂತರ ನಾಲ್ಕು ಜನ ವಾದ್ಯದವರು ಒಳ ಅಂಗಳಕ್ಕೆ ಬರುತ್ತಿದ್ದರು. ಅವರ ಹಿಂದೆ ದೆವ್ವದ ತಲೆ. ನಮ್ಮ ಮನೆ ಸಾಕಷ್ಟು ವಿಶಾಲವಾಗಿದ್ದುದರಿಂದ ತಲೆ-ಬಾಲ ಎಲ್ಲಾ ಹಿಡಿಸುತ್ತಿತ್ತು. ಈ ಸಂಗತಿ ನಮಗೆ ತುಂಬ ಅಭಿಮಾನಾಸ್ಪದ. ಮೆರವಣಿಗೆ ನಮ್ಮ ಮನೆಯೊಳಗೆ ಪ್ರವೇಶಿಸುತ್ತಲೇ ನಾವು ಕೈಸಾಲೆಯ ಎಲ್ಲ ದೀಪಗಳನ್ನೂ ಹಚ್ಚಿ ಆ ಮೆರವಣಿಗೆಯ ಸ್ವಾಗತಕ್ಕೆಂದು ಬಾಣ ಬಿರುಸು ಹಚ್ಚುತ್ತಿದ್ದೆವು. ತರುವಾಯ ಭಟ್ಟಂಗಿಯಂತೆ ಒಬ್ಬ ಮನೆತನದ ಗುಣಗಾನ ಮಾಡಿ ಅಭ್ಯುದಯ ಕೋರುತ್ತ ಹಾಡುತ್ತಿದ್ದ. ಹೇಳಿ ಕೇಳಿ ಪ್ರಶಂಸೆ. ಮಾನವರಾದ ನಮಗೆ ಈ ಪ್ರಶಂಸೆ ರುಚಿಸುತ್ತಿತ್ತು.

ಇದರೊಂದಿಗೆ ಸಿಂಹದ ಆಟವೂ ಒಂದು ಸೆಳೆತ. ಒಂದು ದೊಡ್ಡ ಸಿಂಹ ವನ್ನು ಅರಿವೆಯಿಂದ ಮಾಡಿ, ಅದರೊಳಗೆ ಇಬ್ಬರು ಅಡಗಿಕೊಳ್ಳುವರು. ಒಬ್ಬ ಸಿಂಹದ ತಲೆಯ ಕಡೆ ನಿಂತು, ಅದರ ಬಾಯಿ ತೆರೆಸುತ್ತಿದ್ದ. ಇನ್ನೊಬ್ಬ ಹಿಂಭಾಗದಲ್ಲಿದ್ದು ಬಾಲ ಅಲ್ಲಾಡಿಸುತ್ತಿದ್ದ. ಮೂರನೆಯವನು ಕೈಯ ಲ್ಲೊಂದು ರೇಶಿಮೆ ಬಟ್ಟೆಯ ಚೆಂಡುನ್ನು ತೂರಿ-ತೂರಿ ಸಿಂಹವನ್ನು ಕೆರಳಿಸು ತ್ತಿದ್ದ. ಸಿಂಹ ಅವನನ್ನು ಬೆನ್ನಟ್ಟಿ ಚಂಡನ್ನು ಹಿಡಿಯಲು ಹಾರುತ್ತಿತ್ತು, ನೆಗೆ ಯುತ್ತಿತ್ತು. ನಮ್ಮ ಮನೆಗೆ ಸಿಂಹದ ಆಟವನ್ನು ಚೆನ್ನಾಗಿ ಆಡುವ ಒಂದು ಮೇಳ ಬರುತ್ತಿದ್ದ ನೆನವು ನನಗೆ ಇದೆ. ಎರಡನೆಯ, ಮೂರನೆಯ ನಡುಮನೆ ಗಳ ಮಧ್ಯೆ ನಾವು ಮೇಜು ಹಾಕುತ್ತಿದ್ದೆವು. ಆಟಗಾರ ಒಂದು ಮೇಜಿನಿಂದ ಇನ್ನೊಂದು ಮೇಜಿಗೆ ಸಿಂಹವನ್ನು ಆಟವಾಡಿಸುತ್ತ ಒಯ್ಯುತ್ತಿದ್ದ. ಒಂದು ನಡುಮನೆಯಿಂದ ಇನ್ನೊಂದಕ್ಕೆ ಒಯ್ದು ತಿರುಗಿ ತರುತ್ತಿದ್ದ. ಆಟ ಗಾರರು ಬಹಳ ಚೆನ್ನಾಗಿ ಅಭಿನಯಿಸುತ್ತಿದ್ದರು. ಸಿಂಹದ ಮುಂದೆ-ಹಿಂದೆ ಇರುವವರು ಬಹಳ ಹೊಂದಾಣಿಕೆಯಿಂದ ನರಿದಾಡಬೇಕು. ಸಿಂಹದ ಈ ಆಟ ಬಹಳ ಉತ್ಸಾಹಕರವಾಗಿತ್ತು.

ಈ ದೀಪದಾಟವನ್ನು ಚಿಕ್ಕ ಮಕ್ಕಳಿಗೂ ದೊಡ್ಡವರಿಗೂ ಮನರಂಜನೆ ಗೆಂದು ಆಡುತ್ತಾರೆ. ಚಿಕ್ಕವರು ತಲಾ ಒಂದು ದೀಪ ಕೊಳ್ಳುತ್ತಿದ್ದರು.

ನನಗಾಗ ಹನ್ನೊಂದು ವರ್ಷ. ವ್ಯಾಪಾರದಲ್ಲಿ ನಮಗೆ ಆ ವರ್ಷ ತುಂಬ ಲಾಭವಾಗಿತ್ತು. ಬೆಳೆಯೂ ಚೆನ್ನಾಗಿ ಬಂದಿತ್ತು. ಈ ವರ್ಷ ದೀಪೋತ್ಸ ವವನ್ನು ತುಂಬ ಭರ್ಜರಿಯಾಗಿ ನಡೆಸಬೇಕೆಂದು ನಿರ್ಧರಿಸಿದೆವು. ಮನೆ ಯಲ್ಲಿ ನನ್ನ ಓರಗೆಯ ಮಕ್ಕಳು ಸಾಕಷ್ಟು ಇದ್ದುದರಿಂದ ನಾವೇ ಸೇರಿ ಕೊಂಡು ಈ ಉತ್ಸವ ಮಾಡಿದೆವು. ಇದು ಬಹಳ ವೆಚ್ಚದ ಮಾತು. ಕಸಬುದಾರರ ಬಳಿ ದೀಪಗಳನ್ನು ಕೊಂಡರೆ ಖರ್ಚು ಎಂದು ಮನೆಯವರೇ ಸೇರಿ ಮಾಡತೊಡಗಿದವು. ನಮ್ಮ ಆಪ್ತರಲ್ಲೊಬ್ಬ ಹಳ್ಳಿಯಲ್ಲಿದ್ದ. ಇಂತಹ ಕೆಲಸದಲ್ಲಿ ನುರಿತವ. ಅವನನ್ನು ಕರೆಯಿಸಿ ಈ ಕೆಲಸದಲ್ಲಿ ಸಹಾಯ ಮಾಡಲು ಹೇಳಿಯಾಯಿತು. ಹೊಸ ವರ್ಷದ ಹಬ್ಬಕ್ಕಿಂತ ಮೊದಲೇ ಇವಕ್ಕೆ ಬೇಕಾಗುವ ಎಲ್ಲ ಸಾಮಾನು ಕೊಂಡಿಟ್ಟು ಹಬ್ಬ ಮುಗಿದ ಕೂಡಲೆ ಈ

ಕೆಲಸ ಪ್ರಾರಂಭಿಸಿದೆವು. ಹತ್ತು ದಿನಗಳಲ್ಲಿ ದೀಪಗಳು ಸಿದ್ಧವಾದವು. ಆದರೆ ಹಬ್ಬದವರೆಗೂ ಯಾರಿಗೂ ಅದನ್ನು ತೋರಿಸಲಿಲ್ಲ.

ನನ್ನ ತಂಗಿಯರು ನಾಲ್ವರು ಹೂ ದೀಪಗಳನ್ನು ಕೈಯಲ್ಲಿ ಹಿಡಿದು ಮುಂದೆ ಸಾಗಿದರು. ಅವರ ಬೆನ್ನಿಗೆ ಐದರಿಂದ ಏಳುವರ್ಷದ ಮೂವರು ಹುಡುಗರು ಕುದುರೆ ದೀಪವನ್ನು ನಡೆಯಿಸಿದರು. ಈ ಕುದುರೆಯ ದೀಪ ಎರಡು ಭಾಗ. ತಲೆ, ಬಾಲ. ಎರಡಕ್ಕೂ ಮಧ್ಯೆ ಎರಡು ಗಳ. ಅದಕ್ಕೊಂದು ದಾರ ಕಟ್ಟಿ ಹುಡುಗರ ಸೊಂಟಕ್ಕೆ ಕಟ್ಟಿದ್ದರು. ಪ್ರತಿ ಭಾಗದ ಒಳಗೂ ಮೇಣ ಬತ್ತಿ ಉರಿಯುತ್ತಿತ್ತು. ನನ್ನ ವಯಸ್ಸಿನ ಐದು ಹುಡುಗರು ದೆವ್ವದ ದೀಪದಲ್ಲಿ ಭಾಗವಹಿಸಿದ್ದೆವು. ಒಬ್ಬ ಕೆಂಪು ಚಂಡಿನ ದೀಪ ಹಿಡಿದಿದ್ದ. ನಾನೂ ದೀಪದ ತಲೆ ಹಿಡಿದ ಹುಡುಗನೂ ಆಗಾಗ ಸ್ಥಳ ಬದಲಾಯಿಸುತ್ತಿದ್ದೆವು. ಯಾರಿಗೂ ಈ ಉತ್ಸವದ ನೃತ್ಯ ಬರುತ್ತಿರಲಿಲ್ಲ. ಆದ್ದರಿಂದ ಯಾರು ಎಲ್ಲಿದ್ದರೂ ಒಂದೇ. ಕೊನೆಗೆ ಬಾಲ ಹಿಡಿದಿದ್ದ ನನ್ನ ತಮ್ಮ ಕೈಯಲ್ಲಿ ಮೊಲದ ದೀಪವನ್ನು ಎಳೆಯುತ್ತಿದ್ದ. ಬಿಳಿಯ ಮೊಲದ ಆಕಾರದ ಆ ದೀಪದಲ್ಲಿ ಐದು ಚಿಕ್ಕ ಮೊಲದ ದೀಪ ಇದ್ದವು. ಎಲ್ಲದರಲ್ಲೂ ದೀಪ ಹಚ್ಚಲಾಗಿತ್ತು. ಮೊದಲು ಎರಡು ರಾತ್ರಿ ನಾವು ಮನೆಯಲ್ಲೇ ಆಟ ಆಡಿದೆವು. ಕಡೆಯ ದಿನ ನಮ್ಮ ಅಕ್ಕನ ಮನೆಗೆ ಔತಣ ಬಂತು. ಅಕ್ಕನ ಮನೆ ನಮ್ಮ ಮನೆಗೆ ಹತ್ತಿರ. ಇನ್ನೂರು ಗಜ ದೂರ.

ಈ ಮೆರವಣಿಗೆಯಲ್ಲಿ ಮೊದಲು ಐದು ಹೂವಿನ ದೀಪ, ಅನಂತರ ಕುದುರೆ ದೀಪಗಳು, ಆಮೇಲೆ ದೆವ್ವದ ದೀಪ. ಕೊನೆಗೆ ಮೊಲದ ದೀಪ. ನಮಗೆಲ್ಲರಿಗೂ ಈ ದೃಶ್ಯದಿಂದ ತುಂಬ ಸಂತೋಷವಾಯಿತು.

ತಿರುಗಿ ಮನೆಗೆ ಬರುತ್ತಲೇ ಎಲ್ಲ ದೀಪಗಳನ್ನೂ ಉರಿಸಿದೆವು. ಚಿಕ್ಕವರ ದೊಡ್ಡವರ ಎಲ್ಲಾ ದೀಪಗಳನ್ನೂ ಉರಿಸುವುದು ವಾಡಿಕೆ. ಮರು ದಿನದಿಂದ ಹೊಸ ವರ್ಷದ ಕೆಲಸ ಪ್ರಾರಂಭ ಎಂದು ತೋರಿಸುವುದಕ್ಕೆ. ಹಿರಿಯರು ನಾಳೆಯಿಂದ ಶಾಲೆಗೆ ಹೋಗಿ ಎಂದು ಹೇಳಿದರು. ವರ್ಷಕ್ಕೆ ಬೇಕಾದ ವಿನೋದವಾದ್ದರಿಂದ ಅದು ನಮಗೂ ಸರಿ ಕಾಣುತ್ತಿತ್ತು. ಉತ್ಸವದ ದಿನದ ರಾತ್ರಿ ೧೦ ಗಂಟೆಯವರೆಗೂ ಮಕ್ಕಳು ಎಚ್ಚರವಾಗಿರುತ್ತಿದ್ದರು. ಐದು ಗಂಟೆಯ ಹೊತ್ತಿಗೇ ಮುಚ್ಚಂಜೆ ಕವಿದದ್ದರಿಂದ ದೀಪೋತ್ಸವ ಬೇಗ ಪ್ರಾರಂಭವಾಯಿತು.

ಆ ಸಂಭ್ರಮದ ವಾತಾವರಣದ ರಾತ್ರಿ ಹುಡುಗರು ಹುಡುಗಿಯರು ಕೂಡಿ ಜನ ತುಂಬಿದ ಬೀದಿಯಲ್ಲಿ ದೀಪೋತ್ಸವ ನೋಡಲು ಹೋಗಿದ್ದೆವು. ಅಂದು ನಮ್ಮ ಕವಯಿತ್ರಿ ಬರೆದ ಒಂದು ಕವನವನ್ನು ನಾನು ಹೇಳಿಕೊಳ್ಳುತ್ತಿದ್ದೆ.

ಈ ಹಬ್ಬ ಬಹು ಕಾಲದಿಂದ ನಡೆದು ಬಂದ ಪುರಾತನ ಹಬ್ಬ. ಹ್ಯಾನ್ ಅರಸರ ಕಾಲಕ್ಕೆ ಪ್ರಾರಂಭವಾಯಿತಂತೆ. ಎರಡು ಸಾವಿರ ವರ್ಷ ಆಗಿದೆ. ನಾನು ಚಿಕ್ಕವನಿದ್ದಾಗ ಈ ಉತ್ಸವ ಬಹಳ ಉತ್ಸಾಹದಿಂದ ನಡೆಯುತ್ತಿತ್ತು. ಕಳೆದ ಇಪ್ಪತ್ತು ವರ್ಷಗಳಿಂದ ಈ ಉತ್ಸವ ನಮ್ಮೂರಲ್ಲಿ ಆಗಿಲ್ಲ. ಈ ಬದಲಾವಣೆಗೆ ಕಾರಣ ತಿಳಿಯದು. ಮತ್ತೆ ಈ ದೀಪದ ಹಬ್ಬ ನಮ್ಮೂರಿನಲ್ಲಿ ನಡೆದೀತೆಂದು ಯಾರು ಹೇಳಬಲ್ಲರು !

ನಮಗೆ ನಿಜವಾದ ಶಾಂತಿ ಸೌಖ್ಯ ಉಂಟಾದಾಗ ಈ ಹಬ್ಬವೂ ನಡದೀತೇನೋ ! ಆಸೆಯಿರಲಿ.



ಹಣ್ಣು ಮಾರುವವನು



ಬೇಯಿಸಿದ ಪಕ್ಷಿಗಳನ್ನು ಮಾರುವವನು

# ೧೮. ಎಪ್ಪತ್ತನೆಯ ವರ್ಷದ ಹುಟ್ಟಿದ ಹಬ್ಬಗಳು

ಹುಟ್ಟಿದ ಹಬ್ಬ ಎಂದರೆ ಪೂರ್ವಜರ ಮಂದಿರದಲ್ಲಿ ಧೂಪ ಹಾಕುವುದು ಆಚಾರ. ನಮ್ಮ ವಂಶದವರೊಬ್ಬರು ಇನ್ನೊಂದು ವರ್ಷ ಸುಖದಿಂದ ಜೀವಿಸಿದರು ಎಂಬುದನ್ನು ತಿಳಿಸುವ ಸಂಪ್ರದಾಯ. ನಾಳೆ ಹುಟ್ಟಿದ ದಿನ ಎನ್ನುವಾಗ ರಾತ್ರಿ ಊಟವಾದ ಮೇಲೆ ಎಲ್ಲರಿಗೂ ಒಂದೊಂದು ಬಟ್ಟಲು ಕೋಳಿ ಮರಿ ಪಲಾವು, ಪಾಯಸವನ್ನು ಕೊಡುತ್ತಿದ್ದರು. ಇದಕ್ಕಿಂತ ಹೆಚ್ಚು ಏನು ಮಾಡುವುದೂ ನಮ್ಮಂತಹ ದೊಡ್ಡ ಮನೆಗಳಲ್ಲಿ ಸಾಧ್ಯವಿರಲಿಲ್ಲ. ಒಂದೇ ಒಂದು ತಿಂಗಳಲ್ಲಿ ಮೂರು ನಾಲ್ಕು ಹುಟ್ಟಿದ ಹಬ್ಬ ಬರುತ್ತಿದ್ದವು.

ಆದರೆ ನಮ್ಮ ಅಜ್ಜ-ಅಜ್ಜಿಯರ ಎಪ್ಪತ್ತನೆಯ ಹುಟ್ಟಿದ ಹಬ್ಬಕ್ಕೆ ಮಾತ್ರ ವಿಶೇಷ ಏರ್ಪಾಟು ನಡೆಯಿತು. ಅಜ್ಜನ ಎಪ್ಪತ್ತಕ್ಕೆ, ಅಜ್ಜಿಗೆ ಅರವತ್ತಕ್ಕೆ ಹುಟ್ಟಿದ ಹಬ್ಬವನ್ನು ವಿಶೇಷವಾಗಿ ನಡಸುವುದು ನಮ್ಮಲ್ಲಿ ವಾಡಿಕೆ. ನಮ್ಮ ಅಜ್ಜ-ಅಜ್ಜಿಯರ ಈ ಹುಟ್ಟಿದ ಹಬ್ಬದ ದಿನ ನಾನು ಹೊಸ ಬಟ್ಟೆ ಹಾಕಿಕೊಂಡಿದ್ದು, ಹಬ್ಬದ ಊಟ ಮಾಡಿದ್ದು ಮಾತ್ರ ನೆನಪಿದೆ. ಕೆಲವು ಕಾಲದ ಮೇಲೆ ನನಗೆ ಗೊತ್ತಾಯಿತು, ಅಜ್ಜನಿಗೆ ಎಪ್ಪತ್ತುನಾಲ್ಕು ವರ್ಷ, ಅಜ್ಜಿಗೆ ಅರವತ್ತಾರು ವರ್ಷ. ಇಬ್ಬರಿಗೂ ಕೂಡಿಬರುವಂತೆ ಎಪ್ಪತ್ತನೆಯ ಹುಟ್ಟಿದ ಹಬ್ಬಗಳನ್ನು ಒಂದೇ ಸಲ ಮಾಡಲಾಯಿತು.

ಅಜ್ಜಿಯ ಹುಟ್ಟಿದ ಹಬ್ಬದ ದಿನ ಈ ಉತ್ಸವ ಜರುಗಿತು. ಅಜ್ಜನ ಹುಟ್ಟಿದ ದಿನದ ಒಂದು ತಿಂಗಳ ಮೇಲೆ ಅಜ್ಜಿಯ ಹುಟ್ಟಿದ ದಿನ. ಮೂರೂ ಕೈಸಾಲೆಗಳಿಗೆ ಬಣ್ಣ ಕೊಟ್ಟರು. ದೊಡ್ಡ ಸ್ಯಾಟಿನ್ ಪರದೆಯ ಮೇಲೆ "ದೀರ್ಘಾಯುಗಳಾಗಿ ಇರಿ" ಎಂದು ದೊಡ್ಡ ಸುವರ್ಣಾಕ್ಷರಗಳಿಂದ ಬರೆದು

ಮೂರನೆಯ ಕೈಸಾಲೆಯಲ್ಲಿ ಪೂರ್ವಜರ ಮಂದಿರದ ಎದುರಿಗೆ ಹಾಕಿದ್ದರು. ಗೋಡೆಯ ಮೇಲಿದ್ದ ಚಿತ್ರಗಳನ್ನೆಲ್ಲ ತೆಗೆದು ಬೇರೆ ಚಿತ್ರಗಳನ್ನು ಹಾಕಲಾಗಿತ್ತು. ಚಿತ್ರಗಳೆಲ್ಲ ದೀರ್ಘಾಯುಸ್ಸನ್ನು ತಿಳಿಸುವಂಥವೇ. ನಮ್ಮ ತಂದೆಯ ಗೆಳೆಯರೂ ನಮ್ಮ ಕಕ್ಕಂದಿರ ಗೆಳೆಯರೂ ಬರೆದು ಕಳಿಸಿದ ಕವಿತೆಗಳನ್ನೂ ಶುಭಸಂದೇಶಗಳನ್ನೂ ಗೋಡೆಗಳಿಗೆ ಅಂಟಿಸಿದ್ದರು. ಕುರ್ಚಿಗಳಿಗೆ ಕಸೂತಿಯ ಹೊಸ ಹೊದಿಕೆ ಹಾಕಿ ಹೊಸ ಮೆತ್ತೆಗಳನ್ನು ಹಾಕಿದ್ದರು. ಮೂರನೆಯ ಕೈಸಾಲೆಯಲ್ಲಿ ದೊಡ್ಡ ಜಮಖಾನೆ ಹಾಸಿತ್ತು. ಮೊದಲನೆ ಅಂಗಳದಲ್ಲಿ ತೊಲೆಗೆ ಕೆಂಪನೆ ದೊಡ್ಡ ಮೇಣಬತ್ತಿಗಳನ್ನು ಹಚ್ಚಿ ತೂಗುಬಿಟ್ಟಿದ್ದರು. ಇವುಗಳ ಮೇಲೆ ಬಂಗಾರದ ಬಣ್ಣದಲ್ಲಿ ದೀರ್ಘಾಯುವಾಗು, ಸೌಖ್ಯವಿರಲಿ ಎಂದು ಬರೆಯಲಾಗಿತ್ತು. ಎರಡನೆ ನಡುಮನೆಯಲ್ಲಿ ಅಂದವಾದ ಒಂದು ಕಸೂತಿಯ ತೆರೆ, ಅದರ ಮೇಲೆ ಒಂದು ಕಥೆ. ಒಂದೊಂದು ನಡುಮನೆಯಲ್ಲೂ ನಾಲ್ಕು ನಾಲ್ಕು ರೇಷ್ಮೆಯ ದೀಪ, ಮಧ್ಯೆ ಒಂದು ದೊಡ್ಡ ದೀಪ. ಕಂಬಗಳಿಗೆ ಕೆಂಪು ಕಾಗದದಲ್ಲಿ ಸುಂದರ ವಾಕ್ಯಗಳನ್ನು ಅಂಟಿಸಿದ್ದರು. ಹೊರಬಾಗಿಲಿನಿಂದ ನೋಡುವವರಿಗೆ ಅತ್ಯಂತ ಆಲ್ಹಾದಕರ ಸುಂದರ ದೃಶ್ಯ !

ಕೆಂಪು ಕಾರ್ಡಿನಲ್ಲಿ ಆಮಂತ್ರಣ ಕಳಿಸಿದ್ದರು. ಹುಟ್ಟಿದ ಹಬ್ಬಕ್ಕೆ ಎರಡು ದಿನ ಮೊದಲೇ ಕಾಣಿಕೆಗಳ ಪ್ರವಾಹವೇ ಹರಿದುಬಂತು. ಇವುಗಳಲ್ಲಿ ಕೆಲವು ಚೀನಾಭಾಷೆಯ ಸುಂದರ ಕವಿತೆಗಳೂ ಚಿತ್ರಗಳೂ ಅಲ್ಲದೆ, ಹ್ಯಾವಿಗೆ ಗೌಲಿಗಳೂ ಇದ್ದವು. ಹ್ಯಾವಿಗೆ ಗೌಲಿಗಳು ದೀರ್ಘ ಆಯುಸ್ಸಿನ ಸಂಕೇತ.

ಹುಟ್ಟುದಿನಕ್ಕೆ ಮುನ್ನಾದಿನ ಒಂದು ದೊಡ್ಡ ಹಲಗೆ ಕಾಣಿಕೆಯಾಗಿ ಬಂತು ಅದರಲ್ಲಿ 'ಎಪ್ಪತ್ತರ ದಾಂಪತ್ಯ ಜೀವನ' ಎಂದು ಬರೆದು, ಬಲಗಡೆ ಅಜ್ಜ-ಅಜ್ಜಿಯರ ಹೆಸರು, ಎಡಗಡೆ ಕಾಣಿಕೆಯನ್ನು ಕಳಿಸಿದವರ ಹೆಸರು ಬರೆದಿತ್ತು. ಅಕ್ಷರಗಳನ್ನು ಕೆತ್ತಿ ಬಂಗಾರದಿಂದ ಅದನ್ನು ತುಂಬಿಸಿದ್ದರು. ಕಳಿಸಿದವರು ನಮ್ಮ ಮನೆಯ ಅಳಿಯಂದಿರು. ನಮ್ಮ ಭಾವನ ಹೆಸರು ಎರಡನೆಯದು. ಈ ಹಲಗೆಯನ್ನು ಎರಡನೆ ಕೈಸಾಲೆಯ ಹಿಂಬದಿಯಲ್ಲಿ ತೂಗುಹಾಕಲಾಯಿತು. ಅನಂತರ ಹುಟ್ಟಿದ ಹಬ್ಬದ ಕಾರ್ಯಕ್ರಮ ಪ್ರಾರಂಭ. ನನಗೆ ನೆನಪಿರುವುದು ಇಷ್ಟೇ. ತುಂಬಾ ದಣಿದಿದ್ದೆ, ಬೇಗಹೋಗಿ ಮಲಗಿಕೊಂಡೆ.

ಮೂರನೆಯ ದಿನ ಮಧ್ಯಾಹ್ನದ ಹೊತ್ತಿಗೆ ಅತಿಥಿಗಳು ಬರುವುದಕ್ಕೆ ಪ್ರಾರಂಭವಾಯಿತು. ಮುಂಬಾಗಿಲಿನಲ್ಲಿ ಮೇಳದವರು ಕುಳಿತು ಅತಿಥಿಗಳು ಬಂದೊಡನೆ ವಾದ್ಯ ಬಾರಿಸುತ್ತಿದ್ದರು. ಇದನ್ನು ಕೇಳಿ ಹಿರಿಯರು ಹೊರಗೆ ಬಂದು ಅತಿಥಿಯನ್ನು ಸ್ವಾಗತಿಸುತ್ತಿದ್ದರು. ನನ್ನ ಕಕ್ಕಂದಿರಿಗೂ ಅಂಣನಿಗೂ ಇದನ್ನು ವಹಿಸಿತ್ತು.

ಎಲ್ಲಾ ಅತಿಥಿಗಳೂ ಬಂದನಂತರ ಎರಡನೆ ನಡು ಮನೆಯಲ್ಲಿ ಒಂದು ಛಾಯಾದೃಶ್ಯ ತೋರಿಸಲಾಯಿತು. ಒಂದು ಮರದ ಚೌಕಟ್ಟನ್ನು ಮೇಜಿನ ಮೇಲೆ ನಿಲ್ಲಿಸಿದರು. ಅದಕ್ಕೊಂದು ತೆಳ್ಳನೆ ಬಟ್ಟೆಯನ್ನು ಮಳೆಗಳಿಂದ ಬಡಿದರು. ಅದರ ಹಿಂದೆ ಸೂತ್ರಧಾರ ಕುಳಿತಿದ್ದ. ದಪ್ಪ-ದಪ್ಪ ಕಾಗದದಿಂದ ಮಾಡಿದ ಪಾತ್ರಗಳನ್ನು ಆಡಿಸುತ್ತ ಕಥೆ ಹೇಳುತ್ತಿದ್ದ. ಒಂದೊಂದು ಪಾತ್ರದ ಮಾತನ್ನೂ ಒಬ್ಬೊಬ್ಬರು ಹಾಡುತ್ತಿದ್ದರು. ಅಷ್ಟು ಜನ ಹಾಡುವವರು! ಸೂತ್ರಧಾರಿ ತುಂಬಾ ನುರಿತವ; ನಿಷ್ಣಾತ; ಚೆನ್ನಾಗಿಯೇ ಆಡಿಸಿದ. ಅತಿಥಿಗಳಿಗೆ ತುಂಬಾ ಸಂತೋಷವಾಯಿತು. ಕಥೆ ದೀರ್ಘಾಯುಸ್ಸಿಗೆ ಸಂಬಂಧಿಸಿದ್ದು. ಹಾಡುಗಾರರೆಲ್ಲ ಮೂರನೆಯ ಕಕ್ಕನ ಬಳಗ. ಚೆನ್ನಾಗಿ ಅಭಿನಯಿಸಲು ತುಂಬ ಶ್ರಮ ವಹಿಸಿದ್ದರು. ಕಕ್ಕನೂ ಅಜ್ಜ-ಅಜ್ಜಿಯರ ಮೇಲಿನ ಆದರಕ್ಕಾಗಿ ಅದರಲ್ಲಿ ಪಾತ್ರವಹಿಸಿದ್ದ.

ಈ ದೃಶ್ಯ ಮುಗಿದ ಕೂಡಲೆ ಆ ವರೆಗೂ ಗಂಭೀರವಾಗಿ ಕುಳಿತ ಪ್ರೇಕ್ಷಕ ವೃಂದ ಅಜ್ಜ ಅಜ್ಜಿಯರಿಗೆ ತಮ್ಮ ಅಭಿನಂದನೆ ಅರ್ಪಿಸಲೆಂದು ಒಮ್ಮೆಲೆ ಎದ್ದರು. ತಂದೆಯವರೂ ಕಕ್ಕಂದಿರೂ ಅವರನ್ನು ತಡೆದು ನಿಲ್ಲಿಸಿ ವಿನಂತಿ ಮಾಡಿಕೊಂಡರೂ ಅವರು ಅಜ್ಜ-ಅಜ್ಜಿಯರನ್ನು ಕಾಣಲು ಅವರ ಕೋಣೆಗೆ ಹೋಗಲು ಹಟ ಹಿಡಿದರು. ಈ ಗೊಂದಲ ತಪ್ಪಿಸಲೆಂದು 'ದೀರ್ಘಾಯುವಾಗು' ಎಂದು ಬರೆದಿದ್ದ ಪರದೆಯ ಮುಂದೆ ಎರಡು ಕುರ್ಚಿಗಳನ್ನು ಹಾಕಿಸಿದರು. ಎಡಬದಿಯ ಕುರ್ಚಿಯಲ್ಲಿ ಅಜ್ಜ, ಬಲಬದಿಯ ಕುರ್ಚಿಯಲ್ಲಿ ಅಜ್ಜಿ ಬಂದು ಕುಳಿತರು ಅತಿಥಿಗಳು ಬಂದು ತಮ್ಮ ವಯಸ್ಸಿಗೆ ತಕ್ಕಂತೆ ಮೊಳಕಾಲೂರಿ ಕೆಲವರು, ಹಾಗೇ ಕೆಲವರು, ಕೈಮುಗಿದು ಅಜ್ಜ-ಅಜ್ಜಿಯರಿಗೆ ತಮ್ಮ ಆದರವನ್ನು ವ್ಯಕ್ತಪಡಿಸಿದರು. ಅಜ್ಜ-ಅಜ್ಜಿಯ ಗೆಳೆಯರೂ ಎಲ್ಲರಿಗಿಂತ ಹಿರಿಯ ಕಕ್ಕಂದಿರ ಗೆಳೆಯರೂ ಬಂದು ಮುದುಕರಿಗೆ ನಮಸ್ಕಾರ ಮಾಡಿ

ದರು. ಅನಂತರ ನಮ್ಮ ತಂದೆಯ ಮಿತ್ರರು, ಆಮೇಲೆ ಬೇರೆ ಬೇರೆ ಮನೆತನದ ಜನ ಬಂದರು. ಕೊನೆಗೆ ನಮ್ಮ ದೊಡ್ಡಪ್ಪ ನಮ್ಮನ್ನೆಲ್ಲ ಕರೆದುಕೊಂಡು ಹೋಗಿ ವಂದನಾರ್ಪಣೆಯ ಸಮಾರಂಭವನ್ನು ಮುಕ್ತಾಯಗೊಳಿಸಿದರು.

ತಾಯ್ ಕತೆಯಲ್ಲಿ ಬರುವ ಎಂಟು ದೇವತೆಗಳಂತೆ ತಂದೆಯವರು ಎಂಟು ಜನ ಹುಡುಗರನ್ನು ಆರಿಸಿ ಉಡುಪು ತೊಡಿಸಿದ್ದರು. ಆ ಕತೆಯಲ್ಲಿ ಈ ಎಂಟು ದೇವತೆಗಳು ಸ್ವರ್ಗದ ಅರಮನೆಯಲ್ಲಿ ಮಾತೃರಾಣಿಯ ಹುಟ್ಟಿದ ಹಬ್ಬಕ್ಕೆ ಹೋಗುವರು. ಇವರಲ್ಲಿ ಒಬ್ಬಳೇ ಹುಡುಗಿ. ಆದರೆ ತಂದೆಯವರು ಆರಿಸಿದವರಲ್ಲಿ ಮೂವರು ಹುಡುಗಿಯರಿದ್ದರು. ಇಬ್ಬರು ಗಂಡು ವೇಷ ಧರಿಸಬೇಕಾಯಿತು. ನಾವು ಕಾಗದದ ಟೋಪಿ ಇಟ್ಟುಕೊಂಡಿದ್ದೆವು. ಬಣ್ಣ ಬಣ್ಣದ ರೇಷ್ಮೆ ಬಟ್ಟೆ ಉಟ್ಟಿದ್ದೆವು. ನನಗೆ ಉದ್ದ ಮೀಸೆ ಅಂಟಿಸಿದ್ದರು. ಒರಟಾಗಿತ್ತು. ಸ್ವಲ್ಪ ನೋವೂ ಆಯಿತು. ಕತೆಯಲ್ಲಿ ಒಬ್ಬ ದೇವತೆ ಕುಂಟ. ಕೋಲಿನ ಸಹಾಯದಿಂದ ನಡೆಯುತ್ತಿದ್ದ. ಸ್ತ್ರೀ ದೇವತೆ ಉದ್ದವಾದ ಹಳೇ ನಿಲುವಂಗಿ ತೊಟ್ಟುಕೊಳ್ಳಬೇಕು. ಈ ವೇಷ ಹಾಕಿದ ತಂಗಿಗೆ ಇಂಥ ಅಂಗಿ ತೊಟ್ಟು ರೂಢಿ ಇರಲಿಲ್ಲ. ನಾವೆಲ್ಲರೂ ಆ ನಡುಮನೆಗೆ ಬಂದೊಡನೆ ಜನರೆಲ್ಲ ತುಂಬ ನಕ್ಕುಬಿಟ್ಟರು. ನಾವು ನಮ್ಮ ಪಾತ್ರಗಳನ್ನು ಮರೆತು ಓಡಿಹೋದೆವು. ಆ ತಂಗಿ ಕಾಲಿಗೆ ಅಂಗಿ ಸಿಕ್ಕಿಕೊಂಡು ರತ್ನಗಂಬಳಿಯ ಮೇಲೆ ಬಿದ್ದುಬಿಟ್ಟಳು. ನಮಗೆ ಕಲಿಸಿಕೊಟ್ಟಿದ್ದನ್ನೆಲ್ಲಾ ಮರೆತು ಅಜ್ಜ-ಅಜ್ಜಿಯರಿಗೆ ನಮಸ್ಕಾರ ಮಾಡಿದೆವು. ಇದನ್ನು ನೋಡಿ ನೆರೆದ ಜನರೆಲ್ಲ ತುಂಬ ಸಂತೋಷಪಟ್ಟರು. ನಮಸ್ಕರಿಸಿ ಏಳುವ ಹೊತ್ತಿಗೆ ನನ್ನ ಮೀಸೆ ಕಿತ್ತು ಹೋಗಿತ್ತು; ಇನ್ನೊಬ್ಬರ ಟೊಪ್ಪಿಗೆ ಜಾರಿತ್ತು; ಮೂರನೆಯವರ ಕೈಯ ಹೂ ಬುಟ್ಟಿ ಮುರಿದಿತ್ತು; ನಾಲ್ಕನೆಯವನ ಉಡುಪೇ ಜಾರಿಹೋಗಿತ್ತು.

ಈ ಉತ್ಸವ ಎರಡು ಮೂರು ಗಂಟೆಯ ಸಮಯ ನಡೆಯಿತು. ಮುಗಿಯುವ ಹೊತ್ತಿಗೆ ಅಜ್ಜ-ಅಜ್ಜಿಯರು ಅತಿಯಾಗಿ ದಣಿದು ತಮ್ಮ ಕೋಣೆಗೆ ಮರಳಿದರು. ಆಮೇಲೆ ಅತಿಥಿಗಳಿಗೆ ಭೋಜನ. ಎಲ್ಲರೂ ಸಂತೋಷದಿಂದ ಊಟ ಮಾಡಿದರು. ಹುಟ್ಟಿದ ಹಬ್ಬದ ಗುರುತಾಗಿ ಅಕ್ಕಿಯ ಬದಲು ಶ್ಯಾವಿಗೆಯನ್ನು ಬಡಿಸಿದ್ದರು.

# ೧೯. ಅಣ್ಣನ ಮಗು

ನನಗಾಗ ಹದಿನಾಲ್ಕು ವರ್ಷ. ಮನೆತನದ ರೀತಿರಿವಾಜು ಗೊತ್ತಿರ ಬೇಕಾದ ವಯಸ್ಸು. ಏಳೆಂಟು ವರ್ಷದ ಚಿಕ್ಕ ಹುಡುಗನಿರುವಾಗ ಸಿಕ್ಕ ಸಿಕ್ಕ ಕೋಣೆಗಳಲ್ಲಿ ಎಡೆತಡೆಯಿಲ್ಲದೆ ಹೋಗಿ ಬರುತ್ತಿದ್ದಂತೆ ಈಗ ಬರುತ್ತಿರಲಿಲ್ಲ. ಮನೆಯಲ್ಲಿ ಹಗಲು ಕೋಣೆಯ ಬಾಗಿಲುಗಳೆಲ್ಲ ತೆರೆದೇ ಇರುತ್ತವೆ. ಬಟ್ಟೆಯ ಪರದೆಯನ್ನೊ ರೇಶಿಮೆಯದನ್ನೊ ಬಿದಿರಿನ ಚಾಪೆಯನ್ನೊ ಇಳಿ ಬಿಟ್ಟಿರುತ್ತಿದ್ದರು. ಮನೆಯಲ್ಲಿ ಎಲ್ಲರೂ ನಿಯಮಗಳನ್ನು ತಪ್ಪದೆ ಪಾಲಿಸುತ್ತಿದ್ದರು. ನಮ್ಮ ಮನೆಯಲ್ಲಿ ಅಸಂಖ್ಯ ಕೋಣೆ ಇವೆ. ಹೊಸ ವರ್ಷದ ಹಬ್ಬದ ದಿನ ಮಾತ್ರ ಅವೆಲ್ಲವನ್ನೂ ನಾನು ನೋಡುತ್ತಿದ್ದೆ. ಮನೆಯಲ್ಲಿ ಜನರು ಯಾರೂ ಒಮ್ಮೊಂದೊಮ್ಮೆ ಯಾವ ಕೋಣೆಗೂ ಎಂದೂ ಹೋಗುತ್ತಿರಲಿಲ್ಲ. ಅದರಿಂದ ಕೋಣೆಯ ಬಾಗಿಲು ಹಾಕುವ ಆವಶ್ಯಕತೆಯೇ ಇರುತ್ತಿರಲಿಲ್ಲ. ಮಕ್ಕಳೆಲ್ಲ ತೋಟದಲ್ಲಿ, ಶಾಲೆಯಲ್ಲಿ, ದೊಡ್ಡ ದೊಡ್ಡ ಹಜಾರಗಳಲ್ಲಿ, ಹೊರ ಜಗುಲಿಗಳ ಮೇಲೆ ಆಟ ಆಡುತ್ತಿದ್ದರು.

ನಾನು ಹನ್ನೆರಡು ವರ್ಷದವನಾಗುತ್ತಲೆ ಅಂಣ ತಂದೆಗೆ ಹೇಳಿದ-ತಾನು ಪ್ರಿನ್ಸಿಪಾಲನಾಗಿದ್ದ ಶಾಲೆಗೆ ನನ್ನನ್ನು ಕಲಿಯಲು ಕಳಿಸಬೇಕು ಎಂದು. ಈ ಶಾಲೆಯನ್ನು ಊರಿನ ಪ್ರಮುಖರು ಸ್ಥಾಪಿಸಿದ್ದರು. ಈಗಿನ ಉಳಿದ ಶಾಲೆಗಳಂತೆಯೆ ಅದೂ. ಆ ಶಾಲೆಗೆ ಹೋಗಿ ಬರುತ್ತ ನಾನು ಮನೆಯವರೊಂದಿಗೆ ಬೇರೆಯಾಗಿಯೇ ನಡೆದುಕೊಳ್ಳತೊಡಗಿದೆ. ಅವರೂ ಕೂಡ ಮೊದಲಿನ ಜನವಾಗಿರಲಿಲ್ಲ. ಮುಂದೆ ನಾನು ಕಿಯಾಂಗಿಸಿ ಪ್ರಾಂತದ ಕಿಯು-ಕಿಯಾಂಗಿನಲ್ಲಿದ್ದ ಹೈಸ್ಕೂಲನ್ನು ಸೇರಿದ ಮೇಲೆ, ಮನೆಯ ಜನರೊಂದಿಗೆ ಬಳಕೆ ಮತ್ತಿಷ್ಟು ಕಡಮೆಯಾಯಿತು. ನಾನಿದನ್ನೆಲ್ಲ ಹೇಳುವುದೇಕೆಂದರೆ-ಆ ಕಾಲಕ್ಕೆ ನಾನು

ಮನೆಯ ಜನರಿಂದ, ಅದರಲ್ಲೂ ಹೆಚ್ಚಾಗಿ ಹೆಂಗಸರಿಂದ, ದೂರ ದೂರ ಇರ ಹತ್ತಿದೆ ಎಂದು ತೋರಿಸುವುದಕ್ಕೆ. ಹೆಣ್ಣು-ಗಂಡು ಮಕ್ಕಳು ಕೂಡಿರಲು ಆಸ್ಪದ ವಿರಲಿಲ್ಲವೆಂದೇನೂ ಅಲ್ಲ. ಆದರೆ ಬೆಳೆದು ದೊಡ್ಡವರಾದಂತೆ ಅವರಿಬ್ಬರಲ್ಲಿ ಬಳಕೆ ತಾನಾಗಿ ಕಡಮೆಯಾಗತೊಡಗಿತು. ಹೀಗಾಗಿ ನನ್ನ ಅತ್ತಿಗೆ ಮದುವೆ ಯಾಗಿ ಮನೆಗೆ ಬಂದ ಕೆಲವು ವರ್ಷ ಅವಳನ್ನು ನಾನು ದಿನಾಲೂ ನೋಡು ತ್ತಿರಲೇ ಇಲ್ಲ. ಅವಳೇನೋ ಹಳೆಯ ರೀತಿಯಲ್ಲಿ ಬೆಳೆದು ಬಂದವಳಾದ್ದ ರಿಂದ ಮನೆಯ ಹಿರಿಯರಿಗೆಲ್ಲ ಆದರ ತೋರಿಸುತ್ತಿದ್ದು, ಅವರಿಗೆ ಸಂತೋಷ ವನ್ನೀಯುತ್ತಿದ್ದಳು. ಪ್ರತಿ ವರ್ಷ ಹೊಸ ವರ್ಷದ ಹಬ್ಬದ ದಿನ ಅಜ್ಜಿ ಹಾಗೂ ಉಳಿದ ಕಕ್ಕಿಯರು ಅತ್ತಿಗೆಯನ್ನು ಕಂಡು ಮುಂದಿನ ವರ್ಷದೊಳಗಾಗಿ ನಕ್ಕು ನಲಿಯುವ ಚಂದದ ಮಗುವಿನ ತಾಯಿಯಾಗು ಎಂದು ಆಶೀರ್ವದಿಸುತ್ತಿ ದ್ದರು. ಆದರೂ ಮೊದಲಿನ ನಾಲ್ಕು ವರ್ಷ ಅತ್ತಿಗೆ ತಾಯಿಯಾಗಲಿಲ್ಲ. ಇದಕ್ಕೆ ಯಾರೂ ಬೇಸರವನ್ನೂ ತೋರಲಿಲ್ಲ.

ಮುಂದೆ ಒಂದು ದಿನ ನಮ್ಮೊಂದಿಗೆ ಅವಳು ಊಟಕ್ಕೆ ಬರಲಿಲ್ಲ. ಅವಳ ಮೈಯಲ್ಲಿ ಅಷ್ಟು ಚೆನ್ನಾಗಿಲ್ಲವೆಂದು ಕೇಳಿದೆ. ದೊಡ್ಡಪ್ಪನನ್ನು ಈ ವಿಚಾರ ಕೇಳಿಯೂ ಆಯಿತು. ಇದಾದ ಮೇಲೆ ಆಗಾಗ ಅತ್ತಿಗೆ ನಮ್ಮೊಂದಿಗೆ ಊಟಕ್ಕೆ ಬರುತ್ತಿರಲಿಲ್ಲ. ಹುಳಿ, ಖಾರ ಹಾಗೂ ಕಹಿ ಪದಾರ್ಥ ತಿನ್ನುವು ದಕ್ಕೆ ಅವಳಿಗೆ ಬಯಕೆಯಾಗಹತ್ತಿತು. ಖಾರಗೆಣಸಿನ ಉಪ್ಪಿನಕಾಯಿ, ಕು-ಕು-ಆ ಎಂದರೆ ಕಹಿ ಕಲ್ಲಂಗಡಿ ಹಣ್ಣು ಇತ್ಯಾದಿ. ದೊಡ್ಡಪ್ಪ ಅಜ್ಜಿಗೆ ಆಗ ಹೇಳಿದ, ಅತ್ತಿಗೆಗೆ "ಯು-ಷಿ" ಎಂದರೆ "ಸಂತೋಷ ಉಂಟಾಗಿದೆ."

ಈ ಸುದ್ದಿ ಕೂಡಲೇ ಮನೆತುಂಬಾ ಪಸರಿಸಿತು. ಯಾರೂ ಇದರಿಂದ ಉದ್ವೇಗಗೊಳ್ಳಲಿಲ್ಲ; ಸಂತೋಷಭರಿತರಾದರು. ನನಗಿಂತ ಚಿಕ್ಕವರಾಗಿದ್ದ ಮಕ್ಕಳಿಗೆಲ್ಲ ಅತ್ತಿಗೆಯ ಕೋಣೆಯ ಬಳಿ ವಿಚಿತ್ರ ಸ್ವರ ತೆಗೆದು ಗದ್ದಲ ಮಾಡ ಕೂಡದೆಂದು ಅಪ್ಪಣೆ ವಿಧಿಸಲಾಯಿತು. ಅತ್ತಿಗೆಯ ಕೋಣೆಯ ಒಳಕ್ಕೂ ಹೊರಕ್ಕೂ ಅಜ್ಜಿ ಆಗಾಗ ಹೋಗಿ ಬರಹತ್ತಿದರು. ನಿತ್ಯದಂತೆ ಅತ್ತಿಗೆ ತನ್ನ ಕೋಣೆಯನ್ನು ಸರಿಯಾಗಿ ಇರಿಸುವ ಕೆಲಸವನ್ನು ಒಬ್ಬಬ್ಬರು ದಾಸಿ ಯರ ಹಾಗೂ ಚಿಕ್ಕ ಹೆಣ್ಣು ಹುಡುಗಿಯರ ಸಹಾಯದಿಂದ ತಾನೇ ಮಾಡಿ ಕೊಳ್ಳುತ್ತಿದ್ದಳು. ಆದರೀಗ ಆಕೆಯನ್ನು ನೋಡಿಕೊಳ್ಳುವುದಕ್ಕೆಂದೇ ಒಬ್ಬ

ದಾಯಿಯನ್ನು ಗೊತ್ತುಮಾಡಲಾಯಿತು. ಹಾಗೂ ಅತ್ತಿಗೆಗೆ ಏನೂ ಮಾಡ ಕೂಡದೆಂದು ಹೇಳಿಯೂ ಆಯಿತು. ತಗ್ಗು ದಿನ್ನೆಯುಳ್ಳ ಸ್ಥಳವಲ್ಲಿ, ಕುರ್ಚಿಯ ಕೈ ಮೇಲೆ, ಕುಳಿತುಕೊಳ್ಳಬಾರದೆಂದು ಅತ್ತಿಗೆಗೆ ಹೇಳಿದರು. ಓರೆ-ಕೋರೆಯಾಗಿ ನಿಂತುಕೊಳ್ಳುವಂತಿರಲಿಲ್ಲ; ಮಗ್ಗಲು ಮಾಡಿ ಮಲಗು ವಂತೆಯೂ ಇರಲಿಲ್ಲ. ಆದರೆ ಅವಳು ತನ್ನ ಕೋಣೆಯ ಒಳಗಾಗಲೀ ಕೋಣೆಯ ಮುಂದೆಯಾಗಲೀ ದಿನಾಲು ತಿರುಗಾಡಲು ಬಿಡುತ್ತಿದ್ದರು. ಅವಳ ಜೊತೆಗೆ ಇರುವುದಕ್ಕೂ, ಜೊತೆಗೆ ಊಟ ಮಾಡುವುದಕ್ಕೂ, ಏನಾ ದರೂ ಬೇಕಾದರೆ ತಂದುಕೊಡುವುದಕ್ಕೂ ಇಬ್ಬರು ಚಿಕ್ಕ ಹುಡುಗಿಯರನ್ನು ಕೊಡಲಾಗಿತ್ತು. ಅತ್ತಿಗೆಯೊಂದಿಗೆ ಸಿಕ್ಕ ಸಿಕ್ಕಂತೆ ಹರಟೆ ಹೊಡೆದು ಅವಳ ಮನಸ್ಸಿನ ಶಾಂತತೆಯನ್ನು ಕದಡದಂತೆಯೂ, ಸ್ಮಶಾನ ಯಾತ್ರೆ, ದೆವ್ವ, ಭೂತ ಇತ್ಯಾದಿ ಭಯಾನಕ ಕತೆಗಳನ್ನು ಹೇಳದಂತೆಯೂ ಆ ಹುಡುಗಿಯರಿಗೆ ಕಟ್ಟಪ್ಪಣೆ ಮಾಡಲಾಗಿತ್ತು. ಮುಖ್ಯ ಮಾತೆಂದರೆ ಹುಟ್ಟಲಿರುವ ಮಗುವಿ ಗಾಗಿ, ಅತ್ತಿಗೆ ದಣಿದುಕೊಳ್ಳದಂತೆ ಅವಳನ್ನು ನೋಡಿಕೊಳ್ಳಬೇಕಾಗಿತ್ತು.

ನಾನು ಈ ಸುಗ್ರೀವಾಜ್ಞೆಗಳನ್ನು ಕೇಳಿದ್ದೆ. ಅವುಗಳನ್ನು ಪಾಲಿಸಿ ಕೊಂಡು ಹೋಗುವುದು ಅಶಕ್ಯವೆಂದೂ ಭಾವಿಸಿದ್ದೆ. ಆದರೆ ಆ ಇಬ್ಬರು ಹುಡುಗಿಯರು ಯಾವ ಅಡ್ಡಿ ಆತಂಕಗಳನ್ನೂ ಒಡ್ಡದೆ ಒಪ್ಪಿಕೊಂಡರು. ಮದುವೆಯಾಗಿ ಹೋಗಿದ್ದ ನನ್ನ ಅಕ್ಕ ಬಂದು, ಅತ್ತಿಗೆಯೊಂದಿಗೆ ಅವಳ ಕೋಣೆಯಲ್ಲಿ ಪ್ರತಿಸಲಕ್ಕಿಂತ ಹೆಚ್ಚು ಕಾಲ ಇದ್ದು ಹೋದಳು. ವಾಳಿಯ ಪ್ರಕಾರ ಎಲ್ಲ ಅಕ್ಕಿಯರೂ ಆಗಾಗ ಅತ್ತಿಗೆಯ ಕೋಣೆಗೆ ಹೋಗಿಬರುತ್ತಿದ್ದರು. ಪ್ರತಿಯೊಬ್ಬರೂ ಕೂಸಿಗಾಗಿ ಏನನ್ನಾದರೂ ಮಾಡುವುದರಲ್ಲಿ ತುಂಬಾ ನಿರತರು. ಚಿಕ್ಕ ಚಿಕ್ಕ ಹುಡುಗಿಯರೂ ಮಗುವಿಗಾಗಿ ಕಾಲುಚೀಲ, ಬೂಟ್ಸು, ಟೊಪ್ಪಿಗೆ, ಅಂಗಿ ಇತ್ಯಾದಿ ಏನನ್ನಾದರೂ ಹೆಣೆಯುತ್ತಿದ್ದರು. ಎಲ್ಲಕ್ಕಿಂತ ಅಚ್ಚರಿಯೆಂದರೆ ನನಗೂ ಬಿಡುವಿರಲಿಲ್ಲ. ಈ ಚಿಕ್ಕ ಹುಡುಗಿಯರು ಬಂದು ತಮ್ಮ ಕಸೂತಿಗೆ ಚಿತ್ರ ಬಿಡಿಸಿಕೊಡಲು ನನಗೆ ಹೇಳುತ್ತಿದ್ದರು. ಆಗಾಗ ನಮ್ಮ ಮನೆಗೆ ಇಂತಹ ಚಿತ್ರಗಳನ್ನು ಮಾರಲು ಬರುತ್ತಿದ್ದವರಿಂದ ಚಿತ್ರಗಳನ್ನು ಕೊಂಡುಕೊಳ್ಳುತ್ತಿರಲಿಲ್ಲ. ನನ್ನನ್ನೇ ಪೀಡಿಸುತ್ತಿದ್ದರು.

ಇದಾವುದೂ ನನ್ನ ಅಂಣನಿಗೆ ತಾಗಲೇ ಇಲ್ಲ. ದಿನದಂತೆ ಶಾಲೆಗೆ ಹೋಗುತ್ತಿದ್ದ, ಬರುತ್ತಿದ್ದ. ಅತ್ತಿಗೆಯ ಕೋಣೆಯಲ್ಲಿ ಮಲಗದೆ ಅಭ್ಯಾಸದ ಕೋಣೆಯಲ್ಲಿ ಮಲಗಹತ್ತಿದ. ಇದೊಂದೇ ಆತನ ಕಾರ್ಯಕ್ರಮದಲ್ಲಿ ಆದ ಬದಲಾವಣೆ. ಆದರೆ ತಂದೆ ಮಾತ್ರ ತುಂಬಾ ಚುರುಕು ಆದರು. ಅಜ್ಜಿಯನ್ನು ಕೇಳಿ ಎಲ್ಲ ಸಿದ್ಧತೆ ಮಾಡಿದರು. ಅತ್ತಿಗೆಯ ಆಹಾರ ಹಾಗೂ ಔಷಧದ ವಿಷಯ ದೊಡ್ಡಪ್ಪನನ್ನು ಸದಾ ಕೇಳುತ್ತಿದ್ದರು.

ಅವರಿಗೂ ಅವರದೇ ಒಂದು ಕರ್ತವ್ಯವೂ ಇತ್ತು. ಅತ್ತಿಗೆಯ ಕೋಣೆಯಲ್ಲಿ ತೂಗು ಬಿಡಲು ಚಿತ್ರಗಳನ್ನು ತಾವೇ ಚಿತ್ರಿಸಿಕೊಟ್ಟರು. ಈ ಚಿತ್ರಗಳಲ್ಲಿಯ ಅಲ್ಪ ಸ್ವಲ್ಪ ಸಾಮಾನ್ಯ ಕೆಲಸ ಮಾಡಲು ನನಗೂ ಆಸ್ಪದ ದೊರೆತಿತ್ತು. ನಮ್ಮ ಹಿಂದಿನ ಋಷಿಗಳು "ತಾಯ್-ಚಿಯಾ ಓ" ಎಂದರೆ ಮಗು ಹುಟ್ಟುವ ಮೊದಲೇ "ಶಿಶು ಸಂಗೋಪನ" ಶಾಸ್ತ್ರ ಕಲಿಸಿ ಕೊಡುವ ಪರಂಪರೆಯನ್ನು ಹಾಕಿದಾರೆ. ತಾಯಿಯಾಗುವವಳ ಪರಿಸರವು ಚೆನ್ನಾಗಿದ್ದರೆ ಆಗಲಿರುವ ಮಗು ಸುಂದರವೂ ಚುರುಕು ಬುದ್ಧಿಯುಳ್ಳದ್ದೂ ಆಗುವದೆಂದು ನಮ್ಮ ಪೂರ್ವದ ಋಷಿಗಳ ಅಭಿಪ್ರಾಯ. ತಾಯಿಯಾಗುವವಳು ತಾನು ಏನು ನೋಡುತ್ತಾಳೋ ಕೇಳುತ್ತಾಳೋ ಮನಸ್ಸಿನಲ್ಲಿ ಏನು ಯೋಚಿಸುತ್ತಾಳೋ, ಬಾಯಿಂದ ಏನು;ಮಾತಾಡುತ್ತಾಳೋ, ಅದೆಲ್ಲದರ ಪರಿಣಾಮ ಅವಳ ಹೊಟ್ಟೆಯಲ್ಲಿನ ಮಗುವಿನ ಮೇಲೆ ಆಗುತ್ತದೆಂದು ಅವರು ಭಾವಿಸಿದ್ದರು. ಆದ್ದರಿಂದ ತಾಯಿಯಾಗುವವಳು ತುಂಬಾ ಜಾಗರೂಕಳಾಗಿ ಇರಬೇಕಾದ್ದು ಅಗತ್ಯ. ಸುಂದರ ವಸ್ತುಗಳನ್ನೇ ನೋಡಬೇಕು. ಸಚ್ಚರಿತ್ರೆಯನ್ನೇ ಆಲಿಸಬೇಕು. ಹಾಗೂ ಕಾನ್‌ಫ್ಯುಷಿಯಸ್ ವಿಚಾರಗಳನ್ನೇ ಆಲೋಚಿಸಬೇಕು. ತಾಯಿಯಾಗುವವಳು ನವಿಲು, ಗಿಳಿ ಇತ್ಯಾದಿ ಪಕ್ಷಿಗಳನ್ನು ನೋಡುತ್ತಿದ್ದರೆ ಆಗಲಿರುವ ಮಗು ಬುದ್ಧಿಶಾಲಿಯಾಗುವುದೆಂದೂ, ವಜ್ರ ವೈಢೂರ್ಯಗಳನ್ನು ನೋಡುತ್ತಿದ್ದರೆ ಸುಂದರ ಶಿಶು ಆಗುವುದೆಂದೂ ನಮ್ಮಲ್ಲಿ ವದಂತಿ. ಇದೇ ಪ್ರಕಾರ ಓಡುವ ನಾಯಿ, ಹಾರುವ ಹಕ್ಕಿಗಳು ಶಕ್ತಿ ಆರೋಗ್ಯ ಕೊಡುವಂಥವು.

ಈ ಎಲ್ಲ ಪ್ರಾಣಿಗಳನ್ನು ಕೋಣೆಯಲ್ಲಿ ಸಜೀವವಾಗಿ ತಂದಿರಿಸುವುದು ಅಸಾಧ್ಯ. ತಂದೆ ಇವುಗಳ ಚಿತ್ರ ಬಿಡಿಸಿ ಬಣ್ಣಕೊಟ್ಟು ಅತ್ತಿಗೆಯ ಕೋಣೆಯಲ್ಲಿ ಹಾಕಿದ್ದರು. ಈ ಚಿತ್ರಗಳಿಗೆ ಇಷ್ಟು ಶಕ್ತಿ ನಿಜವಾಗಿ ಇದೆಯೆ ಎಂದು

ನಾನು ಯಾವಾಗಲೂ ಶಂಕಿಸಲಿಲ್ಲ. ಆದರೆ ಮಗು ಆಗುವ ವರೆಗೂ ನನಗೆ ಅತ್ತಿಗೆಯ ಕೋಣೆಗೆ ಹೋಗಲು ಅಪ್ಪಣೆ ಇರಲಿಲ್ಲ. ಅತ್ತಿಗೆಯ ಕೋಣೆ ಸುಂದರವಾಗಿದೆ ಎಂದು ಎಲ್ಲರೂ ಅನ್ನುವುದನ್ನು ಮಾತ್ರ ಕೇಳುತ್ತಿದ್ದೆ.

ಕೊನೆ ಕೊನೆಗೆ ಎಲ್ಲ ಸಿದ್ಧತೆಯೂ ಆಯಿತು. ತಾಯಿ ತನ್ನ ಮಗುವಿಗೆ ಮೊಲೆಕುಡಿಸಲು ಅಸಮರ್ಥಳಾದರೆ ಇರಲಿ ಎಂದು ಮೊಲೆ ಕುಡಿಸಬಲ್ಲ ಒಬ್ಬ ದಾಯಿಯನ್ನೂ ಗೊತ್ತು ಮಾಡಿ ಇರಿಸಿಕೊಳ್ಳಲಾಯಿತು. ನಾವು ಚಿಕ್ಕಮಕ್ಕಳಿಗೆ ಆಕಳ ಹಾಲನ್ನು ಉಪಯೋಗಿಸುವುದಿಲ್ಲ. ಈಗಿನಂತೆ ಕೈ ಹಾಲು ದೊರೆಯುತ್ತಿರಲಿಲ್ಲ.

ಹೀಗೆ ಕೆಲ ದಿನಗಳು ಆನಂದಮಿಶ್ರಿತ ಕಳವಳದಲ್ಲಿ ಸಾಗಿದವು. ಒಂದು ದಿನ ಬೆಳಗ್ಗೆ–ಆ ತಿಂಗಳ ಕೊನೆ ಕೊನೆಗೆ–ನಾನು ಶಾಲೆಯಿಂದ ಬಂದಾಗ ನನ್ನ ದಾಯಿ ಹೇಳಿದಳು, ನನ್ನ ಅಣ್ಣನ ಮಗನ ಜನನವಾಗಿದೆ ಎಂದು. ನಾನು ಕೆಲ ಹೊತ್ತು 'ಅಣ್ಣನ ಮಗ, ಅಣ್ಣನಮಗ' ಎನ್ನುತ್ತ ಕುಣಿದಾಡಿದೆ.

ಮನೆಯ ಜನರೆಲ್ಲ ತುಂಬಾ ಸಂತೋಷದಲ್ಲಿದ್ದರು. ಅದರಲ್ಲೂ ಅಜ್ಜ–ಅಜ್ಜಿಯರಿಗೆ ಹಿಡಿಸಲಾರದಷ್ಟು ಸಂತೋಷ. ಅಲ್ಲವೆ ಮತ್ತೆ ? ಮರಿ ಮಗನನ್ನು ನೋಡುವುದು ಎಷ್ಟು ಆನಂದವೋ! ಮಗು ಹುಟ್ಟಿದ ಕೂಡಲೇ ತಂದೆ ಹಿರಿಯರ ವಿಗ್ರಹಗಳ ಮುಂದೆ ಧೂಪ ಹಾಕಿ ನಮಸ್ಕರಿಸಿ, ಅವರ ವಂಶದಲ್ಲಿ ಹೊಸಬರೊಬ್ಬರು ಹುಟ್ಟಿ ಬಂದಿದಾರೆಂದು ಹೇಳುವುದು ನಮ್ಮಲ್ಲಿ ನಡೆದು ಬಂದ ಶಾಸ್ತ್ರ. ಮಗುವಿನ ಜನನವಾದಾಗ ಅಂಣ ಮನೆಯಲ್ಲಿರಲಿಲ್ಲ, ಶಾಲೆಯಲ್ಲಿದ್ದ. ತಂದೆಯವರೇ ಅವನ ಪರವಾಗಿ ಈ ಶಾಸ್ತ್ರವಿಧಿಯನ್ನು ಪೂರೈಸಿದರು. ಮಗುವಿನ ಜನನ ವಾರ್ತೆಯನ್ನು ಕೇಳಿದ ನಾನು ತಂದೆಯ ಕೋಣೆಗೆ ಧಾವಿಸಿದೆ. ತಂದೆಯವರು ನನ್ನ ತಾಯಿಯ ಚಿತ್ರದ ಎದುರಿಗೆ ನಿಂತಿದ್ದರು. ಅವರ ಕಣ್ಣಲ್ಲಿ ನೀರು ತುಂಬಿತ್ತು. ನನ್ನನ್ನು ಹತ್ತಿರಕ್ಕೆ ಸೆಳೆದು ಕೈ ಗಟ್ಟಿಯಾಗಿ ಹಿಡಿದು "ಅವಳಿದ್ದರೆಷ್ಟು ಸಂತೋಷವಾಗುತ್ತಿತ್ತೋ ಅವಳಿಗೆ" ಎಂದು ಉದ್ಗಾರ ತೆಗೆದರು. ಕೆಲಹೊತ್ತು ನಮಗೆ ಮಾತೇ ಬಾರದಾದವು. ಮೌನವಾಗಿದ್ದೆವು. ವೃದ್ಧಿ ಬಂದ ಮೇಲೆ ನಮ್ಮವರು ಯಾರಿಗೂ ಬಿಡುವೇ ಇಲ್ಲ. ಕ್ಷಣಕ್ಷಣಕ್ಕೂ ಹೆಚ್ಚು ಹೆಚ್ಚು ಚಟುವಟಿಕೆ. ಅತ್ತಿಗೆಯ ತವರುಮನೆಗೆ ಬುಟ್ಟಿ ತುಂಬಾ ಕೆಂಪು ತತ್ತಿಗಳನ್ನು ಕೊಟ್ಟು ಮಗು ಹುಟ್ಟಿದ ಸುದ್ದಿ ಹೇಳಿ

ಬರಲು ಸೇವಕನನ್ನು ಕಳಿಸಿದರು. ಕೆಂಪು ಬಣ್ಣದ ಔಚಿತ್ಯವೇನೋ ನಾನ ರಿಯೆ. ಆದರೂ ಈ ರೀತಿ ಸುದ್ದಿ ಕಳಿಸುವುದಕ್ಕೆ ನಮ್ಮಲ್ಲಿ "ಪೌ-ಷಿ" ಎನ್ನು ತ್ತಾರೆ. ಇದರ ಅರ್ಥ–"ಸಂತೋಷವನ್ನು ತಿಳಿಸುವುದು." ಈ ಸುದ್ದಿ ಮುಟ್ಟಿಸಿ ನಮ್ಮ ಸೇವಕ ತಿರುಗಿ ಬಂದ ಮೇಲೆ ಅತ್ತಿಗೆಯ ಮನೆಯಿಂದ ಯಾರಾದರೂ ಬರುತ್ತಾರೆ. ಮಗುವಿಗೆ ಉಡುಗೊರೆ ತೆಗೆದುಕೊಂಡು ಮೆರವಣಿಗೆ ಮಾಡಿ ಕೊಂಡು ಬರುತ್ತಾರೆ. ಅವರನ್ನು ಎದುರುಗೊಂಡು ಸ್ವಾಗತಿಸಿ ಮರ್ಯಾದೆ ಮಾಡಬೇಕು ನಮ್ಮ ತಂದೆ. ಆ ಕಾಲದಲ್ಲಿ ವಾಹನ ಸೌಕರ್ಯ ಇರಲಿಲ್ಲ. ಎಲ್ಲವನ್ನೂ ಆಳಿನ ಮೇಲೆ ಹೊರಿಸಿಕೊಂಡೇ ಬರಬೇಕಾಗುತ್ತಿತ್ತು. ನಮ್ಮ ತಂದೆ ಮೊದಲಿನ ಹಜಾರದಲ್ಲಿ ನಿಂತುಕೊಂಡರು. ಮುಂಬಾಗಿಲಲ್ಲಿ ಒಬ್ಬ ಸೇವಕ ಪಟಾಕಿಗಳ ಸರವನ್ನೇ ಹಿಡಿದು ನಿಂತಿದ್ದ. ಅತ್ತಿಗೆಯ ತವರು ಮನೆಯ ಜನ ಬರುವುದನ್ನು ನೋಡಿದೊಡನೆ ಅವನು ಆ ಪಟಾಕಿಗಳನ್ನು ಹಾರಿಸಿದ. ಬಾಣಗಳನ್ನು ಬಿಟ್ಟ. ತಂದೆಯವರು ಬರುವವರನ್ನು ಸ್ವಾಗತಿಸಲು ಹೆಬ್ಬಾಗಿ ಲಿಗೆ ಬಂದು ನಿಂತರು. ಬಂದವರಿಗೆ ಸ್ವಾಗತ ನೀಡಿದರು. ಪರಸ್ಪರ ನಮ ಸ್ಕಾರವಾಯಿತು. ಅವರು ತಮ್ಮ ಮನೆತನದ ಹಿರಿಯರು ಕಳಿಸಿದ ಸಂದೇಶ ವನ್ನೂ ಅಭಿನಂದನಗಳನ್ನೂ ತಂದೆಯವರಿಗೆ ತಲಪಿಸಿದರು. ಅನಂತರ ಇಬ್ಬರು ಸೇವಕರು ಹೊತ್ತು ತಂದ ಬಿದಿರಿನ ಒಂದು ಪೆಟ್ಟಿಗೆ, ಇಬ್ಬರು ಸೇವಕಿ ಯರು ತಂದ ತುಂಬಿದ ಎರಡು ಬುಟ್ಟಿಗಳನ್ನು ತಂದರು. ಇವರೆಲ್ಲರೂ ಹೊಸ ಬಟ್ಟೆ ಧರಿಸಿದ್ದರು. ಅವರು ತಂದಿದ್ದ ಕಾಣಿಕೆಗಳನ್ನು ಒಳಗಿನ ನಡುಮನೆಯಲ್ಲಿ ಇರಿಸಿಕೊಳ್ಳಲಾಯಿತು. ಆ ಹೊತ್ತಿಗೆ ಅಜ್ಜಿಯೂ ಉಳಿದ ಚಿಕ್ಕಿಯರೂ ಅಲ್ಲಿ ನೆರೆದಿದ್ದರು.

ತಂದೆ, ದೊಡ್ಡಪ್ಪ ಇಬ್ಬರೂ ಅವರು ತಂದಿದ್ದ ಪೆಟ್ಟಿಗೆಯ ಬಾಗಿಲು ತೆರೆ ದರು. ಅದರೊಳಗಿನ ಲಕೋಟೆಯನ್ನು ಕೈಗೆ ತೆಗೆದುಕೊಂಡರು. ಅದರಲ್ಲಿ ಒಂದು ಕೆಂಪು ಕಾಗದ. ಕಾಗದದಲ್ಲಿ "ಇದೇ ಪ್ರಕಾರ ಮನೆತನ ಮುಂದೆ ದಾಂಗುಡಿ ಇಡುತ್ತ ಸಾಗಲಿ. ಹುಟ್ಟಿದ ಮಗು ಬುದ್ಧಿಶಾಲಿಯೂ ವೈಭವ ಶಾಲಿಯೂ ಆಗಲಿ" ಇತ್ಯಾದಿ ಇನ್ನೂ ಏನೇನೋ ಶುಭಾಶೀರ್ವಾದ ಬರೆದಿತ್ತು. ಆ ವಾಕ್ಯಗಳನ್ನು ನಾನು ಮರೆತುಬಿಟ್ಟಿದೇನೆ. ಸಾಮಾನ್ಯವಾಗಿ ಇದೆಲ್ಲ

ಪುಸ್ತಕಗಳಿಂದ ಎತ್ತಿಕೊಂಡು ಪ್ರತಿ ಮಾಡಿದ್ದು. (ಹೆಣ್ಣು ಮಗುವಾಗಿದ್ದರೆ ಅದಕ್ಕೆ ತಕ್ಕಂತೆ ಈ ಪದ ಪ್ರಯೋಗ ಬೇರೆ).

ಅತ್ತಿಗೆಯ ತಂದೆ ಊರಲ್ಲಿಲ್ಲದಿದ್ದರೂ ಈ ಒಕ್ಕಣಿಕೆಯ ಕೆಳಗೆ ಅವರ ಹೆಸರನ್ನೂ ಆ ಮನೆಯ ಉಳಿದ ಹಿರಿಯರ ಹೆಸರನ್ನೂ ಹಾಕಲಾಗಿತ್ತು. ಅನಂತರ ಆ ಪೆಟ್ಟಿಗೆಯಲ್ಲಿದ್ದ ಉಳಿದ ಸಾಮಾನನ್ನು ಹೊರತೆಗೆದರು. ಪೆಟ್ಟಿಗೆಯಲ್ಲಿ ಒಂದರ ಕೆಳಗೊಂದು ನಾಲ್ಕು ಮನೆ. ಮೇಲೆ ವಿವರಿಸಿದ ಲಕೋಟೆ ಮೊದಲಿನ ಮನೆಯಲ್ಲಿ; ಎರಡನೆಯದರಲ್ಲಿ ಮಗುವಿನ ವಿದ್ಯಾಭ್ಯಾಸಕ್ಕೆ ಬೇಕಾಗುವ ಎಲ್ಲ ವಸ್ತುಗಳು-ಮಸಿದವತಿ, ಕುಂಚಗಳು, ಕಾಗದ, ಕೆಲವು ಪ್ರಾಥಮಿಕ ಪುಸ್ತಕ ; ಮೂರನೆ ವಿಭಾಗದಲ್ಲಿ ತರತರದ ಟೋಪಿ, ಚಣ್ಣ, ಜಾಕೆಟ್ಟು, ಶರ್ಟು, ನಿಲುವಂಗಿ, ಬೂಟು, ಚಿಕ್ಕ ಕೂಸು ಹಾಕಿಕೊಳ್ಳಲು ಬರುವಂತಹ ಬೆಳ್ಳಿ ಬಂಗಾರ ವಜ್ರದ ಒಡವೆ ಇದ್ದವು. (ಕೂಸು–ಹೆಣ್ಣು ಆದರೆ ಹೆಣ್ಣು ಮಕ್ಕಳ ಬಟ್ಟೆ ಆಭರಣ ಇರುತ್ತಿದ್ದವು). ನಾಲ್ಕನೆಯ ವಿಭಾಗದಲ್ಲಿ ಬಟ್ಟೆ, ಸಾದಾ ಹಾಗೂ ರೇಷ್ಮೆಯದು. ಹೆಂಗಸರು ತಂದಿರಿಸಿದ ಬುಟ್ಟಿಯಲ್ಲಿ ಜೀವಂತ ಕೋಳಿ ಮರಿಗಳು, ಕೆಲವು ಬಾತು ಕೋಳಿಗಳು. ಈ ಬಾತು ಕೋಳಿಯ ತಲೆಯ ಮೇಲೆ ಕೆಂಪು ಚಿಕ್ಕೆ. ಇನ್ನೊಂದು ಬುಟ್ಟಿಯಲ್ಲಿ ಆಗತಾನೆ ತರಿಸಿ ನೀರಿನಲ್ಲಿ ಹಾಕಿದ್ದ ಮೀನು. ಒಬ್ಬನು ತತ್ತಿಗಳಿಂದ ಮಾಡಿದ ಕೆಂಪು ಬಣ್ಣದ ಅತ್ಯುತ್ತಮ ಶಾವಿಗೆಗಳ ಕಟ್ಟನ್ನು ತಂದಿದ್ದ. ಈ ಎಲ್ಲ ಪದಾರ್ಥಗಳು ಆಗತಾನೆ ಹೆತ್ತ ಬಾಣಂತಿಯರಿಗೆ ಕೊಡತಕ್ಕ ಪುಷ್ಟಿಕರ ಶ್ರೇಷ್ಠ ಆಹಾರ ವಸ್ತುಗಳು. ಉಡುಗೊರೆ ತಂದ ವಸ್ತುಗಳನ್ನೆಲ್ಲ ಒಪ್ಪಿಸಿಕೊಂಡ ಮೇಲೆ ತಂದೆ ಒಂದು ಕೆಂಪು ಲಕೋಟೆಯನ್ನು ಕಾಣಿಕೆತಂದ ಹಿರಿಯನ ಕೈಯಲ್ಲಿ ಕೊಟ್ಟರು. ಅದರಲ್ಲಿ ಆಲಂಕಾರಿಕ ಭಾಷೆಯಲ್ಲಿ ಬರೆದ ಅಭಿನಂದನೆಯ ಪತ್ರವಿತ್ತು. ಅದಕ್ಕೆ ಅಜ್ಜ, ತಂದೆ, ದೊಡ್ಡಪ್ಪ, ಅಣ್ಣ ಸಹಿ ಹಾಕಿದ್ದರು. ಪೆಟ್ಟಿಗೆಯ ಒಳಬದಿಗೆ ಕೆಂಪುಕಾಗದ ಹಚ್ಚಿ ಅದನ್ನು ಅಂದಗೊಳಿಸಲಾಯಿತು. ಆದರ ಒಂದು ವಿಭಾಗದಲ್ಲಿ ಅಜ್ಜಿ ಕೆಂಪು ಬಣ್ಣದ ತತ್ತಿಗಳನ್ನು ತುಂಬಿದರು. ಕೊನೆಗೆ ತಂದೆ ಕಾಣಿಕೆ ತಂದವರನ್ನು ನಮಸ್ಕರಿಸಿ ಬೀಳ್ಕೊಟ್ಟರು.

ಇದಾದ ಮೇಲೆ ಆಪ್ತರಿಂದ, ಮಿತ್ರರಿಂದ ಮಗುವಿಗೂ ಮಗುವಿನ ತಾಯಿಗೂ ಕಾಣಿಕೆಗಳ ಸುರಿಮಳೆಯೇ ಪ್ರಾರಂಭವಾಯಿತು. ಅಜ್ಜಿ,

ದೊಡ್ಡಮ್ಮ ಎಲ್ಲರೂ ಈ ಕಾಣಿಕೆಗಳನ್ನು ಯಥೋಚಿತ ರೀತಿಯಲ್ಲಿ ಸ್ವೀಕರಿಸುವುದರಲ್ಲಿ ನಿರತರಾದರು. ಈ ಕಾಣಿಕೆಗಳನ್ನು ತಂದವರು ಸಾಮಾನ್ಯವಾಗಿ ಸೇವಕರೇ ಆದರೂ ಅವರನ್ನೂ ಕೂಡ ಸ್ವಾಗತಿಸಿ ಒಂದು ಕಪ್ಪು ಒಳ್ಳೇ ಚಹಾವನ್ನೋ ಕೋಳಿಮರಿಯ ಪಲಾವನ್ನೋ ಅವರಿಗೆ ಕೊಡುತ್ತಿದ್ದರು. ಅವರು ಮರಳಿ ಹೋಗುವಾಗ ಕಾಣಿಕೆ ತಂದ ಮನೆಗೆ ಕೆಂಪು ಬಣ್ಣ ಕೊಟ್ಟ ತತ್ತಿಗಳನ್ನು ಕಳಿಸುವುದು ಸಂಪ್ರದಾಯ. ಇದಕ್ಕಾಗಿ ನೂರಾರು ತತ್ತಿಗಳಿಗೆ ಕೆಂಪುಬಣ್ಣ ಕೊಡುತ್ತಿದ್ದರು. ಎಷ್ಟೋ, ನನಗೆ ನೆನಪಿಲ್ಲ. ಮನೆಯಲ್ಲೆಲ್ಲಾ ಕೋಲಾಹಲ. "ಕಂಗ-ಶಿ, ಕಂಗ-ಶಿ" ("ಧನ್ಯವಾದ-ಧನ್ಯವಾದ) ಎಂಬ ಕೂಗಿನಿಂದ ಮನೆ ತುಂಬಿಹೋಗಿತ್ತು. ಹದಿನಾಲ್ಕು ವರ್ಷಗಳ ಹುಡುಗ ನಾನು. ಆದರೂ ನನ್ನನ್ನೂ ಎಲ್ಲರೂ ಅಭಿನಂದಿಸುವವರೇ! ನಿಜ! ಮನೆಯೊಳಗೆ ಪ್ರತಿಯೊಬ್ಬರಿಗೂ ಸಂತೋಷವೇ. ಕೆಲವರು ಸೇವಕರು ಮನೆಯ ಮಕ್ಕಳಾದ ನಮಗಿಂತ ಹೆಚ್ಚು ಸಂತೋಷಭರಿತರಾಗಿದ್ದರು. ದಾಸಿಯರೂ ಮಗುವಿಗೆ ಉಡುಗೊರೆ ಕೊಟ್ಟರು.

ಒಂದು ತಿಂಗಳು ಈ ಪ್ರಕಾರ ಒಂದೇ ಸಮನೆ ಉಡುಗೊರೆ ಬಂದವು. ಆಪ್ತರು, ಮಿತ್ರರು ಅಜ್ಜಿಯನ್ನು ಅತ್ತಿಗೆಯನ್ನು ಸಮಕ್ಷಮ ಕಂಡು ಅಭಿನಂದನೆಕೊಡಲು ಬರತೊಡಗಿದರು. ಬಂದವರು ಒಪ್ಪೊತ್ತಾದರೂ ಊಟ ಮಾಡಿಕೊಂಡೇ ಹೋಗುತ್ತಿದ್ದರು. ಇದರಿಂದ ಅಜ್ಜಿಗೂ ದೊಡ್ಡಮ್ಮನಿಗೂ ದಣಿವಾಗುವಷ್ಟು ಹೆಚ್ಚು ಕೆಲಸ ಬೀಳುತ್ತಿತ್ತು. ನಾನು ಗಂಡಸು. ಹೆಂಗಸರು ಇಷ್ಟೆಲ್ಲ ಕೆಲಸ ಹೇಗೆ ಮಾಡುತ್ತಾರೋ ಎಂದು ನನಗೆ ತುಂಬ ಕನಿಕರವಾಗುತ್ತಿತ್ತು. ಆದರೆ ಅವರೆಲ್ಲರೂ ಸಂತೋಷದಿಂದಲೇ ಎಲ್ಲ ಕೆಲಸವನ್ನೂ ಮಾಡುತ್ತಿದ್ದರು. ನಮ್ಮ ಅಜ್ಜಿಗೆ ಆ ದಿನಗಳಲ್ಲಿ ಎಷ್ಟು ಸಂತೋಷವಾಗಿತ್ತೋ ನಾನು ಊಹಿಸಿಕೊಳ್ಳಬಲ್ಲೆ.

ಹೆರಿಗೆಯ ಕಾಲಕ್ಕೆ ಅಲ್ಲಿದ್ದ ಜನರನ್ನುಳಿದು ಬೇರೆ ಯಾರಿಗೂ ನಾಲ್ಕು ದಿನಗಳವರೆಗೆ ಅತ್ತಿಗೆಯ ಕೋಣೆಯಲ್ಲಿ ಪ್ರವೇಶವಿರಲಿಲ್ಲ. ಅನಂತರ ನೀರು ಹಾಕುವ ಸಮಾರಂಭ. ಸೂಲಗಿತ್ತಿ ಮಗುವನ್ನು 'ಅಯ್' ಎಂಬ ಗಿಡ ಮೂಲಿಕೆ ಹಾಕಿ-ಕಾಯಿಸಿದ ನೀರಿನಿಂದ ದಕ್ಷತೆ ವಹಿಸಿ ಸ್ನಾನಮಾಡಿಸಿದಳು. ಈ ಬಳ್ಳಿ ಚರ್ಮರೋಗಕ್ಕೆ ಒಳ್ಳೇ ಔಷಧ. ಅನಂತರ ಮಗುವನ್ನು ಚೆನ್ನಾಗಿ

ಹೊಸ ಬಟ್ಟೆಯಲ್ಲಿ ಸುತ್ತಿ ಸೂಲಗಿತ್ತಿ ಮೂರನೆಯ ನಡುಮನೆಗೆ ಎತ್ತಿಕೊಂಡು ಹೋದಳು. ಅಲ್ಲಿ ಪೂರ್ವಜರ ಮಂದಿರದ ಮುಂದೆ ಧೂಪಹಾಕಿ, ಕೂಸನ್ನು ಕೈಯಲ್ಲಿ ಎತ್ತಿಕೊಂಡೇ ಸೂಲಗಿತ್ತಿ ಮೂರು ಸಲ ಕೂಸಿನ ಪರವಾಗಿ ತಾನು ವಂದಿಸಿದಳು. ಈ ಸಮಾರಂಭಕ್ಕೆ "ಷೀಸಾನ್" ಎಂದು ಹೆಸರು. ಆವೊತ್ತೇ ಭೋಜನ ಸಮಾರಂಭ. ಕೆಲವರು ಆಪ್ತರನ್ನು ಮಾತ್ರ ಊಟಕ್ಕೆ ಕರೆದಿದ್ದರು.

ಈ ಉತ್ಸವವಾದ ಮೇಲೆ ಬಾಣಂತಿಯ ಕೋಣೆಯೊಳಕ್ಕೆ ಮನೆಯ ಜನರು ಯಾರು ಬೇಕಾದರೂ ಹೋಗಬಹುದು. ಮಗುವಿಗೆ ನಾನು ಚಿಕ್ಕಪ್ಪ. ಆದ್ದರಿಂದ ನನ್ನನ್ನು ಪ್ರತ್ಯೇಕವಾಗಿ ಆಮಂತ್ರಿಸಿದರು. ಅತ್ತಿಗೆ ಮೆತ್ತನೆ ಗಾದಿಗೆ ಒರಗಿಕೊಂಡು ತುಂಬಾ ಸಂತೋಷದಿಂದ ನಗುತ್ತಿದ್ದಳು. ಮಗ್ಗುಲಲ್ಲಿ ಮಲಗಿದ್ದ ತನ್ನ ಮಗುವನ್ನು ತೋರಿಸಿದಳು; ನಾನು ಅದರ ಕೆನ್ನೆ ತಟ್ಟಿದೆ. ಏನೂ ಮಾತಾಡಲಿಲ್ಲ. "ಉಳಿದವರಿಗಿಂತ ಈ ಮಗುವನ್ನು ಹೆಚ್ಚು ಹಚ್ಚಿಕೊಂಡು ನಾನು ಪ್ರೀತಿಸಬೇಕು" ಎಂಬ ವಿಚಾರ ನನ್ನ ಮನದಲ್ಲಿ ಸುಳಿಯಿತು. ನಾನು ಆ ಮಗುವಿನ ಸ್ವಂತ ಚಿಕ್ಕಪ್ಪ! ಅತ್ತಿಗೆಯ ಕೋಣೆಯಲ್ಲಿ ನಾಲ್ಕು ಜನ ಹಿರಿಯರು ಕುಳಿತಿದ್ದರು. ಅವರು "ನೀನು ಆ ಮಗುವಿಗೆ ಏನು ಮಾಡಬಲ್ಲೆ" ಎಂದು ಕೇಳಿ ನನ್ನ ಉತ್ತರಕ್ಕಾಗಿ ಕಾದು ಕುಳಿತರು. ಸಾಮಾನ್ಯವಾಗಿ ಹಿರಿಯರೆದುರಿಗೆ ನಾನು ಮಾತಾಡುತ್ತಿರಲಿಲ್ಲ. ಆದರೂ ಈ ಸಂದರ್ಭದಲ್ಲಿ ಸುಮ್ಮನೆ ಇರದೆ "ಏನು ಬೇಕಾದ್ದನ್ನು ಮಾಡುತ್ತೇನೆ" ಎಂದು ಗಡಿಬಿಡಿಯಿಂದ ಹೇಳಿದೆ. ಅವರೆಲ್ಲರೂ ನಕ್ಕರು. ಕೂಡಲೇ ಆ ಕೋಣೆಯಿಂದ ಹೊರಗೆ ಹೋಗಬೇಕೆಂದೆನಿಸಿತು. ಆದರೆ ಬಾಣಂತಿಯನ್ನು ನೋಡಲು ಬಂದವರಿಗೆ ಪಾಯಸ ಕೊಟ್ಟು ಕಳಿಸುವುದು ನಮ್ಮ ಆಚಾರ. ಆ ಪಾಯಸ ಬಹಳ ರುಚಿಯಾಗಿತ್ತು. ಆದರೆ ಇಷ್ಟೊಂದು ಜನ ಕಣ್ಣುಬಿಟ್ಟು ನೋಡುವಾಗ ಕುಡಿಯಲೂ ನನಗೆ ನಾಚಿಕೆಯೆ.

ಅತ್ತಿಗೆ ಬಾಣಂತಿಯ ಕೋಣೆಬಿಟ್ಟು ಒಂದು ತಿಂಗಳು ಹೊರಗೆ ಬರಲಿಲ್ಲ. ಹೆಚ್ಚಾಗಿ ಒಳಗೇ ಇರುತ್ತಿದ್ದಳು. ದಿನಾಲೂ ಕೋಣೆಯ ಮುಂದಿನ ಒಳ ಅಂಗಳದಲ್ಲಿ ಸ್ವಲ್ಪ ತಿರುಗಾಡುತ್ತಿದ್ದಳು. ತಾನು ಮೈ ಕೈ ತುಂಬಿಕೊಂಡು ಪುಷ್ಟಳಾಗಿ ಮಗುವಿಗೆ ತುಂಬಾ ಮೊಲೆಹಾಲನ್ನು ಒದಗಿಸಬೇಕು ಎಂಬುದೊಂದೇ ಅವಳ ಯೋಚನೆ. ಸುದೈವದಿಂದ ಮಗುವಿಗೆ ಹಾಲು ಸರಿ

ಹೋಯಿತು. ಅವಳು ಬಸುರಿಯಾಗಿದ್ದಾಗ ಮನೆಯಲ್ಲಿ ಬಹಳ ಎಚ್ಚರಿಕೆ ವಹಿಸಿದ್ದರು. ಹಾಲುಬೀಳಲು ತಕ್ಕ ಪುಷ್ಟಿಕರ ಆಹಾರವನ್ನು ಕೊಡುತ್ತಿದ್ದರು. ಮಾಂಸಾಹಾರ, ಕೊಬ್ಬಿನ ಪದಾರ್ಥಗಳನ್ನ ಬಸುರಿಯರಿಗೆ ಕೊಡುತ್ತಿರಲಿಲ್ಲ. ತೀಕ್ಷ್ಣ ವಾಸನೆಯ ಪದಾರ್ಥಗಳನ್ನೂ ಹೆಚ್ಚು ಹುಳಿ-ಕಾರದ ಪದಾರ್ಥಗಳನ್ನೂ ಕೊಡುತ್ತಿರಲಿಲ್ಲ. ಮುಖ್ಯವಾಗಿ ಅವಳಿಗೆ ಕೊಡುವ ಆಹಾರವೆಲ್ಲ ತೀರ ಸಾತ್ವಿಕ, ಚೆನ್ನಾಗಿ ಬೇಯಿಸಿದ್ದು. ಅನ್ನ ಕೊಡುತ್ತಿರಲಿಲ್ಲ. ಗಂಜಿಯನ್ನು ಕೊಡುತ್ತಿದ್ದರು. ಅಜ್ಜಿ, ದೊಡ್ಡಪ್ಪ ಬಾಣಂತಿಯ ಪಥ್ಯದ ಬಗ್ಗೆ ಬಹಳ ಜಾಗರೂಕತೆ ವಹಿಸಿದ್ದರು. ಅತ್ತಿಗೆಗೆ ಹಸಿವು ಸರಿಯಾಗಿ ಇರಲಿಕ್ಕಿಲ್ಲವೆಂದು ಅಜ್ಜಿ ದಿನಾಲೂ ಹೊಸ ಹೊಸ ಅಡಿಗೆ ಮಾಡಿಸಿ ಕೊಡುತ್ತಿರಬೇಕು. ಬಾಣಂತಿಯಾಗಿದ್ದಾಗ ಕೆಲದಿನ ಗಳಂತೂ ಅತ್ತಿಗೆಯ ಆಹಾರವೇ ಮುಖ್ಯ ವಿಷಯ.

ಮಗುವಿಗೆ ಒಂದು ತಿಂಗಳು ತುಂಬುವ ವೇಳೆಗೆ ತಾಯಿ ಮೊದಲಿನಂತೆ ಮನೆಯಲ್ಲಿ ತಿರುಗಾಡತೊಡಗಿದಳು. ಅಂದೇ ಮಗುವಿಗೆ ತಿಂಗಳು ತುಂಬಿದ ಹಬ್ಬ (ಮನ್–ಯೋ), ಉಡುಗೊರೆ ಕಳಿಸಿದ್ದವರಿಗೆಲ್ಲ ಭಾರಿ ಔತಣ. ಗಂಡಸರಿಗೂ ಔತಣ ಕೊಟ್ಟರೂ ಯಾರೂ ಬರುತ್ತಿರಲಿಲ್ಲ. ಇದು ಬರೀ ಹೆಂಗಸರಿಗಾಗಿ ಮಾತ್ರ. ನಾನಾಗಲೇ ದೊಡ್ಡವನಾದುದರಿಂದ ಹೆಂಗಸರ ನಡುವೆ ಸೇರಿಕೊಳ್ಳಲು ನನಗೆ ತುಂಬಾ ಸಂಕೋಚವಾಯಿತು. ಸೇರಿಕೊಳ್ಳಲಿಲ್ಲ. ಅಲ್ಲಿ ಏನೇನು ನಡೆಯಿತೋ ನನಗೆ ಗೊತ್ತಿಲ್ಲವಾದರೂ ಆಗಾಗ ಎಲ್ಲರೂ ತುಂಬಾ ನಗುತ್ತಿದ್ದುದ್ದು ನಮಗೆ ಕೇಳಬರುತಿತ್ತು ಎಲ್ಲರೂ ಸಂತೋಷದಲ್ಲಿ ಸಂಭ್ರಮದಲ್ಲಿ ಇದ್ದರು. ಅಣ್ಣನ ಅತ್ತೆ ಬದುಕಿದ್ದರೆ ಅವರೇ ಇಂದಿನ ಮುಖ್ಯ ಅತಿಥಿ ಆಗುತ್ತಿದ್ದರು. ಅವರ ಬದಲು ಬೇರೊಬ್ಬ ಅತ್ತೆಯನ್ನು ಕರೆದಿದ್ದರು.

ಇದಾದ ಮೇಲೆ ಅಣ್ಣನ ಮಗನ ದೊಡ್ಡ ಹಬ್ಬ ಹುಟ್ಟಿದ ಹಬ್ಬ. ಐವತ್ತುವರ್ಷದವರಾಗುವ ವರೆಗೆ ಹುಟ್ಟಿದ ಹಬ್ಬಕ್ಕೆ ಕಾಣಿಕೆ ಕೊಡುವ ಸಂಪ್ರದಾಯ ನಮ್ಮಲ್ಲಿ ಇಲ್ಲ. ವರ್ಷದ ಹುಟ್ಟಿದ ಹಬ್ಬ, ಐವತ್ತರ ಮೇಲಿನ ಹುಟ್ಟಿದ ಹಬ್ಬಗಳು, ಇವನ್ನು ಮಾತ್ರ ನಾವು ವಿಜೃಂಭಣೆಯಿಂದ ಜರುಗಿಸುತ್ತೇವೆ. ಈ ಕಾಲಕ್ಕೆ ಮಗು ಹುಟ್ಟಿದ ದಿನ ಬಂದಷ್ಟೇ ಕಾಣಿಕೆ ಬರುತ್ತವೆ. ಅಣ್ಣನ ಮಗನ ಮೊದಲನೆ ವರ್ಷದ ಹುಟ್ಟಿದ ಹಬ್ಬ ಬರುವುದಕ್ಕೆ ಮೊದಲೇ ಮನೆಯ ಜನರೆಲ್ಲ ಅವನಿಗಾಗಿ ಉಡುಗೊರೆಯ ವಸ್ತುಗಳನ್ನು ತಯಾರಿಸಹತ್ತಿ

ದ್ದರು. ಅಕ್ಕನಂತೂ ಎಲ್ಲರಿಗಿಂತ ಹೆಚ್ಚಾಗಿ ಕಾಣಿಕೆ ಕೊಡಬೇಕಾಗಿತ್ತು. ಅಂದು ಅತ್ತಿಗೆಯ ಅತ್ತೆಯ ಮನೆಯಿಂದಲೂ ತುಂಬಾ ಉಡುಗೊರೆ ಬಂದವು. ಇದರಲ್ಲಿ ತಿನ್ನುವ ಪದಾರ್ಥಗಳು ಇರಲಿಲ್ಲ. ಮಗುವಿಗೆ ಕೆಂಪು ಹಸಿರು ಬಣ್ಣದ ಕಸೂತಿ ಹಾಕಿದ್ದ ರೇಷ್ಮೆ ಬಟ್ಟೆ ತೊಡಿಸಿದ್ದರು. ಕೂದಲು ಕತ್ತರಿಸಿ ಜುಲುಪೆ ಬಿಟ್ಟಿದ್ದರು. ಅದಕ್ಕೊಂದು ಕೆಂಪು ರಿಬ್ಬನ್. ಕಾಲಿಗೆ ಅಕ್ಕಮಾಡಿದ ಹುಲಿಯ ಮುಖದ ಕಸೂತಿಯ ಬೂಟ್ಸು ಹಾಕಿದ್ದರು. ಪೂರ್ವಜರ ಮಂದಿರದ ಮುಂದೆ ಧೂಪಹಾಕಿ ಆದಮೇಲೆ, ಅತ್ತಿಗೆ ಮಗುವನ್ನು ಎತ್ತಿಕೊಂಡು ಪೂರ್ವ ಜರಿಗೆ ನಮಸ್ಕಾರ ಮಾಡಿಸಿದಳು. ತಾನೂ ಮಾಡಿದಳು. ಆಮೇಲೆ ಒಂದು ದುಂಡನ್ನ ಮೇಜಿನ ಮೇಲೆ ಅವನ ಓದಿಗೆ ಸಂಬಂಧಿಸಿದ ಅನೇಕ ವಸ್ತುಗಳ ಮಧ್ಯೆ ಮಲಗಿಸಿದರು. ಅವುಗಳಲ್ಲಿ ಯಾವುದಾದರೊಂದನ್ನು ಮಗು ಆರಿಸಿ ತೆಗೆದುಕೊಳ್ಳಬೇಕು. ಮೊದಲಿಗೆ ಮಗುವಿಗೆ ಇದು ಅರ್ಥವಾದಂತೆ ತೋರ ಲಿಲ್ಲ. ಸುಮ್ಮನೆ ನಮ್ಮನ್ನೆಲ್ಲ ನೋಡಿ ನಗಹತ್ತಿತ್ತು. ಆ ಮುಗ್ಧ ನಗೆ ಎಷ್ಟು ಮೋಹಕವಾಗಿತ್ತೋ ನಾನು ಬಣ್ಣಿಸಲಾರೆ. ಮೊದಲನೆ ವರ್ಷದ ಕೊನೆಯ ಈ ಹಬ್ಬಕ್ಕೆ ಚೌ ಚೌ ಎಂದು ಹೆಸರು.

ನಾವೆಲ್ಲರೂ ಮಗು ಯಾವುದನ್ನು ತೆಗೆದುಕೊಳ್ಳುತ್ತದೆಯೋ ಎಂದು ನೋಡುತ್ತಿದ್ದೆವು. ಏನು ಮಾಡಬೇಕೋ ಅದಕ್ಕೆ ತಿಳಿಯಲಿಲ್ಲ. ಹತ್ತಿರದಲ್ಲಿದ್ದ ಒಂದನ್ನು ಹಿಡಿದುಕೊಳ್ಳಲು ಹೋದ. ಅಷ್ಟರಲ್ಲೇ ಕೈಹಿಂದಕ್ಕೆಳೆದುಕೊಂಡ. ಎಲ್ಲರೂ ನಕ್ಕರು. ಕೊನೆಗೆ ಅಷ್ಟೇನೂ ಹತ್ತಿರದಲ್ಲಿಲ್ಲದ ವನಸ್ಪತಿಯೊಂದನ್ನು ತೆಗೆದುಕೊಂಡ. ಇದನ್ನು ಕಂಡು ಅಜ್ಜಿ 'ಮಗು ಡಾಕ್ಟರನಾಗುತ್ತಾನೆ' ಎಂದಳು. ನಮ್ಮ ಮೂರನೆಯ ದೊಡ್ಡಪ್ಪ ವೈದ್ಯ. ಆದುದರಿಂದ ಇದನ್ನು ಕಂಡು ತುಂಬ ಮೆಚ್ಚಿ ಮಗುವನ್ನು ಕೊಂಡಾಡಿದ.

ಈಗ ಮಗು ಬೆಳೆದು ದೊಡ್ಡದಾಗಿದೆ. ಆದರೆ ಡಾಕ್ಟರ್ ಆಗುವ ವಿಚಾರ ಇದ್ದಂತೆ ಕಾಣುವದಿಲ್ಲ. ಅಂಣನೇನೋ ಹೋದ ವರ್ಷ ತಾನು ತೀರಿ ಕೊಳ್ಳುವ ಮೊದಲು ಮಗನಿಗೆ ಡಾಕ್ಟರ್ ಆಗಲು ಹೇಳಿ ತೀರಿಕೊಂಡ. ಹೀಗೆ ಹೇಳುವಾಗ ಅಂಣನಿಗೆ ತನ್ನ ಮಗನ ಮೊದಲನೆ ಹುಟ್ಟಿದ ಹಬ್ಬದ ಈ ಪ್ರಸಂಗ ನೆನಪಿತ್ತು ಎಂದು ಹೇಳಲಾರೆ.

ಅಂಣನ ಮಗು ಚಿಕ್ಕವನಿದ್ದಾಗ, ಬೆಳೆದು ದೊಡ್ಡವನಾಗುತ್ತಿರವಾಗ, ನನ್ನ ಅಂಣ ನನಗೆ ಮಾಡಿದ್ದಕ್ಕಿಂತ ಹೆಚ್ಚು ನಾನು ಅಂಣನ ಮಗನಿಗೆ ಮಾಡಿದೆ ಎಂದು ಹೇಳಬಹುದು. ನನ್ನ ಅತ್ತಿಗೆಯೂ ಮಗುವಿನ ದಾಯಿಯೂ ನನ್ನನ್ನು ತುಂಬ ಪ್ರೀತಿಸುತ್ತಿದ್ದರು. ನಾನೂ ಅವರನ್ನು ಪ್ರೀತಿಸುತ್ತಿದ್ದೆ. ನಾನು ಶಾಲೆಯಿಂದ ಮರಳಿ ಮನೆಗೆ ಬಂದೊಡನೆ ಮಲಗಿದ್ದ ಕೂಸನ್ನು ನೋಡಿ. ಕೊಳ್ಳಲು ನನಗೆ ಹೇಳುತ್ತಿದ್ದರು ; ತಾವು ಇಬ್ಬರೂ ತುಸು ವಿಶ್ರಮಿಸುತ್ತಿದ್ದರು. ನಾನಿದಕ್ಕೆ ಬೇಡ ಎನ್ನುತ್ತಿರಲಿಲ್ಲ ; ಮಲಗಿದ್ದ ಮಗುವಿನ ಬಳಿ ಕುಳಿತು ನಮ್ಮ ಭಾಷೆಯ ಪ್ರಸಿದ್ಧ ಕಾದಂಬರಿಗಳನ್ನು ಓದುತ್ತಿದ್ದೆ.

ನಮ್ಮ ಮನೆಯಲ್ಲಿ ಗಂಡು-ಹೆಣ್ಣು ಮಕ್ಕಳನ್ನು ಬೆಳೆಸುವುದರಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲ. ಎಲ್ಲರೂ ಹತ್ತು ವರ್ಷ ಆಗುವವರೆಗೂ ಒಂದೇ ರೀತಿ ನೋಡಿಕೊಳ್ಳುತ್ತಿದ್ದರು. ನನ್ನ ಮೂರನೆಯ-ಕಕ್ಕನ ಮಗ-ಅಂಣ ನಿಗೆ ಹೆಂಣು ಮಗು. ಅದನ್ನು ಕೂಡ ಇದೇ ರೀತಿ ನೋಡಲಾಯಿತು. ಇದೇ ರೀತಿ ಅವಳ ಮೊದಲಿನ ಹುಟ್ಟು ಹಬ್ಬವನ್ನು ಆಚರಿಸಲಾಯಿತು ; ಅಂದು ಅವಳು ತೆಗೆದು ಕೊಂಡ ವಸ್ತು ಏನು ಕೆಲಸ ಮಾಡುತ್ತಾಳೆಂಬುದನ್ನು ಸೂಚಿಸಿತು.

ಇದೆಲ್ಲ ಇಪ್ಪತ್ತು ವರ್ಷಗಳ ಹಿಂದಿನ ಮಾತು. ಅಂದಿನಿಂದ ಈ ವರೆಗೆ ಚೀನಾದೇಶದಲ್ಲಿ ವಿಲಕ್ಷಣ ಬದಲಾವಣೆಯಾಗಿದೆ. ನಮ್ಮ ಮನೆಯ ಹೆಣ್ಣು ಮಕ್ಕಳೆಲ್ಲ ಚಿಕ್ಕಮಕ್ಕಳಿಗೆ ಉಡುಗೊರೆ ಕೊಡಲು ಪೇಟೆಯಿಂದ ಸಾಮಾನು ಕೊಂಡು ತರುತ್ತಾರೆ. ಹಿಂದಿನಂತೆ ಮನೆಯಲ್ಲಿ ಮಾಡಿಕೊಳ್ಳುವುದಿಲ್ಲ. ನನ್ನ ಆಪ್ತರಲ್ಲಿ ಒಬ್ಬಳು ಹೆರಿಗೆಯ ಕಾಲಕ್ಕೆ ಒಂದೇ ವಾರ ಆಸ್ಪತ್ರೆಯಲ್ಲಿ ಇದ್ದು ಬಂದು ಮರುದಿನವೇ "ಮಹ-ಶಿವಾಂಗ" ಆಟ ಆಡಿದಳೆಂದು ಕೇಳಿದ್ದೇನೆ. ನಾನೇ ಹಳೇ ತರದ ಮನುಷ್ಯನಿರಬಹುದು ! ಏಕೆಂದರೆ ಈ ಬದಲಾವಣೆಗೆ ನನ್ನ ಒಪ್ಪಿಗೆ ಇಲ್ಲ. ನನ್ನ ಕಾಲದಲ್ಲಿ ಹುಟು-ಮದುವೆ-ಸಾವುಗಳ ಕಾಲಕ್ಕೆ ಅತಿ ಯಾಗಿ ಅಬ್ಬರ ಮಾಡುತ್ತಿದ್ದಂತೆ ಈಗ ಏನೂ ಮಾಡದೆ ಇರುವುದು ಕಂಡು ಬರುತ್ತಿದೆ.

---

# ೨೦. ಹೂವಿನ ದೇವತೆಯ ಹುಟ್ಟಿದ ಹಬ್ಬ

ಪ್ರತಿ ವರ್ಷ ಎರಡನೆ ತಿಂಗಳ ಎರಡನೆ ದಿನ, ಹನ್ನೆರಡನೆ ದಿನ, ಹದಿನೈದನೆಯ ದಿನ ಹೂವಿನ ದೇವತೆಯ ಹುಟ್ಟಿದ ಹಬ್ಬವನ್ನು ಆಚರಿಸುವ ಪದ್ಧತಿ ಚೀನಾ ದೇಶದಲ್ಲಿ ಟ್ಯಾಂಗ ಅರಸರ ಕಾಲದಿಂದಲೂ ನಡೆದು ಬಂದಿದೆ. ಮೊದಲು, ತೀರ ಹಿಂದೆ, ಹದಿನೈದನೆಯ ದಿನವೇ ಆಚರಿಸುತ್ತಿದ್ದರು. ಆದರೆ ಇತ್ತೀಚೆಗೆ ಹನ್ನೊಂದನೆಯ ದಿನ ಆಚರಿಸುವ ರೂಢಿಯೂ ಬಂದಿದೆ. ಕಿಯು-ಕಿಯಾಂಗಿನಲ್ಲಿ ಈ ಹಬ್ಬವನ್ನು ಆಚರಿಸುವುದಿಲ್ಲ; ಬಹುಶಃ ನಮ್ಮ ಊರಿನಲ್ಲಿ ಹೇಳಿಕೊಳ್ಳುವಂತಹ ಹಸರಾದ ತೋಟಗಳೂ ಇಲ್ಲದಿರುವುದು ಕಾರಣವಿರಬಹುದು. ನಮ್ಮ ಮನೆಯ ತೋಟ ಹೆಸರಿಗೆ ಮಾತ್ರ. ಅದರಲ್ಲಿ ತರತರದ ಹೂಗಳನ್ನು ಬೆಳೆಸಿಲ್ಲ; ಹೂಗಳ ಸುಂದರ ಲತಾ ಮಂಟಪಗಳನ್ನೂ ರಚಿಸಿಲ್ಲ, ದೊಡ್ಡ ದೊಡ್ಡ ವಿಹಾರ ಮಂದಿರಗಳನ್ನೂ ಮಾಡಿಲ್ಲ; ಎತ್ತರದ ವಿಶಾಲವಾದ ಕಟ್ಟೆಗಳನ್ನೂ ಕಟ್ಟಿಲ್ಲ. ನೈಸರ್ಗಿಕವಾಗಿ ಅಲ್ಲಿ ದೊಡ್ಡ ದೊಡ್ಡ ಬಂಡೆ ಕಲ್ಲುಗಳೂ ಇಲ್ಲ. ಸುತ್ತುಮುತ್ತಲಿನ ಜನ ಆ ದಿನ ಅಂತಹದೊಂದು ಉತ್ಸವವನ್ನೇನೋ ಮಾಡುತ್ತಾರೆ. ಆದರೆ ಅದಕ್ಕೆ ಹೂವಿನ ದೇವತೆಯ ಹುಟ್ಟಿದ ಹಬ್ಬಕ್ಕೂ ಯಾವ ಸಂಬಂಧವೂ ಇಲ್ಲ. ಒಂದು ಸಲ ಸೂಚೌದಿಂದ ನಮ್ಮ ಆಪ್ತಳೊಬ್ಬಳು ನಮ್ಮಲ್ಲಿಗೆ ಬಂದಾಗ ನಾವೂ ಈ ಹಬ್ಬವನ್ನು ಆಚರಿಸಿದೆವು.

ಸೂಚೌ ಪಟ್ಟಣ ಹೂವಿನ ತೋಟಗಳಿಗೆ ಚೀನಾದೇಶದಲ್ಲೆಲ್ಲ ಹೆಸರು ಪಡೆದಿದೆ. ದೇಶದ ಸುಪ್ರಸಿದ್ಧ ತೋಟಗಳೆಲ್ಲಾ ಒಂದು ಕಾಲಕ್ಕೆ ಅಲ್ಲಿದ್ದವು. ಹೂ ಬೆಳೆಯಿಸುವ ವಿದ್ಯೆ-ಶಾಸ್ತ್ರಗಳಲ್ಲಿ ಆ ಊರಿನ ಜನರಿಗೆ ತುಂಬಾ ಅಭಿರುಚಿ, ಶ್ರದ್ಧೆ. ನಮ್ಮ ಆಪ್ತ ಅಲ್ಲಿಯೇ ಹುಟ್ಟಿ ಬೆಳೆದವಳು. ಅವಳಿಗೆ ಎಲ್ಲಾ ಹೂಗಳ ಇತಿಹಾಸವೂ ಗೊತ್ತು. ಅವಳು ಯಾಂಗ್‌ಟ್ಸೀ ನದಿಯನ್ನು ದಾಟಿ

ಉತ್ತರಕ್ಕೆ ಬಂದಿದ್ದುದು ಅದೇ ಮೊದಲನೆ ಸಲ. ಅಂತೇ ತನ್ನ ಊರಿನ ಹಾಗೂ ಈ ಊರಿನ ಆಚಾರ ವ್ಯವಹಾರಗಳಲ್ಲಿ ಕಂಡು ಬರುವ ವ್ಯತ್ಯಾಸವನ್ನು ಚೆನ್ನಾಗಿ ಗಮನಿಸುತ್ತಿದ್ದಳು. ಅವಳ ತಂದೆ-ತಾಯಿ ಅವಳನ್ನು ನಮ್ಮಲ್ಲಿ ಬೇಸಿಗೆಯುವರೆಗೂ ಇದ್ದು ಹೋಗಲು ಕರೆತಂದಿದ್ದರು. ಎಲ್ಲರೂ ಸೇರಿ ಸುಪ್ರಸಿದ್ಧ ಲೂ ಪರ್ವತವನ್ನು ನೋಡಿ ಹೋಗಬೇಕೆಂದೂ ಬಂದಿದ್ದರು ಮದುವೆಗೆ ಮೊದಲೇ ಅವಳು ಇದನ್ನೆಲ್ಲ ನೋಡಬೇಕೆಂದು ಅವರ ಬಯಕೆ. ಅವಳು ನನ್ನ ಅಕ್ಕನ ಓರಿಗೆಯುವಳು.

ಸೂಚೌ ಭಾಗದ ಹುಡುಗಿಯರು ಚೀನಾದೇಶದಲ್ಲೆಲ್ಲ ಸುಂದರಿಯರು ಎಂದು ನಾವು ಚಿಕ್ಕಂದಿನಿಂದ ಕೇಳಿದ್ದೆವು ಈ ನಮ್ಮ ಆಪ್ತ ಅತಿಥಿಯೂ ಈ ಮಾತನ್ನು ಸುಳ್ಳು ಮಾಡುವಂತಿರಲಿಲ್ಲ ಅವಳು ತನ್ನ ಮುಗುಳುನಗೆಯೊಂದರಿಂದಲೇ ಗಂಡುಹುಡುಗರಾದ ನಮ್ಮನ್ನೆಲ್ಲ ಸೆರೆ ಹಿಡಿದುಬಿಟ್ಟಿದ್ದಳು. ಸದಾ ಅವಳ ಸುತ್ತಲೂ ನಮ್ಮ ಹುಡುಗಿಯರು ಮುತ್ತಿ ಕೊಂಡು, ಅಂದ ಚೆಂದವಾಗಿ ಹೆಳಲು ಹಾಕಿಕೊಳ್ಳುವುದು ಹೇಗೆ? ತೀರ ಆಧುನಿಕ ರೀತಿಯಲ್ಲಿ ಬಟ್ಟೆ ತೊಡುವುದು ಹೇಗೆ? ಹೂಗಳಿಂದ ತರ ತರದ ಚಿತ್ತಾಕರ್ಷಕ ಆಭರಣಗಳನ್ನು ಹೇಗೆ ಮಾಡಿಕೊಳ್ಳುವುದು ? ಮೊದಲಾದ ಎಲ್ಲ ವಿಷಯಗಳನ್ನೂ ಅವಳನ್ನು ಕೇಳಿ ತಿಳಿದುಕೊಳ್ಳಲು ತವಕ ಪಡುತ್ತಿದ್ದರು ಒಂದು ದಿನ ಮಧ್ಯಾಹ್ನ-ಅವಳು "ಇಂದು ಹೂವಿನ ದೇವತೆಯ ಹುಟ್ಟಿದ ದಿನ, ನಾವು ಇದನ್ನು ಒಳ್ಳೇ ಸಂಭ್ರಮದಿಂದ ಆಚರಿಸೋಣ" ಎಂದಳು. ನಮಗೂ ಈ ವಿಚಾರ ತುಂಬಾ ಸೊಗಸಿನದು ಎಂದು ತೋರಿತು. ಎಲ್ಲರೂ ಸೇರಿ, ಇದಕ್ಕೆ ಅಜ್ಜಿಯನ್ನು ಒಪ್ಪಿಸಿ ಅಪ್ಪಣೆ ಪಡೆದುಕೊಂಡು ಬರಲು ನನ್ನನ್ನು ಕಳಿಸಿಕೊಟ್ಟರು. ಮನೆಗೆ ಬಂದಿರುವ ಆಪ್ತಳ ಮನಸ್ಸು ನೋಯಿಸಬಾರದೆಂದು ಅಜ್ಜಿ ಖಂಡಿತವಾಗಿ ಇದಕ್ಕೆ ಒಪ್ಪಿಕೊಳ್ಳುವಳೆಂದು ನಾನು ಮೊದಲೇ ಭಾವಿಸಿದ್ದೆ. ಆಗಲೇ ಆ ತಿಂಗಳ ಹನ್ನೆರಡನೆಯ ದಿನ. ಆವತ್ತೇ ಹಬ್ಬಮಾಡಲು ತಕ್ಕ ಸಿದ್ಧತೆಗೆ ಸಮಯವಿಲ್ಲೆಂದು ಮೂರುದಿನ ಕಳೆದು ಹದಿನೈದನೆಯ ದಿನ ಹಬ್ಬಮಾಡೋಣವೆಂದು ತೀರ್ಮಾನಿಸಿದೆವು.

ಇದರ ಸನ್ನಾಹವೆಲ್ಲ-ಚಿಕ್ಕವರ ಮೇಲೆ-ಹೆಚ್ಚಾಗಿ ಹುಡುಗಿಯರ ಮೇಲೇ ಬಿತ್ತು. ನಾವು ಒಂಬತ್ತು ಜನ ಸಿದ್ಧತೆ ನಡೆಸಿದೆವು. ಹುಡುಗಿಯರು ಮನೆ

ಯಲ್ಲಿ ಉಪಯೋಗಕ್ಕೆ ಬಾರದೆ ಬಿದ್ದಿದ್ದ ರೇಷ್ಮೆ ಬಟ್ಟೆಯ ತುಂಡುಗಳನ್ನು ತಂದು ಕೊಟ್ಟರು ; ನಾವು ಹುಡುಗರು ಗಿಡ ಹತ್ತಿ ಟೊಂಗೆಗಳಿಗೆ ಅವುಗಳನ್ನು ಕಟ್ಟಿದೆವು. ಕೆಲವು ಹುಡುಗಿಯರಿಗೆ ಕೆಳಕೆಳಗೆ ಇರುವ ಟೊಂಗೆಗಳಿಗೆ ಬಟ್ಟೆ ಕಟ್ಟಿ ನಮ್ಮ ಕೆಲಸದಲ್ಲಿ ನೆರವಾಗಲು ಸಾಧ್ಯವಾಯಿತು. ಹಣ್ಣಿನ ಗಿಡದ ತುಂಬೆಲ್ಲ ಹೂ ಬಿಟ್ಟಿತ್ತು. ಕೆಲವು ಗಿಡಕ್ಕೆ ಆಗ ತಾನೆ ಚಿಗುರೆಲೆ ಒಡೆದಿತ್ತು. ನಮ್ಮ ಸಿದ್ಧತೆ ಮುಗಿದಾಗ ತೋಟಕ್ಕೆ ತೋಟವೇ ನಕ್ಕು ನಲಿದಾಡುವಂತೆ ಅರಳಿ ಕಳೆಗೊಂಡಿತ್ತು.

ತೋಟದಲ್ಲಿ ಒಂದು ಸಣ್ಣ ಮಂಟಪ ಹಾಕಿದೆವು. ಉದ್ದನೆಯ ಒಂದು ಮೇಜನ್ನು ಅದರಲ್ಲಿ ಇರಿಸಿದೆವು ನಮ್ಮಲ್ಲಿಯ ಹಿರಿಯ ಹುಡುಗನೊಬ್ಬ ಕೆಂಪು ಕಾಗದದ ಒಂದು ಪಟ್ಟಿಯ ಮೇಲೆ "ಹೂವಿನ ದೇವತೆಯ ಸಿಂಹಾಸನ" ಎಂದು ಬರೆದ. ಬೇರೆ ಚಿಕ್ಕ ಹನ್ನೆರಡು ಕಾಗದದ ತುಂಡುಗಳ ಮೇಲೆ ಹನ್ನೆರಡು ತಿಂಗಳಲ್ಲಿ ಅರಳುವ ಬೇರೆ ಬೇರೆ ಹೂಗಳ ಹನ್ನೆರಡು ದೇವತೆಗಳ ಹೆಸರುಗಳನ್ನು ಬರೆಯಲಾಯಿತು. "ಲಿಯು ಮೆಂಗ್-ಮಿ" ಪ್ರುನಸ್ ಪುಷ್ಪದ ದೇವ (ಮೊದಲನೆಯ ತಿಂಗಳು), "ಯಂಗ್ ಯು-ಹು ಆನ್" ಏಪ್ರಿಕಾಟ್ ಹೂಗಳ ದೇವತೆ-(ಎರಡನೆಯ ತಿಂಗಳು), "ತಿಹು" ಪೀಚ್ ಹೂವಿನ ದೇವ-(ಮೂರನೆಯ ತಿಂಗಳು), "ಚಾಂಗ್ ಲಿಹು ಆ" ಗುಲಾಬಿಯ ದೇವತೆ (ನಾಲ್ಕನೆಯ ತಿಂಗಳು), " ಚಂಗ ಕು " ದಾಳಿಂಬಹೂವಿನ ದೇವತೆ-(ಐದನೆಯ ತಿಂಗಳು), "ಹ್ಸಿ ಷಿ" ಕಮಲದ ಹೂವಿನ ದೇವತೆ (ಆರನೆಯ ತಿಂಗಳು), "ಶಿ-ತ್ಸಂಗ" ಬಾಲ್ಸಮ್ ಹೂವಿನ ದೇವ (ಏಳನೆಯ ತಿಂಗಳು), "ಲೂ ಹ ಚೂ" ಲಾರೆಲ್ ಹೂವಿನ ದೇವತೆ (ಎಂಟನೆಯ ತಿಂಗಳು), "ತಾ ಓ ಚಿ ಎನ್" ಕ್ರೆಸೆಂಥಮುಮ್ ಹೂಗಳ ದೇವ (ಒಂಬತ್ತನೆಯ ತಿಂಗಳು),ಹಿಸ್ಪ್ ಹ್ ಸು-ಚಿಯೂ" ಮಿಮೋಸಾ ಹೂಗಳ ದೇವತೆ-(ಹತ್ತನೆಯ ತಿಂಗಳು,) 'ಪೊ ಚು' ಕೆಮೆಲಿಯಾ ಓಲಿಪೇರಾ ಹೂಗಳ ದೇವ (ಹನ್ನೊಂದನೆಯ ತಿಂಗಳು), "ಲಾಓ-ಲಿಂಗ-ಪೋ" ಅಥವಾ "ಓಲ್ಡ ಮ್ಯಾಡಮ್ ಯಾಂಗ" ವಿಂಟರ್ ಪ್ಲಮ್ ಹೂಗಳ ದೇವತೆ (ಹನ್ನೆರಡನೆಯ ತಿಂಗಳು). ಈ ದೇವ ದೇವತೆಗಳ ಲಿಂಗ ಭೇದ ತುಂಬ ವಿಸ್ಮಯ ಕಾರಕ. ಚೈನಾ ಸಾಹಿತ್ಯದಲ್ಲಿ ಈ ಹೂವಿನ ದೇವತೆಗಳ ಹುಟ್ಟಿನ ಬಗ್ಗೆ ಹೀಗೆ ಇದೆ. 'ಒಂದೊಂದು ಬಗೆಯ

ಹೂವನ್ನು ಅತಿಶಯವಾಗಿ ಪ್ರೀತಿಸಿದಂಥವರು ಸತ್ತ ಮೇಲೆ ತಾವು ಪ್ರೀತಿಸಿದ ಹೂವಿನ ದೇವ ದೇವತೆಯಾಗಿ ಆ ತಿಂಗಳಲ್ಲಿ ರೂಪಾಂತರ ಹೊಂದುತ್ತಾರೆ.

ನಮ್ಮ ಬಳಗದ ಆ ಹುಡುಗಿ ಈ ಹನ್ನೆರಡು ಬಣ್ಣದ ಕಾಗದದ ತುಂಡುಗಳನ್ನೂ ಒಂದು ಮೇಜಿನ ಮೇಲೆ ಅಂದವಾಗಿ ಕಾಣುವಂತೆ ಇರಿಸಿದಳು. ಎಲ್ಲಾ ಹೂಗಳ ದೇವತೆ ಎಂದು ಬರೆದ ಆ ದೊಡ್ಡ ಕಾಗದವನ್ನು ಮಧ್ಯೆ ದೊಡ್ಡದೊಂದು ಮೇಜಿನ ಮೇಲೆ ಇರಿಸಿದಳು. ಅದರ ಸುತ್ತಲೂ ಉಳಿದ ಹನ್ನೆರಡು ದೇವ-ದೇವತೆಗಳ ಹೆಸರಿನ ಕಾಗದಗಳನ್ನು ಇರಿಸಲಾಯಿತು. ಪ್ರತಿಯೊಂದು ಕಾಗದದ ಮುಂದೆಯೂ ಚಿಕ್ಕ ಚಿಕ್ಕ ಬಟ್ಟಲುಗಳಲ್ಲಿ ಹಣ್ಣನ್ನೂ ಸಿಹಿ ತಿಂಡಿಗಳನ್ನೂ ಇಟ್ಟಳು. ಧೂಪ ಹಾಕಿ, ಮದ್ದು ಸುಟ್ಟ ಮೇಲೆ ಅವಳು ಮೊಳಕಾಲೂರಿ ವಂದಿಸಿ ಏನೋ ಮಂತ್ರ ಹೇಳಿದಳು. ಈ ಮಂತ್ರ ನಮಗೆ ಸರಿಯಾಗಿ ಕೇಳಿಸಲಿಲ್ಲ. ನಾವೆಲ್ಲಾ ಅವಳಂತೆ ವಂದಿಸಿದೆವು. ತಿಳಿಯದಿದ್ದರೂ ಆ ಮಂತ್ರವನ್ನು ಗೊಣಗಿದೆವು. ಇದಾದ ಮೇಲೆ ಅವಳು ನಮ್ಮನ್ನು ತೋಟದೊಳಕ್ಕೆ ಕರೆದೊಯ್ದಳು. ಅಲ್ಲಿ ಅವಳು ಪ್ರತಿಯೊಂದು ಹೂವಿನ ಗಿಡಕ್ಕೂ ನಮಸ್ಕರಿಸಿದಳು-ನಮ್ಮಿಂದಲೂ ನಮಸ್ಕಾರ ಮಾಡಿಸಿದಳು. ಏನೋ ಹೇಳಿದಳು. ಸುಚೌ ಪ್ರದೇಶದಲ್ಲಿ ಮಾತಾಡುವಂತೆ-ಆ ಗಿಡಗಳೊಂದಿಗೆ ಅವಳು ಒಂದೆರಡು ಮಾತುಗಳನ್ನೂ ಆಡಿದಳು. ಅವು ಆ ಹೂವಿನ ದೇವ ದೇವತೆಗಳನ್ನು ಹೊಗಳುವ ಮಂತ್ರಗಳಂತೆ. ಏನೇ ಇರಲಿ, ನಾವೆಲ್ಲ ಈ ವಿಧಿ-ವಿಧಾನ ಮುಗಿಯುವ ವರೆಗೂ ಭಕ್ತಿಯಿಂದ ಮೌನವಾಗಿದ್ದೆವು.

ಉತ್ಸವ ಮುಗಿದ ಮೇಲೆ ನಾವು ತೋಟದಲ್ಲಿ ಚದುರಿದೆವು; ಮನ ಬಂದಂತೆ-ವಿಹರಿಸಿದೆವು. ನಾನು ಆ ಬಳಗದ ಹುಡುಗಿಯ ಜೊತೆಗೆ ಹೋದೆ. ಅವಳು ನನಗೆ ಈ ಕತೆ ಹೇಳಿದಳು.

'ಹೂಗಳ ದೇವತೆ ಸ್ವರ್ಗದಲ್ಲಿರುತ್ತಾಳೆ. ಬೇರೆ ಬೇರೆ ಹೂಗಳ ದೇವತೆಗಳ ಮೇಲೆ ಈಕೆಗೆ ಪೂರ್ಣ ಅಧಿಕಾರ. ಹೂ ಒಂದೊಂದೂ ಅರಳುವ ಕಾಲ ಬಂದಾಗ ಭೂಲೋಕಕ್ಕೆ ಹೋಗಿ ತೋಟಗಳಲ್ಲೆಲ್ಲಾ, ಹೂ ಅರಳುವಂತೆ ಮಾಡು ಎಂದು ಅವಳು ಆ ಹೂವಿನ ದೇವತೆಯನ್ನು ಕರೆದು ಹೇಳುತ್ತಾಳೆ. ಇದರಂತೆ ಉಳಿದ ದೇವ-ದೇವತೆಗಳಿಗೂ ಆಜ್ಞೆ ವಿಧಿಸುವಳು. ಆಯಾ ಕಾಲ

ದಲ್ಲಿ ಆಯಾ ಹೂಗಳು ಅರಳುವಂತೆ ನೋಡಿಕೊಳ್ಳುವುದು ಆ ದೇವತೆಯ ಕರ್ತವ್ಯ. ಇದರಲ್ಲೇನಾದರೂ ಹೆಚ್ಚು ಕಡಮೆಯಾದರೆ ಸ್ವರ್ಗದ ರಾಣಿಯರ ತಾಯಿ ಶಿಕ್ಷೆ ಕೊಡುತ್ತಾಳೆ. ಒಂದು ಸಲ ಸಾವಿರಾರು ದೇವತೆಗಳ ಜೊತೆಗೆ ಈ ಎಲ್ಲ ಹೂವಿನ ದೇವತೆ ರಾಣಿಯರ ತಾಯಿಯ ಹುಟ್ಟಿದ ಹಬ್ಬಕ್ಕೆ ಹೋಗಿದ್ದಳು. ಅವರೆಲ್ಲರನ್ನೂ ಹೂಗಳ ದೇವತೆಯನ್ನೂ ಕಂಡು ರಾಣಿಯರ ತಾಯಿಯೂ ಉಳಿದವರೂ ಹರ್ಷಗೊಂಡರು. ಎಲ್ಲರೂ ತುಂಬ ಸಂತೋಷದಲ್ಲಿದ್ದರು. ಈ ಸಮಯಕ್ಕೆ ಚಂದ್ರದೇವತೆ ತನ್ನ ಮದ್ಯದ ಬಟ್ಟಲನ್ನು ಎತ್ತಿಕೊಂಡು ಹೂಗಳ ದೇವತೆಯನ್ನು ಕುರಿತು "ಈ ಶುಭ ಸಮಯದಲ್ಲಿ ಎಲ್ಲ ಹೂಗಳೂ ಏಕ ಕಾಲಕ್ಕೆ ಈಗಲೇ ಅರಳಿದರೆ ಚೆನ್ನ" ಎಂದು ಹೇಳಿದಳು. "ಎಲ್ಲ ಹೂಗಳ ದೇವತೆ" ಅದನ್ನು ವಿರೋಧಿಸಿದಳು. "ಒಂದೊಂದು ಹೂವಿಗೂ ಅರಳುವ ಕಾಲ ಬೇರೆ ಬೇರೆ. ಈ ನಿಯಮವನ್ನು ಮುರಿಯಲು ಯಾರಿಗೂ ಸಾಧ್ಯವಿಲ್ಲ" ಎಂದು ಹೇಳಿದಳು. ಚಂದ್ರದೇವತೆಗೆ ಇದರಿಂದ ಅಸಂತೋಷವಾಯಿತು. ಅವಳು 'ರಾಜನಿಗೆ ಈ ರೀತಿ ಒಮ್ಮೆಲೇ ಹೂಗಳೆಲ್ಲಾ ಅರಳಬೇಕೆನಿಸಿದರೆ ಆಗ ಏನಾಗುತ್ತದೆ?' ಎಂದು ಕೇಳಿದಳು. ಅದಕ್ಕೆ ಎಲ್ಲ ಹೂಗಳ ರಾಣಿ ಯಾವ ಸಾಮ್ರಾಟನೂ ಈ ರೀತಿ ಧರ್ಮ ತಪ್ಪಿ ನಡೆಯಲಾರ ಎಂದು ಉತ್ತರ ಕೊಟ್ಟಳು. ಈ ವಾದ ಅವರಿಬ್ಬರಲ್ಲಿ ವೈಮನಸ್ಸನ್ನುಂಟು ಮಾಡಿತು. ಎಲ್ಲ ಹೂಗಳ ದೇವತೆಗೆ ತಾನು ಸ್ವರ್ಗದಲ್ಲಿದ್ದರೂ ತನ್ನ ಹೂಗಳೆಲ್ಲಾ ಭೂಲೋಕದಲ್ಲಿ ರಾಜರ ಆಶ್ರಯದಲ್ಲಿ ಬೆಳೆಯಬೇಕಲ್ಲವೆ ಎಂಬುದು ಗೊತ್ತು. ಮುಂದೆ ಕೆಲವು ಕಾಲ ಕಳೆದ ಮೇಲೆ ಅವಳ ಕಲ್ಪನೆಗೆ ಮೀರಿ ಚಂಡಿ–ಸಾಮ್ರಾಜ್ಞಿ "ವುಂ ತ್ಸಾಯಿ ತೀನ್" ಒಮ್ಮಿಂದೊಮ್ಮೆ ಕೊರೆಯುವ ಚಳಿಗಾಲದಲ್ಲಿ ಎಲ್ಲ ಹೂಗಳಿಗೂ ಅರಳಲು ಅಜ್ಞೆ ವಿಧಿಸಿದಳು. ರಾಣಿಯ ಆಜ್ಞೆಯನ್ನು ಪಾಲಿಸಲೇ ಬೇಕು. ಪ್ರತಿಯೊಂದು ಹೂವಿನ ದೇವ–ದೇವತೆಯೂ "ಎಲ್ಲ ಹೂಗಳ ರಾಣಿ"ಗೆ ಇದನ್ನು ತಿಳಿಸಿ ಅವಳ ಅನುಮತಿ ಪಡೆಯುವುದಕ್ಕೆ ಸಮಯವಿರಲಿಲ್ಲ. ಮರುದಿನ ಬೆಳಗ್ಗೆ ಎಲ್ಲ ಹೂಗಳ ರಾಣಿಯ ಆಜ್ಞೆ ಇಲ್ಲದೆಯೆ ಹೂಗಳೆಲ್ಲ ಒಮ್ಮೆಲೆ ಏಕಕಾಲಕ್ಕೆ ಅಕಾಲದಲ್ಲಿ ಅರಳಿದ್ದವು.

ತನ್ನ ಅರಮನೆಯ ತೋಟದಲ್ಲಿ ಹೂಗಳೆಲ್ಲ ತನ್ನ ಅಪ್ಪಣೆಯ ಪ್ರಕಾರ ಅರಳಿದುದನ್ನು ಕಂಡು ರಾಣಿಗೆ ಬಹಳ ಸಂತೋಷವಾಯಿತು. ಒಂದೇ ಒಂದು

ಹೂ ಮಾತ್ರ ಅರಳಿರಲಿಲ್ಲ. ಆ ಹೂವಿನ ಗಿಡ ಐದು ಸಾವಿರ ಇದ್ದವು ತೋಟದಲ್ಲಿ. ರಾಣಿ ಕುಪಿತಳಾಗಿ ಆ ಐದುಸಾವಿರ "ಪಿಯೋನಿ" ಗಿಡಗಳನ್ನೂ ಕಡಿದು ಸುಟ್ಟುಬಿಡಲು ಅಪ್ಪಣೆಮಾಡಿದಳು. ರಾಜಸೇವಕರು ಅದರಂತೆ ಆ ಗಿಡಗಳನ್ನೆಲ್ಲ ರಾಶಿ ಮಾಡಿ ಉರಿಹಚ್ಚಿದರು. ಆ ದೇವತೆಗೆ ಇದನ್ನು ತಡೆದುಕೊಳ್ಳುವುದು ಆಗಲಿಲ್ಲ. ಅರ್ಧ ಸುಟ್ಟಿದ್ದರೂ ಕೂಡ ಉಳಿದರ್ಧ ಗಿಡಗಳ ತುಂಬಾ ಆಗ ಹೂ ಅರಳುವಂತೆ ಈ ಹೂವಿನ ದೇವತೆ ಆಜ್ಞೆಮಾಡಿ ದಳು. ಅದರಂತೆ ಹೂಗಳು ಅರಳಿದವು ಒಂದೇ ಕಾಲದಲ್ಲಿ–ಎಂದರ ಅಕಾಲದಲ್ಲಿ ಎಲ್ಲ ಹೂ ಅರಳಿದವು. ಧರ್ಮಕ್ಕೆ ತಪ್ಪಿ ನಡೆದುದಕ್ಕೆ ತಕ್ಕ ಶಿಕ್ಷೆ 'ಎಲ್ಲ ಹೂಗಳ ದೇವತೆ'ಗೆ ಆಗಬೇಕಲ್ಲವೆ? ಸಾಲದ್ದಕ್ಕೆ ಚಂದ್ರದೇವತೆ ಇದ್ದುದನ್ನೂ ಇಲ್ಲದ್ದನ್ನೂ ಸೇರಿಸಿ ಚಾಡಿ ಹೇಳಿದಳು. ಅದರಿಂದ ಹೂಗಳ ದೇವತೆ ಭೂಲೋಕದಲ್ಲಿ ಸ್ತ್ರೀಯಾಗಿ ಹುಟ್ಟುವಂತೆ ಶಾಪಕೊಟ್ಟರು. ಎಂತಹ ಕಠಿಣ ಶಿಕ್ಷೆ! ಭೂಲೋಕದಲ್ಲಿ ಪುರುಷರಿಗೂ ಸ್ತ್ರೀಯರಿಗೂ ಇರುವ ದುಃಖದ ಕಲ್ಪನೆ ಸ್ವರ್ಗದಲ್ಲಿರುವವರಿಗೆ ಹೇಗೆ ತಿಳಿದು ಬಂದೀತು!'

ದೊಡ್ಡವನಾದ ಮೇಲೆ, ನಾನು ಚೈನಾ ಭಾಷೆಯ ಸುಪ್ರಸಿದ್ಧ ಕಾದಂಬರಿ 'ಚಿಂಗ್ ಹುವಾ ಯುವಾನ್'ದಲ್ಲಿ ಈ ಕತೆಯನ್ನು ಓದಿದೆ.

ಚೀನಾದೇಶದ ಜನರಿಗೆ ನಮಗೆ–ಇಡೀ ಜನಾಂಗಕ್ಕೇ–ಹೂವೆಂದರೆ ಬಹಳ ಪ್ರೀತಿ. ಚಿಕ್ಕತನದಲ್ಲಿ ನಾನು ಹೂವಿನ ಗಿಡಗಳನ್ನು ಬೆಳೆಸುವುದನ್ನು ಕಲಿಯಲಿಲ್ಲ. ಆದರೂ ಕೆಲವು ದಿನಗಳಲ್ಲೇ ಹೂವಿನ ಮೇಲೆ ಪ್ರೀತಿ ಹುಟ್ಟಿತು. ಅವು ನನ್ನ ಸುತ್ತಮುತ್ತ ಇಲ್ಲದ ದಿನಗಳೇ ನನ್ನ ನೆನಪಿನಲ್ಲಿ ಇಲ್ಲ. ದಿನದ ಬಳಕೆಯ ಎಲ್ಲ ವಸ್ತುಗಳೂ ಒಂದಿಲ್ಲೊಂದು ಹೂವಿನ ಆಕಾರವನ್ನೇ ತಾಳಿರ ಬೇಕು. ನನ್ನ ತಂದೆ ಹೂವಿನ ಚಿತ್ರ ಬಿಡಿಸುವ ಕಲೆಯಲ್ಲಿ ಸಿದ್ಧಹಸ್ತರು. ನನ್ನ ಮೂರನೆಯ ದೊಡ್ಡಪ್ಪ ಹೂ ಬೆಳೆಸುವ ಶಾಸ್ತ್ರವನ್ನು ಅಭ್ಯಾಸಮಾಡಿ ಅದರಲ್ಲಿ ಪ್ರಾವೀಣ್ಯತೆ ಪಡೆದಿದಾರೆ. ನಮ್ಮ ಮನೆಯ ಹೆಂಗಸರೆಲ್ಲ ಹಳ್ಳಿ ಯಿಂದ ಮಾರಲು ತಂದ ಎಲ್ಲ ಪ್ರಕಾರದ ಹೂಗಳನ್ನೂ ಕೊಂಡುಕೊಳ್ಳುತ್ತಾರೆ. ನನ್ನ ಸ್ವಂತ ಅಕ್ಕ, ಉಳಿದ ತಂಗಿಯರೂ ಸದಾ ಒಂದಿಲ್ಲೊಂದು ಹೂವಿನ ಗಿಡ ನೆಟ್ಟೇ ನೆಡುತ್ತಾರೆ. ಮಲ್ಲಿಗೆ, ಗುಲಾಬಿ ಇತ್ಯಾದಿ ಹೂಗಳನ್ನು ಸದಾ

ಮುಡಿದುಕೊಳ್ಳುತ್ತಾರೆ. ತಂದೆ ಸದಾ ಹೂಗಳನ್ನು ಅಂದಚಂದವಾಗಿ ಇರಿಸಲು ಬರುವ " ಹೂದಾನಿ "ಗಳನ್ನು ತಯಾರು ಮಾಡುತ್ತಾರೆ.

ಅಲತಿಗೆ ಜಾತಿಯ ಕೆಲವು ಹೂಗಳನ್ನು ಉಗುರುಗಳಿಗೆ ಬಣ್ಣ ಬಳಿಯಲು ಉಪಯೋಗಿಸುತ್ತಾರೆ. ಈ ಬಣ್ಣ ತಯಾರಿಸಲು ತುಂಬ ದಿನ ಬೇಕು. ಆದರೂ ಹುಡುಗಿಯರಿಗೆ ಬೇಸರ ಬರುವುದೇ ಇಲ್ಲ.

ಈ ಹೂಗಳು ಅರಳಿ ನಿಂತಾಗ ಅವನ್ನೂ ಎಲೆಗಳನ್ನೂ ಕೊಯ್ದು ತಂದು ಒಣಗಿಸುತ್ತಿದ್ದರು. ಒಣಗಿದ ಮೇಲೆ ಸಣ್ಣಗೆ ಹೆಚ್ಚಿ ಅದರಲ್ಲಿ ನೂರಕ್ಕೆ ಐದರಷ್ಟು ಹಳದಿ ತಂಬಾಕು, ಅದರಷ್ಟೇ ಸುಟ್ಟ ಸುಣ್ಣ ಕೂಡಿಸುತ್ತಾರೆ. ಅದನ್ನು ಖಲಬತ್ತಿನಲ್ಲಿ ಹಾಕಿ ನುಣ್ಣಗೆ ಅರೆಯುತ್ತಾರೆ. ಹೀಗೆ ಎಂಟು ಸಲ ಸಲ ಅದನ್ನು ಅರೆಯುತ್ತಾರೆ. ಮಲಗುವಾಗ ಇದನ್ನು ತಮ್ಮ ಉಗುರುಗಳಿಗೆ ಹಚ್ಚಿಕೊಳ್ಳುತ್ತಾರೆ.

ಮಾರನೆಯ ದಿನ ಬೆಳಗ್ಗೆ ಉಗುರುಗಳು ಕೆಂಪು ಬಣ್ಣಕ್ಕೆ ತಿರುಗಿರುತ್ತವೆ. ಹೀಗೆ ಮೇಲಿಂದ ಮೇಲೆ ಹಚ್ಚಿಕೊಂಡರೆ ಉಗುರುಗಳ ಬಣ್ಣ ದಟ್ಟವಾಗುತ್ತ ಹೋಗುತ್ತದೆ. ಈ ಬಣ್ಣ ಬಹಳ ಕಾಲ ಹೋಗುವುದೇ ಇಲ್ಲ. ಇದರಲ್ಲಿ ಎರಡು ಗುಣ ಇವೆ: ಬೆರಳಿನ ತುದಿಗೆ ಯಾವ ಚರ್ಮರೋಗವೂ ಇದರಿಂದ ಅಂಟುವದಿಲ್ಲವಂತೆ. ಹೊಟ್ಟೆಬೇನೆಯನ್ನು ಇದು ನಿವಾರಿಸುವುದಂತೆ. ಈ ಬಣ್ಣವನ್ನು ಅರೆಯಲು ಬಹಳ ಶ್ರಮ ಬೇಕು. ಅದಕ್ಕೆ ಫಲವಾಗಿ ಈ ಸುಗುಣಗಳನ್ನು ಹೇಳಿದ್ದಾರು. ಇಲ್ಲದಿದ್ದರೆ ಈ ಗುಣಗಳು ಗಂಡಸರಿಗೂ ಲಭಿಸಬೇಡವೆ? ಗಂಡಸರನ್ನೇಕೆ ಹೀಗೆ ಉಗುರು-ಬಣ್ಣ ಹಾಕಿಕೊಳ್ಳಲು ಬಿಡರು?

# ೨೧. ರೇಷ್ಮೆ ಹುಳಗಳು

ಈ ಪ್ರಕರಣದ ಹೆಸರು ಓದುಗರಿಗೆ ತಪ್ಪು ಕಲ್ಪನೆ ಕೊಡಬಹುದು. ಮೊದಲೇ ಹೇಳುವೆ. ನಾನು ಚಿಕ್ಕಂದಿನಲ್ಲಿ ರೇಷ್ಮೆಯ ಹುಳಗಳನ್ನು ಒಂದು ವೃತ್ತಿಯಾಗಿ ಸಾಕಲಿಲ್ಲ. ನಮ್ಮ ಮನೆಯ ಉಳಿದ ಎಲ್ಲ ಚಿಕ್ಕ ಮಕ್ಕಳಂತೆ–ಮುಖ್ಯವಾಗಿ ಹೆಣ್ಣು ಮಕ್ಕಳು–ನಾನೂ ಕೂಡ ಆಟಕ್ಕೆ ರೇಷ್ಮೆ ಹುಳಗಳನ್ನು ಸಾಕಿದ್ದೆ. ನಮ್ಮ ಮನೆಯಲ್ಲಿ ಮೋಜಿಗಾಗಿ ರೇಷ್ಮೆ ಹುಳ ಸಾಕುವುದಕ್ಕೆ ಒಂದು ಬೇರೆ ಕೋಣೆಯಿರಲಿಲ್ಲ. ಹುಳಗಳು ತಮ್ಮ ಸುತ್ತ ಗೂಡು ಕಟ್ಟಿಕೊಳ್ಳಲೂ ನಾವು ಬಿಡುತ್ತಿರಲಿಲ್ಲ. ನಮ್ಮ ಮನೆಯಲ್ಲಿ ಯಾವ ಕಾಲಕ್ಕೂ ಒಟ್ಟು ನೂರು ಹುಳಗಳಿಗಿಂತ ಹೆಚ್ಚು ಇರಲೇ ಇಲ್ಲ. ನಾನು ಹತ್ತು–ಹನ್ನೆರಡು ಹುಳಗಳನ್ನು ಮಾತ್ರ ಸಾಕಿದ್ದೆ.

ಚೀನಾದೇಶವು ರೇಶಿಮೆಯ ತವರೂರು ಎಂದು ಇತಿಹಾಸ ಪ್ರಸಿದ್ಧ. 'ಹಳದಿ ಚಕ್ರವರ್ತಿ'(ಕ್ರಿ. ಶ.ಪೂ. 2698)ಯೆನಿಸಿದ "ಹ್ಷೀ ಲಿಂಗ"ನ ಮಡದಿ "ಲೊಯ್‌ತ್ಸೂ" ರೇಷ್ಮೆ ಹುಳ ಸಾಕುವುದನ್ನೂ ರೇಷ್ಮೆನೇಯ್ಗೆಯನ್ನೂ ಪ್ರಾರಂಭಿಸಿದಳೆಂದು ನಮ್ಮ ಗ್ರಂಥಗಳಲ್ಲಿದೆ. ಈ ರಾಜ--ರಾಣಿಯರ ಆಳ್ವಿಕೆಯಲ್ಲಿ "ಒಕ್ಕಲು ತನ" ಹಾಗೂ ರೇಷ್ಮೆ ಕೈಗಾರಿಕೆಗಳ ವರ್ಷೋತ್ಸವ ನಡೆಯುತ್ತಿತ್ತು. ಈ ಉತ್ಸವದಲ್ಲಿ ಅರಸನು ಹೊಲದಲ್ಲಿ ಒಂದೆರಡು ಸಾಲು ರೆಂಟೆ ಹೊಡೆಯುತ್ತಿದ್ದ. ಅರಸಿ ಪೂರ್ವಜರ ದೇವಸ್ಥಾನದ ಮುಂದೆ ಧೂಪಹಾಕಿ ರೇಷ್ಮೆ ಹುಳಗಳ ಗೂಡುಗಳನ್ನೂ, ಆ ಹುಳಗಳು ತಿನ್ನುವ ಉಪ್ಪುನೇರಿಳೆ ಎಲೆಗಳನ್ನೂ ಅರ್ಪಿಸುತ್ತಿದ್ದಳು. ಈ ರೀತಿ ರಾಜಮನ್ನಣೆ ದೊರೆತ ಈ ರೇಷ್ಮೆ ಕೈಗಾರಿಕೆ ವೃದ್ಧಿಯಾಗಿ ಚೀನಾದೇಶದಲ್ಲೆಲ್ಲ ಪ್ರಸರಿಸಿತು. ಕಿಯಾಂಗ್ಸು, ಚೆಕಿಯಾಂಗ್ ಪ್ರಾಂತಗಳು ರೇಷ್ಮೆ ಉತ್ಪಾದನೆಗೆ ಮುಖ್ಯ ಕೇಂದ್ರಗಳಾದವು. ನನ್ನ ಪ್ರಾಂತ

ದಲ್ಲಿ ರೇಷ್ಮೆ ಕೈಗಾರಿಕೆ ಒಕ್ಕಲತನಕ್ಕೆ ಜೊತೆಯಾಗಿ ಪೂರಕ ಉದ್ಯಮವಾಯಿತು.

ಹಳ್ಳಿಯಲ್ಲಿರುವ ನಮ್ಮ ದೊಡ್ಡಮ್ಮ ಒಬ್ಬಾಕೆ ಸಾಕಷ್ಟು ಹುಳಗಳನ್ನು ಸಾಕುತ್ತ ಬಂದಿದಾಳೆ, ಆದರೆ ನಾವು ಪಟ್ಟಣದಲ್ಲಿರುವವರು, ಹಳ್ಳಿಯ ನಮ್ಮ ಪರಂಪರೆಯನ್ನು ಕಾಯ್ದುಕೊಂಡು ಹೋಗುವೆವೆಂದು ಹೇಳುವಷ್ಟರ ಪೂರ್ತಿ, ಅಜ್ಜಿಯ ಆಗ್ರಹದ ಮೇರೆಗೆ ರೇಷ್ಮೆ ಹುಳಗಳನ್ನು ಸಾಕುತ್ತೇವೆ. ಹಳ್ಳಿಯ ಜೀವನದ ರೀತಿ ನೀತಿ ತಿಳಿದಿರಲಿ ಎಂದು ಇದನ್ನು ಕಲಿತುಕೊಳ್ಳುತ್ತೇವೆ. ಈ ಹುಳುಗಳನ್ನು ಚೆನ್ನಾಗಿ ನೋಡಿಕೊಂಡರೆ ಉಳಿದ ಮಹತ್ತ್ವದ ವ್ಯವಹಾರಗಳನ್ನೂ ದಕ್ಷತೆಯಿಂದ ಲಕ್ಷ್ಯಪೂರ್ವಕವಾಗಿ ನಿರ್ವಹಿಸಿಕೊಂಡು ಹೋಗಬಲ್ಲ ಯೋಗ್ಯತೆ ಸಂಪಾದಿಸಿದಂತೆ ಎಂದು ನಮ್ಮಲ್ಲಿ ಭಾವನೆ. ಆದರೂ ನಾವೇ ರೇಷ್ಮೆ ಹುಳಗಳನ್ನು ಸಾಕಲೇಬೇಕಾಗಿರಲಿಲ್ಲ. ಹುಡುಗಿಯರು ಮಾತ್ರ ಇದನ್ನು ಹೆಚ್ಚಾಗಿ ಕಲಿಯುತ್ತಿದ್ದರು. ಕಕ್ಕನ ಮಕ್ಕಳು ಕೆಲವರು ಈ ಕೆಲಸ ಮಾಡುತ್ತಿರಲೇ ಇಲ್ಲ. ನನಗೆ ಮಾತ್ರ ಈ ಕೆಲನ ತುಂಬಾ ನೇರುತ್ತಿತ್ತು.

ರೇಷ್ಮೆ ಹುಳಗಳು ಇಟ್ಟ ಮೊಟ್ಟೆಗಳನ್ನು ಕಾದಿರಿಸುವುದೇ ತುಂಬ ಕಷ್ಟದ ಕೆಲಸ. ಇವನ್ನು ಬೆಳೆಯಿಸುವ ಕಾಲ-ಅಂದರೆ ಚಳಿಗಾಲದ ನಡುವೆ ನಮ್ಮ ಅತ್ತೆ ಹಳ್ಳಿಯಿಂದ ಮೊಟ್ಟೆಗಳನ್ನು ನಮಗೆ ತಂದುಕೊಡುತ್ತಿದ್ದಳು ನನು ಸಾಮಾನ್ಯವಾಗಿ ಹತ್ತು ಮೊಟ್ಟೆಗಳಿಗಿಂತ ಒಂದೆರಡು ಹೆಚ್ಚು ಕೇಳಿ ತೆಗೆದುಕೊಳ್ಳುತ್ತಿದ್ದೆ. ಏಕೆಂದರೆ, ಎಲ್ಲ ಮೊಟ್ಟೆಗಳೂ ಮರಿಯಾಗುವದಿಲ್ಲ. ನಮ್ಮ ತೋಟದಲ್ಲಿ ಉಪ್ಪುನೇರಿಳೆ ಚಿಗುರೆಲೆಗಳನ್ನು ಕೊಯ್ದು ತರಲು ಅತ್ತೆ ನಮಗೆ ಹೇಳುತ್ತಿದ್ದಳು. ಮೊಟ್ಟೆಗಳನ್ನು ಬೆಚ್ಚನೆಯ ಸ್ಥಳದಲ್ಲಿಡಲು ಹೇಳುತ್ತಿದ್ದಳು. ದೀಪಗಳ ಹಬ್ಬವಾದೊಡನೆ ನಮ್ಮ ಕೋಣೆಯಲ್ಲಿ ಅಗ್ಗಿಷ್ಟಿಕೆ ಇರುತ್ತಿರಲಿಲ್ಲ. ಆದ್ದರಿಂದ ನಾನು ಮೊಟ್ಟೆಗಳನ್ನು ನನ್ನ ಹಾಸಿಗೆಯ ಕೆಳಗೆ ಬೆಚ್ಚಗೆ ಇಡುತ್ತಿದ್ದೆ. ಮೊದಮೊದಲಿಗೆ ಈ ಮೊಟ್ಟೆಗಳ ಬಣ್ಣ ಹಳದಿ ; ಅನಂತರ ಕೆಲದಿನಗಳ ತರುವಾಯ ಕಪ್ಪು–ನೀಲಿ ಬಣ್ಣಕ್ಕೆ ತಿರುಗುತ್ತಿದ್ದವು. ಮೊಟ್ಟೆಗಳನ್ನು ನಾನು ದಿನಾಲೂ ನೋಡುತ್ತಿದ್ದೆ. ಹೀಗೆ ನೋಡುತ್ತಿರುವಾಗ ಕಪ್ಪು ಇರುವೆಯಂಥ ಚಿಕ್ಕ ಹುಳಗಳು ಅದರೊಳಗೆ ಒಮ್ಮೆಲೇ ಕಾಣಿಸಿಕೊಳ್ಳುತ್ತಿದ್ದವು ಅವನ್ನು ಒಂದು ಪೆಟ್ಟಿಗೆಯಲ್ಲಿ ತೆಗೆದಿಡುತ್ತಿದ್ದೆ. ಉಪ್ಪುನೇರಿಳೆ ಎಲೆಯ ಚಿಗುರನ್ನು

ಸಣ್ಣಗೆ ಕತ್ತರಿಸಿ ಆ ಪೆಟ್ಟಿಗೆಯಲ್ಲಿ ಹಾಕುತ್ತಿದ್ದೆ. ಇರುವೆಯಂತಿದ್ದ ಈ ಮರಿಗಳು ಈ ಚಿಗುರನ್ನು ತಿನ್ನುತ್ತಿದ್ದುವು. ಈ ಚಿಗುರೆಲೆಗಳೇ ಕೆಲದಿನ ಅವುಗಳಿಗೆ ಆಹಾರ. ಚಿಗುರನ್ನು ಗಾಳಿಗೆ ಹರವಿ ಒಣಗಿಸುತ್ತಿದ್ದೆವು. ಚಿಗುರು ಹಸಿಯಾಗಿದ್ದರೆ ಹುಳಗಳಿಗೆ ರೋಗ ಬರುತ್ತಿತ್ತು. ಒಣಗಿಸಬೇಕು. ಇರುವೆಯಂತಿದ್ದ ರೇಷ್ಮೆ ಹುಳಗಳು ಬೆಳೆದು ಮೈ ತುಂಬಿ ಕ್ರಮವಾಗಿ ಬೂದು ಬಣ್ಣಕ್ಕೆ ತಿರುಗುತ್ತಿದ್ದವು. ಆಗ ಇರುವೆಗಳ ಹಾಗೆ ಅವು ಕಾಣುತ್ತಿರಲಿಲ್ಲ.

ಮೊದಲಿಗೆ ನಮ್ಮ ತೋಟದಲ್ಲಿದ್ದ ಒಂದು ಉಪ್ಪುನೇರಿಳೆ ಗಿಡದ ಎಲೆಗಳೇ ಸಾಕಾಗುತ್ತಿದ್ದವು. ಬರಬರುತ್ತ ರೇಷ್ಮೆ ಹುಳಗಳು ಹೆಚ್ಚಾದಂತೆ ಎಲೆ ಕಡಮೆ ಬೀಳ ಹತ್ತಿದವು. ಆಳುಗಳೂ, ಕಕ್ಕನ ಮಕ್ಕಳಲ್ಲಿ ಒಬ್ಬಿಬ್ಬರೂ ಈ ಎಲೆ ಹುಡುಕಿ ತರಲು ಹೊರಗೆ ಅಲೆದಾಡಬೇಕಾಯಿತು. ರೈತರಿಂದ ಎಲೆಗಳನ್ನು ಕೊಂಡು ತರುವುದೂ ಸಾಧ್ಯವಿತ್ತು. ಕಿಯಾಂಗ್ಸಿ, ಚೆಕಿಯಾಂಗ್ ಪ್ರಾಂತಗಳಲ್ಲಿ ಉಪ್ಪುನೇರಿಳೆ ಗಿಡಗಳ ಹೊಲಗಳಿರುತ್ತವೆಂದೂ ಅದರ ಎಲೆ ಕೊಯ್ಯುವ ಜನರೇ ಇರುತ್ತಾರೆಂದೂ ನಾವು ಕೇಳಿದ್ದೆವು. ಹೆಂಗಸರು, ಗಂಡಸರು, ಹುಡುಗರು, ಹುಡುಗಿಯರು ಗುಂಪು ಗುಂಪಾಗಿ ಈ ಎಲೆಗಳನ್ನು ಸಂಗ್ರಹಿಸಿ ತರಲು ಹಳ್ಳಿಯ ಹಾಡು ಹಾಡಿಕೊಳ್ಳುತ್ತ ಹೋಗುತ್ತಾರಂತೆ. ಇದರ ಬಗ್ಗೆ ಎಷ್ಟೋ ಕಥೆ ಕಟ್ಟಿದಾರೆ. ನನ್ನ ತಮ್ಮಂದಿರು ಕೆಲವರು ಈ ಎಲೆಗಳನ್ನು ತರಲು ಹೋಗುತ್ತಿದ್ದರು. ಆ ಹಾಡು–ಕುಣಿತ, ಆ ಶೃಂಗಾರಗಳಿಗಾಗಿ ಅಲ್ಲ!

ಏಳು ದಿನಗಳಲ್ಲಿ ರೇಷ್ಮೆ ಹುಳಗಳು ಒಂದು ಅಂಗುಲದಷ್ಟು ಉದ್ದ ಬೆಳೆಯುತ್ತವೆ. ಬರಬರುತ್ತ ಅವುಗಳ ಬಣ್ಣ ಮಾಸಲು ಕಂದು ಆಗುತ್ತದೆ. ತಲೆ ಅತ್ತ ಇತ್ತ ಅಲುಗಾಡುತ್ತದೆ. ಅನಂತರ ಅವು ತಿನ್ನುವುದನ್ನು ಕಡಮೆ ಮಾಡುತ್ತ ಮಾಡುತ್ತ ಸಂಪೂರ್ಣ ನಿಲ್ಲಿಸಿಯೇ ಬಿಡುತ್ತವೆ. ತಲೆ ಅಲುಗಾಡುವುದೂ ಕೂಡ ನಿಂತು ಸ್ತಬ್ಧವಾಗುತ್ತದೆ. ಇದು ಆ ಹುಳಗಳು ನಿದ್ರಿಸುವ ಕಾಲ. ಈ ಕಾಲದಲ್ಲಿ ಅವು ತಮ್ಮ ಮೈತೊಗಲನ್ನು ಬದಲಿಸಿಕೊಳ್ಳುತ್ತವೆ. ಹೊಸ ಚರ್ಮ ಹಳೆಯದರ ಕೆಳಗಿನಿಂದ ಬೆಳೆದು ಬರುತ್ತದೆ. ತರುವಾಯ ತಲೆಯ ಹತ್ತಿರ ಕೆಂಪು ಚುಕ್ಕೆ ಕಾಣಿಸಿಕೊಳ್ಳುತ್ತದೆ. ಈ ಸ್ಥಳದಲ್ಲೇ ಹಳೇ ಚರ್ಮವನ್ನು ಹರಿದು, ಸೀಳಿಕೊಂಡು, ಹೊಸ ಚರ್ಮಧಾರಿಯಾದ ಹುಳ ಹೊರಗೆ ಬರುತ್ತದೆ. ಒಂದೆರಡು ಗಂಟೆ ಆದ ಮೇಲೆ ಅವು ಮತ್ತೆ ಮೊದಲಿ

ಗಿಂಥ ಹೆಚ್ಚಾಗಿ ಆಹಾರ ತಿನ್ನ ತೊಡಗುತ್ತವೆ. ಇದೆಲ್ಲವೂ ತುಂಬ ತ್ವರಿತ ಗತಿಯಲ್ಲಿ ಜರುಗುತ್ತದೆ. ನಿದ್ದೆ, ಹೊಸ ಶರೀರ–ಹೀಗೆ ಎರಡು ಮೂರು ದಿನಕ್ಕೊಮ್ಮೆ.

ಈ ರೀತಿ ನಾಲ್ಕು ಸಲ ಬದಲಾಯಿಸುತ್ತವೆ. ಎಲ್ಲ ರೇಷ್ಮೆ ಹುಳಗಳೂ ಒಂದೇಸಲ ನಿದ್ದೆಮಾಡಿ ಹೊಸ ಮೈ ತಳೆಯುವು. ಆದರಿಂದ ಹೆಚ್ಚು ಪ್ರಮಾಣ ದಲ್ಲಿ ಈ ಹುಳಗಳನ್ನು ಸಾಕುವವರಿಗೆ ಇದೊಂದು ದೊಡ್ಡ ಸಮಸ್ಯೆಯಾಗಿದೆ. ನನಗೆ ಮಾತ್ರ ಇದರಿಂದ ತೊಂದರೆಯಾಗಲಿಲ್ಲ ನಾನು ಎರಡು ಬಿದಿರಿನ ಕಡ್ಡಿಗಳಿಂದ ಮಲಗಿದ್ದ ಹುಳಗಳನ್ನು ಹಿಡಿದೆತ್ತಿ ಒಂದು ಬಿದಿರಿನ ಬುಟ್ಟಿ ಯಲ್ಲಿಡುತ್ತಿದ್ದೆ. ನಿದ್ರಿಸುತ್ತಿದ್ದ ಕಾಲದಲ್ಲಿ ಅವನ್ನು ಬೆಚ್ಚನೆ ಸ್ಥಳದಲ್ಲಿಟ್ಟು ನೊಣಗಳು ಕೂಡದಂತೆ ನೀರು ಬೀಳದಂತೆ ನೋಡಿಕೊಳ್ಳಬೇಕಾಗುತ್ತಿತ್ತು. ಕೊನೆಯ ಸಲ ನಿದ್ದೆಮಾಡಿ ಎದ್ದಮೇಲೆ ಹುಳಗಳಿಗೆ ಎಲ್ಲೂ ಇಲ್ಲದ ಹಸಿವು. ಎಷ್ಟು ಎಲೆಗಳಾದರೂ ಸಾಲದು. ಆ ಹೊತ್ತಿಗೆ ಉಪ್ಪುನೇರಿಳೆ ಗಿಡಗಳಲ್ಲಿ ಎಲೆಗಳೆಲ್ಲ ಉದುರಿಹೋಗುತ್ತಿದ್ದವು. ಹುಳಗಳಿಗೆ ಆಹಾರ ಒದಗಿಸುವುದು ನಮಗೆ ಒಳ್ಳೇ ಕಠಿಣ ಸಮಸ್ಯೆ. ಹೇಗೋ ಸಾಗಿಸಿಕೊಂಡು ಹೋಗುತ್ತಿದ್ದೆವು. ಕಡೆಯ ಸಲದ ನಿದ್ದೆಯಿಂದ ಎದ್ದಮೇಲೆ ಎಂಟು ಒಂಬತ್ತು ದಿನಗಳಲ್ಲಿ ರೇಷ್ಮೆ ಹುಳಗಳು ಮೂರು ಅಂಗುಲ ಉದ್ದವಾಗುತ್ತಿದ್ದವು. ಅವುಗಳ ಮೈ ಪಾರ ದರ್ಶಕವಾಗುತ್ತಿತ್ತು. ಆ ಹೊತ್ತಿಗೆ ಆಹಾರ ತಿನ್ನುವುದನ್ನು ಸಂಪೂರ್ಣವಾಗಿ ನಿಲ್ಲಿಸಿ ರೇಷ್ಮೆ ಎಳೆಯುನ್ನು ಬಿಡಲು ಪ್ರಾರಂಭಿಸುತ್ತಿದ್ದವು. ಒಂದು ಬಟ್ಟಲಿನ ಮೇಲೆ ಕಾಗದವನ್ನಿರಿಸಿ ಅದರ ಮೇಲೆ ಒಂದೆರಡು ರೇಷ್ಮೆ ಹುಳಗಳನ್ನು ನಾನು ಇಡುತ್ತಿದ್ದೆ. ಹುಳುಗಳು ಕಾಗದದ ಸುತ್ತ ರೇಷ್ಮೆ ಎಳೆಯನ್ನು ಸುತ್ತಿಸುತ್ತಿ ಕಾಗದ ಪೂರ್ತಿಯಾಗುವವರೆಗೂ ಸುತ್ತುತ್ತಿದ್ದವು. ಎರಡು ಹುಳಗಳಿಂದ ಆ ಕಾಗದ ಪೂರ್ತಿಯಾಗಿ ಸುತ್ತುವುದಾಗದಿದ್ದರೆ ಇನ್ನೊಂದು ಹುಳವನ್ನು ಬಿಡುತ್ತಿದ್ದೆ. ಎಲ್ಲ ರೇಷ್ಮೆಯನ್ನು ಹೊರಗೆ ಹಾಕುವ ಹೊತ್ತಿಗೆ ಆ ಹುಳಗಳು ತೆಳ್ಳಗೆ ಉದ್ದವಾಗಿರುವ ಬದಲು ದೂಡಗೆ ದಪ್ಪವಾಗುತ್ತಿದ್ದವು. ಹುಳದ ಎರಡೂ ತುದಿಗಳಲ್ಲಿ ಒಂದೊಂದು ಚಿಕ್ಕೆ ಕಂಡುಬರುತ್ತಿತ್ತು. ಕೆಲವು ದಿನ ಅವು ಹಾಗೇ ಇರುತ್ತಿದ್ದವು. ಅನಂತರ ಅವುಗಳಿಗೆ ಕಣ್ಣುಬಂದು, ರೆಕ್ಕೆ

ಹುಟ್ಟಿ, ಹಾರಲು ಬರುತ್ತಿತ್ತು. ನಾನು ಆಗ ಅವನ್ನು ಒಯ್ದು ಗಿಡಗಳ ಮೇಲೆ ಬಿಡುತ್ತಿದ್ದೆ.

ನನ್ನ ಹುಳಗಳು ಹೀಗೆ ನೇಯ್ದ ಚಿಕ್ಕ ಚಿಕ್ಕ ರೇಷ್ಮೆ ತುಂಡುಗಳನ್ನು ಮುದ್ರೆ ಹಾಕುವ ಡಬ್ಬಾಕ್ಕೆ ಉಪಯೋಗಿಸಿಕೊಳ್ಳುತ್ತಿದ್ದೆ. ನುಣುಪಾದ ರೇಷ್ಮೆ ಬಟ್ಟೆ ಮಶಿಯನ್ನು ಮುದ್ರೆಗೆ ಅಂಟಿಕೊಳ್ಳದಂತೆ ಮಾಡುತ್ತಿತ್ತು. ಯಂತ್ರದಲ್ಲಿ ತಯಾರು ಮಾಡಿದಂತೆ ಯಂತ್ರದ ಸಂಪರ್ಕವಿಲ್ಲದಿದ್ದರೂ ಹುಳಗಳು ರೇಷ್ಮೆ ಬಟ್ಟೆಯನ್ನು ತಯಾರಿಸುವುದನ್ನು ನೋಡಿ ನಾನು ತುಂಬ ಚಕಿತನಾಗಿದ್ದೇನೆ. ಕೆಲವು ನೂಲು ಬಿಳಿ, ಕೆಲವು ಬಂಗಾರದ ಹಳದಿ. ನನ್ನ ಅಕ್ಕ ತನ್ನ ಈ ರೇಷ್ಮೆ ತುಂಡುಗಳನ್ನು ಮುಖಕ್ಕೆ ಚೂರ್ಣ ಹಾಕಿಕೊಳ್ಳಲು ಉಪಯೋಗಿಸುವ ಪಫ್‌ಗಳಿಗೆ ಉಪಯೋಗಿಸುತ್ತಿದ್ದಳು. ಹೊರಗೆ ಸುತ್ತಲೂ ಚೆನ್ನಾಗಿ ಕಸೂತಿ ಹಾಕುತ್ತಿದ್ದಳು.

ಅವಳು ನೂರಾರು ರೇಷ್ಮೆ ಹುಳಗಳನ್ನು ಸಾಕಿ ದೊಡ್ಡ ದೊಡ್ಡ ರೇಷ್ಮೆ ಬಟ್ಟೆ ಮಾಡಿಕೊಳ್ಳುತ್ತಿದ್ದಳು. ಹುಳಗಳು ರೇಷ್ಮೆ ಎಳೆಯನ್ನು ಬಿಡುವ ಹೊತ್ತಿಗೆ ಅವುಗಳನ್ನೆಲ್ಲ ಹೆಚ್ಚು ಪ್ರಮಾಣದಲ್ಲಿ ತಂದು ಮೇಜಿನ ಮೇಲೊಂದು ಕಾಗದ ಹಾಕಿ, ತನಗೊಂದು ಕಸೂತಿಯ ಸಾಮಾನುಗಳನ್ನು ಕಟ್ಟಿಟ್ಟುಕೊಳ್ಳಲು ಬರುವಷ್ಟು ದೊಡ್ಡ ಬಟ್ಟೆಯಾಗುವ ವರೆಗೂ ಹುಳಗಳನ್ನು ಬಿಡುತ್ತಿದ್ದಳು. ನೇಯದೆ ಇರುವ ರೇಷ್ಮೆ ತುಂಬಾ ಅಂಟಾಗಿರುತ್ತದೆ. ಕೈಗೆ ಮೆತ್ತಿಕೊಳ್ಳುತ್ತದೆ. ಹೀಗಾಗದಂತೆ ನೋಡಿಕೊಳ್ಳಲು ನುಣುಪಾದ ಮೆತ್ತನೆ ವಸ್ತುವನ್ನು ಬಳಸಬೇಕು.

ನಾವು ಇಷ್ಟು ಶ್ರದ್ಧೆಯಿಂದ ದುಡಿದುದಕ್ಕೆ ಇದೇ ಪ್ರತಿಫಲ. ಅಕ್ಕನೂ ಉಳಿದವರೂ ತಮ್ಮ ತಮ್ಮೊಳಗೆ ಅತಿ ಉತ್ತಮ ರೇಷ್ಮೆ ತುಂಡನ್ನು ತಯಾರಿಸುವ ಪೈಪೋಟಿ ನಡೆಯಿಸುತ್ತಿದ್ದರು. ನಮ್ಮ ಅತ್ತೆ ನಮ್ಮ ಮನೆಗೆ ಬಂದಾಗ ಈ ರೇಷ್ಮೆ ಬಟ್ಟೆಗಳನ್ನೆಲ್ಲಾ ನೋಡಿ ಯಾರದು ಶ್ರೇಷ್ಠ ಎಂದು ತೀರ್ಮಾನಿಸುತ್ತಿದ್ದಳು. ನಮ್ಮ ಕುಟುಂಬದಲ್ಲಿ ತರುವಾಯದ ಪೀಳಿಗೆಯ ಮಕ್ಕಳು ನಮ್ಮಂತೆ ರೇಶಿಮೆ ಹುಳುಗಳನ್ನು ಸಾಕುವ ಮಾತಂತೂ ಇರಲಿ, ಹುಳಗಳನ್ನೇ ನೋಡಿಲ್ಲವೆಂದು ಹೇಳಲು ನನಗೆ ತುಂಬಾ ವ್ಯಸನವಾಗುತ್ತದೆ.

———

# ೨೨. ಗುಬ್ಬಿಯ ಜೋಡಿ

ಎಲೆಗಳು ಉದುರುವ ಕಾಲ ಕಳೆಯಿತು. ವಸಂತ ಋತು ಬಂತು. ನಮ್ಮ ಹಳೆಯ ಬಳಗವಾದ ಗುಬ್ಬಿ ದಂಪತಿಗಳೂ ಮತ್ತೆ ಬರುತ್ತಿವೆ. ಎಲೆಗಳು ಉದುರಿ ಬಿದ್ದುದಕ್ಕೆ ವಿಷಾದ. ಗುಬ್ಬಿ ದಂಪತಿಗಳು ಬಂದುದಕ್ಕೆ ಆನಂದ. ಈ ಎರಡು ಘಟ್ಟಗಳನ್ನು ನಮ್ಮ ಬಾಳಿನಲ್ಲಿ ಎಂದೂ ಮರೆಯುವಂತಿಲ್ಲ. ವಸಂತಕಾಲದ ಪ್ರಾರಂಭದಲ್ಲಿ ಕಾಮುಕರಾದವರು ಈ ಗುಬ್ಬಿಗಳ ಜೊತೆಯನ್ನು ನೋಡಿ ನಿಟ್ಟುಸಿರು ಬಿಡುತ್ತಾರೆ. ತಮ್ಮ ನಲ್ಲೆಯರಿಗೆ ಸಂದೇಶಗಳನ್ನು ಕಳಿಸಲು ಉದುರಿದ ಎಲೆ-ರಾಯಭಾರಿಗಳು ಸಿದ್ಧವಾಗಿದ್ದರೂ ನಲ್ಲೆ ಇಲ್ಲದ ಕೊರತೆ ಅವರನ್ನು ಬಾಧಿಸುತ್ತದೆ.

ಈ ಗುಬ್ಬಿಯ ಜೊತೆಗಳು ಬಿಡುವಿಲ್ಲದೆ ಅಲ್ಲಿ ಇಲ್ಲಿ ಹಾರಾಡುತ್ತ ತಮ್ಮ ಗೂಡುಗಳನ್ನು ಕಟ್ಟಿಕೊಳ್ಳುತ್ತಾ ಇರುತ್ತವೆ. ಆ ನೋಟ ನೋಡಬೇಕಾದ್ದೇ !

ಗುಬ್ಬಿಗಳನ್ನು ಕುರಿತು ಚೀನಾ ಭಾಷೆಯಲ್ಲಿ ಎಷ್ಟೋ ಕತೆಗಳಿವೆ. ನಮ್ಮ ಪದ್ಯ ಸಾಹಿತ್ಯವೂ ಇದನ್ನು ಎಷ್ಟೋ ಬಗೆಯಲ್ಲಿ ವರ್ಣಿಸಿದೆ. ಗುಬ್ಬಿಗಳೆಂದರೆ ನಮಗೆ ಬಹಳ ಇಷ್ಟ. ಆದ್ದರಿಂದಲೇ ಅವನ್ನು ಸ್ವೇಚ್ಛೆಯಾಗಿ ಬಿಡುತ್ತೇವೆ.

ಈ ಗುಬ್ಬಿಯ ಜೊತೆಗಳು ತಮಗೆ ಇಷ್ಟ ಬಂದಹಾಗೆ ಮನೆಯಲ್ಲಿ ಗೂಡು ಕಟ್ಟಿ ಕೊಳ್ಳುತ್ತವೆ. ತಮಗೆ ಮನಸಿಗೆ ಬಂದರೆ ಅವು ಬರಬೇಕೇ ವಿನಾ ನಾವು ಕರೆದರೂ ಬಾರವು. ಗೂಡನ್ನು ಕಿತ್ತು ಮರಿಗಳಿಗೆ ಅಪಕಾರ ಮಾಡಲು ಯತ್ನಿಸಿದ ಮನೆಗಳಲ್ಲಿ ಮತ್ತೆ ಹೆಜ್ಜೆಯಿಟ್ಟರೆ ಆಣೆ ! ಗುಬ್ಬಿಯ ಜೋಡಿಗಳು ಪ್ರೇಮ ಸೌಖ್ಯಗಳಿಗೆ ಕುರುಹು. ಆ ದಂಪತಿಗಳಿಗೆ ಅಗಲಿಕೆ ಇಲ್ಲ. ಗುಬ್ಬಿಯ

ಜೋಡಿಗಳು ಕಾಲಿಟ್ಟ ಮನೆಯಲ್ಲಿ ಪ್ರೇಮ ಸೌಖ್ಯಗಳಿಗೆ ಕೊರತೆ ಇರದು ಎಂದು ನಮ್ಮ ನಂಬಿಕೆ. ಗುಬ್ಬಿಗಳು ಸಾಧಾರಣವಾಗಿ ಮನೆಯ ನಡುವಿನ ಹಜಾರದಲ್ಲೇ ದೊಡ್ಡ ತೊಲೆಯ ಹತ್ತಿರವೇ ಗೂಡು ಕಟ್ಟುತ್ತವೆ. ಇಕ್ಕಟ್ಟಾದ ಕೋಣೆಗಳ ತಂಟೆಗೆ ಅವು ಹೋಗಲೇ ಹೋಗವು. ವಿಶಾಲವಾದ ಭವನಗಳೇ ಅವುಗಳ ನಿವಾಸ. ಆದ್ದರಿಂದ ಗುಬ್ಬಿಯ ಜೋಡಿಗಳು ಸಂಪತ್ತಿಗೂ ಕುರುಹು ಎಂದು ಹೇಳಬಹುದು. ಇಂಥ ನಂಬಿಕೆಗಳು ಕೆಲವು ನೆಲೆಗೊಂಡಿರುವುದರಿಂದ ಚೀನಾ ಪ್ರಜೆಗಳು ತಮ್ಮ ಮನೆಯೊಳಕ್ಕೆ ಗುಬ್ಬಿಯ ಜೋಡಿಗಳು ಬ-ಲಿಲ್ಲ ವೆಂದರೆ ಗಾಬರಿಯಾಗಿ, ಅದನ್ನು ತಮ್ಮ ಮನೆಗಳಿಗೆ ಆಕರ್ಷಿಸಲು ನಾನಾ ವಿಧದಲ್ಲಿ ಪ್ರಯತ್ನ ಮಾಡುತ್ತಾರೆ. ಆದರೆ ಲಾಭ ಸೊನ್ನೆ.

ಈ ಗುಬ್ಬಿಯ ಜೋಡಿಗಳು ತಮ್ಮ ಹಿಂದಿನ ನೆಲೆಯನ್ನು ಮರೆಯದೆ ಮುಂದಿನ ವರ್ಷದಲ್ಲಿಯೂ ಅದೇ ಮನೆಗೇ ಬಂದು ಸೇರಿಕೊಳ್ಳುತ್ತವೆ.

ಚೀನಾದ ಪ್ರಜೆಗಳು ನಾವು ನಮ್ಮ ದಿನದ ಬಾಳನ್ನು ಪ್ರಕೃತಿಯೊಡನೆ ಗಂಟು ಹಾಕಿಕೊಂಡಿರುತ್ತೇವೆ. ಉದಾಹರಣೆಗೆ ಒಂದು ಕಥೆ ನೋಡಿ. 'ಮೇಡಂ ವೀ' ಎಂಬ ಒಬ್ಬ ಹೆಂಗಸು. ಆಕೆಯ ಬಾಲ್ಯದಲ್ಲೇ ಗಂಡ ತೀರಿ ಹೋದ. ಅಂದ ಚೆಂದ, ಜಾಣತನ ಉಳ್ಳವಳು ಎಂದು ಅವಳ ತಂದೆ ತಾಯಿ ಅವಳನ್ನು ಮತ್ತೆ ಮದುವೆಯಾಗಲು ಹೇಳಿದರು. ಆದರೆ ಏನೇ ಹೇಳಿದರೂ ಸತ್ತು ಹೋದ ಗಂಡನ ಮೇಲಿನ ಪ್ರೇಮದಿಂದ ಅವಳು ನಾನು ಮದುವೆ ಒಲ್ಲೆ ಎಂದು ಹಟ ಹಿಡಿದಳು. ತನ್ನ ದೃಢಸಂಕಲ್ಪಕ್ಕೆ ಕುರುಹಾಗಿ ಒಂದು ಕಿವಿಯನ್ನು ಕತ್ತರಿಸಿಕೊಂಡುಬಿಟ್ಟಳು. ಅವರ ಮನೆಗೆ ಪ್ರತಿ ವರ್ಷವೂ ಒಂದು ಗುಬ್ಬಿಯ ಜೊತೆ ಬರುವುದು ರೂಢಿ. ಒಂದು ವಸಂತ ಮಾಸದಲ್ಲಿ ಒಂದೇ ಗುಬ್ಬಿ ಬಂತು. 'ಮೇಡಂ ವೀ' ಅದರ ಕಾಲಿಗೆ ಒಂದು ಕೆಂಪು ದಾರವನ್ನು ಗುರುತಾಗಿ ಕಟ್ಟಿದಳು. ಮುಂದಿನ ವರ್ಷ ಆ ಗುಬ್ಬಿ ಅವರ ಮನೆಗೇ ಬಂತು. ಅದನ್ನು ನೋಡಿ ಆ ಹೆಂಗಸು ಒಂದು ಪದ್ಯವನ್ನು ಬರೆದಳು. ಗುಬ್ಬಿ ತನ್ನ ಜೊತೆಗಾರನನ್ನು ಕಳೆದುಕೊಂಡು, ಆ ವಿಷಾದದಲ್ಲಿ ಮತ್ತೆ ಜೊತೆಯನ್ನು ಅರಸಲು ಇಷ್ಟ ಪಡಲಿಲ್ಲ ಎಂಬ ಭಾವ ಆ ಪದ್ಯದಲ್ಲಿತ್ತು. ಚೀನೀಜನಕ್ಕೆ ಪ್ರಕೃತಿಯೊಡನೆ ತಮ್ಮ ಬಾಳನ್ನು ಹೀಗೆ ಹೆಣೆದು ಕೊಳ್ಳುವುದು ರೂಢಿ.

ನಮ್ಮ ಮನೆಗೆ ಎರಡು ಗುಬ್ಬಿಯ ಜೋಡಿ ಬರುತ್ತಿದ್ದವು. ಒಂದು ಜೊತೆ ಮುಂದಿನ ಹಜಾರದಲ್ಲಿ, ಇನ್ನೊಂದು ಜೊತೆ ಒಳಗಿನ ನಡುಮನೆಯಲ್ಲೂ ಗುಡು ಕಟ್ಟಿದ್ದವು. ಪ್ರತಿವರ್ಷವೂ ಆ ಜೋಡು ಗುಬ್ಬಿಗಳು ಬರುವ ವೇಳೆಗೆ ನನ್ನ ಚಿಕ್ಕ ತಮ್ಮಂದಿರು, ನಮ್ಮ ಅಣ್ಣನ ಮಗ ಅದಕ್ಕೆ ಸ್ವಾಗತ ನೀಡುತ್ತ ಹಾಡು ಹೇಳುತ್ತಾರೆ.

"ಎನ್‌ಟ್ಸೊ ಎನ್‌ಟ್ಸೊ ನ್ಯೆಯೂ ಲ್ಯೆಲೋ !
ಎನ್‌ಟ್ಸೊ ಎನ್‌ಟ್ಸೊ ನ್ಯೆಯೂ ಲ್ಯೆಲೋ !
ಬಂದಿರಾ ! ಜೋಡು ಗುಬ್ಬಿ ! ಬಂದಿರಾ ! "

ಆ ಜೋಡಿಗಳಲ್ಲಿ ಒಂದು ಯಾವಾಗಲೂ ಹೆಬ್ಬಾಗಿಲಿನಿಂದಲೇ ಬರುತ್ತಿತ್ತು. ಇನ್ನೊಂದು ಜೋಡಿ ಹಿತ್ತಲ ಬಾಗಿಲಿನಿಂದ ಬರುತ್ತಿತ್ತು. ಆ ಎರಡು ಜೋಡಿಗಳಿಗೆ ಎಂದೂ ಜಗಳ ಗಿಗಳ ಇಲ್ಲವೇ ಇಲ್ಲ. ಬಿಸಿಲು ಬಲವಾದಾಗ ನಾವು ಬಾಗಿಲಿಗೆ ಬಿದಿರಿನ ಚಾಪೆಗಳನ್ನು ತೂಗು ಹಾಕುತ್ತಿದ್ದೆವು. ಆದರೂ ಈ ಗುಬ್ಬಿಗಳು ಹೇಗೆ ಬರುತ್ತಿದ್ದವೋ ಒಳಕ್ಕೆ ! ಚಾಪೆಗಳನ್ನು ತಪ್ಪಿಸಿಕೊಂಡು ಒಳಕ್ಕೆ ಬರುತ್ತಿದ್ದವು. ಬಹಳ ಆಶ್ಚರ್ಯ. ಒಳಕ್ಕೆ ಬರುವಾಗ, ಹೊರಕ್ಕೆ ಹೋಗುವಾಗ ಆ ಚಾಪೆಗಳ ಮೇಲೆ ಬಿದ್ದ ಅವುಗಳ ನೆರಳು ನಮಗೆ ಬಹಳ ಹಿಗ್ಗನ್ನು ನೀಡುತ್ತಿತ್ತು. ಆ ದೃಶ್ಯವನ್ನು ಚಿತ್ರಿಸಬೇಕೆಂದು ನಮ್ಮ ತಂದೆ ಬಹಳ ಕುತೂಹಲದಿಂದ ಅದನ್ನು ನೋಡುತ್ತಿದ್ದರು. ನನ್ನನ್ನು ಸಹ ಚೆನ್ನಾಗಿ ಗಮನಿಸು ಎನ್ನುತ್ತಿದ್ದರು ನಾನು ಮಾತ್ರ ಅಷ್ಟು ಶ್ರದ್ಧೆಯಿಟ್ಟು ಗಮನಿಸುತ್ತಿರಲಿಲ್ಲ.

ಈ ಗುಬ್ಬಿಯ ಜೋಡಿಗಳು ಗಿಡದ ಕೊಂಬೆಗಳನ್ನು ಕೈಬಿಟ್ಟು ಹಾಯಾಗಿ ಮನೆಯ ತೊಲೆಗಳ ಮೇಲೆ ಏಕೆ ಗೂಡು ಕಟ್ಟುತ್ತವೆಯೋ ! ಬಹಳ ಆಶ್ಚರ್ಯ. ಹಗಲೆಲ್ಲಾ ಕೆರೆಯ ಏರಿಯ ಮೇಲಿನ ಮರಗಳ ಕೊಂಬೆಗಳಲ್ಲೇ ಹಾರಾಡುತ್ತಿರುತ್ತವೆ. ಕೆರೆಯ ಕೆಸರು ಮಣ್ಣಿನಿಂದ ತಮ್ಮ ಗೂಡುಗಳನ್ನು ಗಟ್ಟಿಯಾಗಿ ಕಟ್ಟುತ್ತವೆ. ನಾವು ಸಂವತ್ಸರಾದಿ ಹಬ್ಬಕ್ಕೆ ಮನೆಗೆ ಸುಣ್ಣ ಬಳಿದಾಗ ಈ ಎರಡು ಗುಬ್ಬಿಯ ಗೂಡುಗಳನ್ನು ಮಾತ್ರ ಕದಲಿಸುತ್ತಿರಲಿಲ್ಲ. ಬರುವ ವರ್ಷ ಮತ್ತೆ ಗುಬ್ಬಿಗಳು ಬಂದು ಹೊಸ ಮಣ್ಣು ತಂದು ಗೂಡು

ಗಳನ್ನು ಸರಿಮಾಡಿಕೊಳ್ಳುತ್ತಿದ್ದವು. ನಾವು ಆ ಗುಬ್ಬಿಗಳಿಗೆ ಎಂದೂ ಏನೂ ಆಹಾರ ಇಟ್ಟವರಲ್ಲ. ಅವು ಏನು ತಿಂದು ಬದುಕುತ್ತಿದ್ದವೋ ನಮಗೆ ಗೊತ್ತಿಲ್ಲ.

ನನ್ನ ಚಿಕ್ಕ ತಮ್ಮ ಒಬ್ಬನಿಗೆ ಒಂದು ಆಲೋಚನೆ ಇತ್ತು. ಒಂದು ಗುಬ್ಬಿಯ ಮೊಟ್ಟೆಯನ್ನು ತೆಗೆದು, ಅದರ ಬದಲು ಮೀನಿನ ಮೊಟ್ಟೆ ಇಟ್ಟರೆ, ಗುಬ್ಬಿ ಆ ಮೀನಿನ ಮೊಟ್ಟೆಯನ್ನು ಚೆನ್ನಾಗಿ ಶಾಖಕೊಟ್ಟು ಕಾಪಾಡುತ್ತದೆ, ಆ ಮೀನಿನ ಮರಿಯನ್ನು ನೀರಿನಲ್ಲಿ ಬಿಟ್ಟರೆ ಮುಂದೆ ದೊಡ್ಡ ಮೀನುಗಳಾಗುತ್ತವೆ ಎಂದು ಅವನ ಊಹೆ. ಆದರೆ ಮೇಲೇರಿ ಗುಬ್ಬಿಯ ಗೂಡನ್ನು ಕೆಳಗೆ ಕೆಡಹುವಷ್ಟು ಕೆಟ್ಟ ಕೆಲಸವನ್ನು ಅವನು ಎಂದೂ ಮಾಡಲಿಲ್ಲ. ಆದ್ದರಿಂದ ಅವನ ಆಲೋಚನೆ ಬರೀ ಹುಚ್ಚು ಆಲೋಚನೆಯೆ!

ಈ ಗುಬ್ಬಿಗಳ ಮಾತು ಬಂದು ನನ್ನ ಬಾಲ್ಯದಲ್ಲಿ ನಾನು ನೋಡಿದ ಬೇರೆ ಹಕ್ಕಿಗಳ ಸಂಗತಿ ನೆನಪಾಗುತ್ತಿದೆ. ಹದ್ದು, ಕಾಗೆ ಮನೆಯ ಛಾವಣಿಯ ಮೇಲೆ ಕೂತು ಬೆಳಗಿನ ಜಾವ ಎಚ್ಚರವಾದಾಗ, ಎಲ್ಲಾದರೂ ಹೊರಗೆ ಹೊರಡುವಾಗ ಕೂಗಿದರೆ ಅದು ಅಶುಭ ಶಕುನವೆಂದು ನಮ್ಮ ನಂಬಿಕೆ. ನಮ್ಮ ತೋಟದಲ್ಲಿ ಮರಗಳ ಕೊಂಬೆಗಳಲ್ಲಿ ಚಳಿಗಾಲದಲ್ಲಿ ಕೆಲವು ಕಾಗೆ ಇರುತ್ತಿದ್ದವು. ಒಂದು ದಿನ ಬೆಳಗ್ಗೆ ನಾನು ನಿದ್ದೆಯಿಂದ ಎದ್ದ ಸ್ವಲ್ಪ ಹೊತ್ತಿಗೆ ನಮ್ಮ ಮನೆಯ ಛಾವಣಿಯಿಂದ ಕಾಗೆಗಳು 'ಕಾ ಕಾ' ಎಂದು ಕೂಗಿದವು. ನಾನು ಅಜ್ಜಿಯ ಬಳಿಗೆ ಓಡಿಹೋಗಿ ಕಾಗೆ ಕೂಗಿದವು ಎಂದು ಹೇಳಿದೆ. ಆಗ ಆಕೆ ಆ ಪೀಡೆಯ ಪರಿಹಾರಾರ್ಥ ಯಾವುದೋ ಮಂತ್ರವನ್ನು ಮೂರು ಸಲ ಹೇಳಿದಳು. 'ಏನೂ ಪರವಾ ಇಲ್ಲ' ಎಂದಳು. ನಮ್ಮಲ್ಲಿದ್ದ ನಂಬಿಕೆಯ ಬಗ್ಗೆ ಏನೂ ಅರ್ಥವಾಗದಿದ್ದರೂ ಏನು ಅದು ಎಂದು ಆಕೆಯನ್ನು ಕೇಳಲಿಲ್ಲ. ಮೈನಾ ಹಕ್ಕಿ ಯಾವಾಗ ದನಿ ಮಾಡಿದರೂ ಅದು ಶುಭ ಸೂಚಕವೆಂದು ತಿಳಿದಿದ್ದೆವು. ಮೈನಾ ಪಕ್ಷಿಯ ಧ್ವನಿ ಕೇಳಿ ನಾವು ಚಿಕ್ಕ ಹುಡುಗರು ಒಂದು ಹಾಡು ಹೇಳುತ್ತಿದ್ದೆವು.

**'ಮೈನಾ ನುಡಿಯಲು ಸೊಂಪು**
**ತಂದೆಗೆ ಮಾತಿನ ಇಂಪು**

ತಂಮನು ಹುಟ್ಟುವ ಬೇಗ
ಅಂಣಗೆ ಮದುವೆಯು ಈಗ.'

ಮೈನಾ ಹಕ್ಕಿಯ ಉಲಿವು ಕೇಳಲು ಬಹಳ ಸೊಂಪು. ಅನೇಕರು ಕಲೆತು ಸಂತೋಷದಿಂದ, ಏಕಕಂಠದಿಂದ ಹಾಡಿದಂತೆ ನುಡಿಯುತ್ತವೆ ಮೈನಾ. ಆದರಿಂದ ನಾವು ಹಾಡುವ ಪದ ಹುಟ್ಟಿರಬಹುದು. ನಮ್ಮ ತೋಟದಲ್ಲಿ ಒಂದು ಸಲ ಒಂದು ಹಕ್ಕಿಯನ್ನು ನೋಡಿದೆ. ಕೆರೆಯ ಕಟ್ಟೆಯಲ್ಲಿ ಒಂದು ಉದ್ದನೆ ತೆಳ್ಳನೆ ರೆಂಬೆಯ ಮೇಲೆ ಅದು ಕೂತಿತ್ತು. ಅದರ ಆಕಾರ, ಅದರ ರೆಕ್ಕೆಗಳ ಬಣ್ಣಗಳು ಬಹಳವಾಗಿ ನನ್ನ ಮನ ಸೆಳೆದವು. ನಮ್ಮ ತಂದೆ ಬರೆದ ಚಿತ್ರದಲ್ಲಿನ ಆಕಾರ, ಬಣ್ಣಗಳಿಂದ ಈ ಹಕ್ಕಿಯನ್ನು ನಾನು ಗುರುತು ಹಿಡಿದೆ.

ಮೀನು ಹೆಚ್ಚಾಗಿ ಸಿಗಲಿಲ್ಲವೇನೋ ಆ ಹಕ್ಕಿ ಮತ್ತೆ ಬರಲಿಲ್ಲ, ಕೊಕ್ಕರೆ ನವಿಲುಗಳನ್ನು ನಾನು ಕಣ್ಣಿನಿಂದ ನೋಡಲಿಲ್ಲ. ತಂದೆಯುವರು ಬರೆದ ಚಿತ್ರಗಳಲ್ಲಿ ನೋಡಿದ್ದೇ. ಪಕ್ಷಿಗಳು ಎರಡೂ ಚೀನೀ ಜನರ ಬಾಳಿನಲ್ಲಿ ಅನೇಕ ವಿಧದಲ್ಲಿ ಮುಖ್ಯವಾಗಿ ಇವೆ. ನಮ್ಮ ತಂದೆಯ ಮೇಜಿನ ಮೇಲೆ ಅಂದಕ್ಕಾಗಿ ಅಲಂಕಾರಕ್ಕಾಗಿ ಚೆನ್ನಾಗಿ ಅರಳಿದ ಹೂಗೊಂಚಲು ಸಿಗದಿದ್ದಾಗ ಉದ್ದನೆ ನವಿಲು ಗರಿಗಳಿಂದ ಅಂದವಾಗಿ ಅಲಂಕರಿಸುತ್ತಿದ್ದರು.

ನಮ್ಮ ಅತ್ತಿಗೆಯ ತವರು ಮನೆಗೆ ಹೋದಾಗ ಮೊಟ್ಟ ಮೊದಲು ಗಿಣಿಯನ್ನು ನೋಡಿದೆ ನಾನು. ಅದಕ್ಕೆ ಕೆಂಪು ಮೂಗು, ಬಂಗಾರ-ಎಲೆ ಹಸಿರು ಬೆರೆತ ಬಣ್ಣದ ರೆಕ್ಕೆಗಳು. ಆ ಗಿಣಿಯ ಪಂಜರ ಕೈನಾಲೆಯಲ್ಲಿ ನೇತುಹಾಕಿತ್ತು. ನಾವು ಬಾಗಿಲಿನಲ್ಲಿ ಕಾಲಿಡುತ್ತಲೇ ಆ ಗಿಣಿ, 'ಕೇ ಲೈಲಿಯೊ! ಕೇ ಲೈಲಿಯೊ' ಎಂದು ಕೂಗಿತು. ಆ ಮಾತಿಗೆ 'ಬಂಧುಗಳು ಬಂದಿದಾರೆ, ಬಂಧುಗಳು ಬಂದಿದಾರೆ' ಎಂದು ಅರ್ಥ. ಈ ಮಾತುಗಳು ನನ್ನ ಮನಸ್ಸಿನಲ್ಲಿ ಈಗಲೂ ಗುಂಯ್‌ಗುಟ್ಟುತ್ತಿವೆ. ಹಕ್ಕಿ ಮನುಷ್ಯರಂತೆ ಮಾತಾಡುತ್ತದೆ ಎಂದು ನಾನು ಯಾವಾಗಲೂ ತಿಳಿದಿರಲಿಲ್ಲ. ನಮ್ಮ ಅಣ್ಣನ ಮಾವನವರು ಚೀನಾಕ್ಕೆ ದಕ್ಷಿಣದಲ್ಲಿರುವ ದೇಶದಿಂದ ಈ ಗಿಣಿಯನ್ನು ತಂದಿದ್ದರು.

ಚಿಕ್ಕ ಮರಿಯಾಗಿದ್ದಾಗಿನಿಂದಲೂ ಅದಕ್ಕೆ ಈ ಮಾತುಗಳನ್ನು ಕಲಿಸಿದಾರೆ. ಅದರ ಪಂಜರದಲ್ಲಿ ಅದು ಕೂಡುವ ಕಡ್ಡಿಯ ಕೆಳಗೆ ನೀರು ತುಂಬಿದ ಒಂದು ಬಟ್ಟಲನ್ನು ಇಟ್ಟಿದಾರೆ. ಆ ಬಟ್ಟಲಲ್ಲಿ ಅದರ ನೆರಳು ಬೀಳುತ್ತಿತ್ತು. ಪಕ್ಕದಲ್ಲಿ ಒಬ್ಬ ಮನುಷ್ಯ ನಿಂತು ಮಾತನ್ನು ಹೇಳುತ್ತಿದ್ದರೆ ಗಿಣಿ ನುಡಿಯುತ್ತಿತ್ತು. ಆದರೆ ನೀರಿನಲ್ಲಿ ಕಾಣಿಸುವ ಗಿಣಿ ನುಡಿದ ಮಾತನ್ನೇ ತಾನೂ ನುಡಿಯುತ್ತಿದ್ದಂತೆ ಗಿಣಿಗೆ ಅನಿಸುತ್ತಿತ್ತು. ಈ ಮಾತನ್ನು ಆಡುವುದೇ ಅಲ್ಲ, ನಮ್ಮ ಬೀಗರ ಭಾಷೆಯನ್ನೆಲ್ಲಾ ಆಡುತ್ತಿತ್ತು. ಕಿಯೂ ಕಿಯಾಂಗಿನಲ್ಲಿ ಚಳಿ ಹೆಚ್ಚು. ಆದ್ದರಿಂದ ಚಳಿಗಾಲದಲ್ಲಿ ಅದನ್ನು ಒಂದು ಬೆಚ್ಚನೆ ಕೋಣೆಯಲ್ಲಿ ಇಡಬೇಕು. ಆ ಕಾಲದಲ್ಲಿ ಗಿಣಿಯನ್ನು ಸಾಕುವುದು ಬಹಳ ವೆಚ್ಚದ ಕೆಲಸ.

ಗುಬ್ಬಿಗಳ ಹಾಗೆ ಅಲ್ಲದೆ, ಚಳಿಗಾಲದಲ್ಲಿ ಬಂದು ಬೇಸಗೆ ಬರುವ ಹೊತ್ತಿಗೆ ಹೊರಟು ಹೋಗುವ ಹಕ್ಕಿಗಳೂ ಕೆಲವು ಇವೆ. ಪ್ರತಿವರ್ಷವೂ ಅದೇ ಕಾಲಕ್ಕೆ ಚಾಚೂ ತಪ್ಪದೆ ಹೇಗೆ ಬರುತ್ತವೆಯೋ ಈ ಹಕ್ಕಿಗಳು! ನನಗೆ ಅಚ್ಚರಿ. ಮುಗಿಲಿನಲ್ಲಿ ಎಷ್ಟೋ ಎತ್ತರದಲ್ಲಿ ಅವು ಉಡ್ಯಾಣ ಮಾಡುತ್ತಿದ್ದವು. ಆ ಹಕ್ಕಿಗಳು ತಮ್ಮ ಭಾಷೆಯನ್ನು ಮಾತಾಡಿಕೊಳ್ಳುವುದೇ ಅಲ್ಲದೆ ನಮ್ಮ ಭಾಷೆಯನ್ನೂ ಅರ್ಥಮಾಡಿಕೊಳ್ಳುತ್ತಿದ್ದವು. ನಾವು ಕೆಳಗೆ ನಿಂತು–

‘ ಹಕ್ಕಿಗಳೆ ! ಎಲೆ ಹಕ್ಕಿಗಳೆ !
ಹಾರಿರಿ ನೀವೊಂದೇ ಸಾಲಾಗಿ
ಹುಡುಗರೆಲ್ಲ ನಾವು ನೋಡೇವು
ಆನಂದದಿಂದಲಿ ನೋಡೇವು ’

ಎಂದು ಕೇಕೆ ಹಾಕುತ್ತಿದ್ದರೆ ಆಕಾಶದಲ್ಲಿ ಒಂದೇ ಅಡ್ಡಗೆರೆಯ ಆಕಾರದಲ್ಲಿ ಹಕ್ಕಿಗಳು ಹಾರುತ್ತಿದ್ದವು. ನಮ್ಮ ಭಾಷೆಯಲ್ಲಿ ಅದು ಒಂದಕ್ಕೆ ಗುರುತು. ಮತ್ತೆ ಅವನ್ನು ನೋಡಿ ನಾವು :

‘ ಹಕ್ಕಿಗಳೆ ! ಎಲೆ ಹಕ್ಕಿಗಳೆ !
ಮನುಷ್ಯನ ಗುರುತಾಗಿ ನಿಲ್ಲಿ

ಹುಡುಗರೆಲ್ಲ ನಾವು ನೋಡೇವು
ನಿಂ ಜಾಣತನಕೆ ನಾವ್ ಹಿಗ್ಗೇವು.'

ಎಂದು ಕೂಗಿದರೆ ಆಗ ಅವುಎರಡು ಸಾಲಾಗಿ ಬಂದು V ಆಕಾರದಲ್ಲಿ 'ಜೆನ್' ಎಂಬ ಗುರುತಾಗಿ ನಿಲ್ಲುತ್ತಿದ್ದವು. ಆ ಗುರುತಿಗೆ ನಮ್ಮ ಭಾಷೆಯಲ್ಲಿ ಮನುಷ್ಯ ಎಂದು ಅರ್ಥ. ಈ ಎರಡು ಗುರುತನ್ನು ಆ ಹಕ್ಕಿಗಳು ತಪ್ಪದೆ ಹಿಡಿಯುತ್ತಿದ್ದವು. ಅದರಿಂದ ಅವಕ್ಕೆ ಬಹಳ ಜಾಣತನ ಎಂದು ನಾವು ತಿಳಿದಿದ್ದೆವು. ಆ ಹಕ್ಕಿಗಳು ನಮ್ಮ ಕಣ್ಣಿಗೆ ಕಾಣುವಷ್ಟು ಹೊತ್ತೂ ಆಕಾಶದ ಕಡೆಯೇ ನೋಡುತ್ತಿದ್ದೆವು. ಕಡೆಗೆ ಆ ಹಕ್ಕಿಗಳು ನಮಗೆ ಕಾಣಿಸದಂತೆ ಎಲ್ಲಿಗೋ ಹಾರಿಹೋಗುತ್ತಿದ್ದವು. ಈ ಹಕ್ಕಿಗಳೂ ಗುಬ್ಬಿಗಳ ಹಾಗೆಯೆ ಬಹಳ ವಿಶ್ವಾಸ ಉಳ್ಳಂಥವು. ಜೋಡಿಯಲ್ಲಿ ಒಂದು ಸತ್ತರೂ ಅಥವಾ ಯಾರಾದರೂ ಬೇಟೆಗಾರ ಒಂದನ್ನು ಕೊಂದರೂ, ಎರಡನೆ ಹಕ್ಕಿ ಬದುಕಿದ್ದಷ್ಟು ದಿನವೂ ಒಂಟಿಯಾಗಿಯೇ ಕಾಲ ಕಳೆಯಬೇಕು. ಆದುದರಿಂದ ಆ ಹಕ್ಕಿಗಳೂ ದಾಂಪತ್ಯ ಧರ್ಮಕ್ಕೆ ಸಂಕೇತವೇ. ನಮ್ಮ ಹತ್ತನೆ ಚಿಕ್ಕಪ್ಪ ತೀರಾ ಚಿಕ್ಕ ವಯಸ್ಸಿನಲ್ಲೇ ತೀರಿಕೊಂಡ. ಈ ವಿಚಾರವನ್ನು ತಿಳಿಸಲು ನಮ್ಮ ಹಿರಿಯರಲ್ಲಿ ಒಬ್ಬರು ನಾಲ್ಕು ಮಾತನ್ನು ಬರೆದರು: 'ಎನ್ ಚೆಂಗ್ ಚಿನ್‌ಗ್ ಹಾನ್.' 'ಚಳಿಗಾಲದ ಹಕ್ಕಿಗಳ ಗುಂಪು ಎಲ್ಲವೂ ಚಳಿಯನ್ನು ತಡೆಯಲಾರದಾಯಿತು' ಎಂದು ಅದಕ್ಕೆ ಅರ್ಥ. ತೀರಿಹೋದ ನಮ್ಮ ಚಿಕ್ಕ ತಂದೆಯ ಓರಗೆಯ ಯುವಕರಿಗೆಲ್ಲಾ ಆತನ ಸಾವಿನಿಂದ ಬಹಳ ದುಃಖವಾಯಿತೆಂದು ಆ ವಾಕ್ಯ ತಿಳಿಸುತ್ತದೆ. ಆ ಸಮಯಕ್ಕೆ ಆ ವಾಕ್ಯ ಬಹಳ ಚೆನ್ನಾಗಿ ಭಾವ ಪ್ರಕಟನೆ ಮಾಡಿತೆಂದು ಎಲ್ಲರೂ ಮೆಚ್ಚಿಕೊಂಡರು.

ಹೋದ ವರ್ಷ ನಮ್ಮ ಅಣ್ಣ ತೀರಿಕೊಂಡಾಗಲೂ ಈ ವಾಕ್ಯ ನನ್ನ ಕಣ್ಣಿಗೆ ಕಟ್ಟಿದಂತಿತ್ತು.

---

# ೨೩. ದೋಣಿಯ ಪಂದ್ಯ

ಕಾನ್‌ಟ್ಯಾಂಗ್ ಸರೋವರದಲ್ಲಿ ನಡೆಯುವ ಈ ಪಂದ್ಯಗಳಿಗೆ ನಮ್ಮ ತಂದೆಯ ಜೊತೆಗೆ ಎಂಟು ಒಂಬತ್ತು ಮಂದಿ ಹುಡುಗರು ನಾವೂ ಹೋಗುತ್ತಿದ್ದೆವು. ಆಗ ಈ ಪಂದ್ಯಗಳು ಏಕೆ ಏರ್ಪಾಟಾದುವೋ ನಮಗೆ ತಂದೆ ವಿವರಿಸಿ ಹೇಳಿದರು. "ಈ ಉತ್ಸವ ವರ್ಷದ ಐದನೆ ತಿಂಗಳಿನ ಐದನೆ ದಿನ ನಡೆಯುತ್ತದೆ. ಕ್ರಿಸ್ತನಿಗೆ ಪೂರ್ವ ಮೂರನೆ ಶತಮಾನದಲ್ಲಿ 'ಚೂ' ರಾಷ್ಟ್ರದಲ್ಲಿ 'ಚೌ ಯುವಾನ್' ಎಂಬ ದೊಡ್ಡ ಪಂಡಿತ ಇದ್ದ. ತನ್ನ ಅದ್ಭುತ ವಿವೇಕ-ಜಾಣ್ಮೆಗಳಿಂದ ಆತ ರಾಷ್ಟ್ರವನ್ನು ಚೆನ್ನಾಗಿ ಆಳಬೇಕೆಂದು ಬಯಸುತ್ತಿದ್ದ. ದೊರೆಯ ದರಬಾರಿನಲ್ಲಿ ದೊಡ್ಡ ದೊಡ್ಡ ಉದ್ಯೋಗಗಳನ್ನು ಸಂಪಾದಿಸಿದ. ಆದರೆ ನೋಡಿ ಸಹಿಸಲಾರದ ಕೆಲವರು ಕುಹಕಿಗಳು ದೊರೆಗೆ ಈತನ ಮೇಲೆ ದ್ವೇಷ ಹುಟ್ಟಿಸಿದರು. ಚೀನೀ ಸಾಹಿತ್ಯದಲ್ಲಿ ಬಹಳ ಮುಖ್ಯವಾದ ಗ್ರಂಥಗಳನ್ನು ಬರೆದಿದಾನೆ ಈತ. ಆದರೇನು? ದೊರೆ ಚಾಡಿಕೋರರ ಮಾತು ಕೇಳಿ ನಿಜವನ್ನು ಅರಿಯಲಾರದೆ ಹೋದ. ಈ ಪಂಡಿತನಿಗೆ ಏನು ಮಾಡಲೂ ಸಾಧ್ಯವಿರಲಿಲ್ಲ. ದೊರೆಗೆ ನಿಜವನ್ನು ತಿಳಿಸಿ ಕಣ್ಣು ತೆರೆಯಿಸುವ ಉದ್ದೇಶ್ಯದಿಂದ 'ಮಿಲೋ' ಎಂಬ ನದಿಯಲ್ಲಿ ಮುಳುಗಿಬಿಟ್ಟ." ಆತ ಸತ್ತ ದಿನವೇ ಈ ಉತ್ಸವದ ದಿನ. ಸಾಯುವ ದಿನಕ್ಕೆ ಆ ಪಂಡಿತನಿಗೆ ಮೂವತ್ತು ಮೂರು ವರುಷ. ಪಂಡಿತ ಸತ್ತಮೇಲೆ ದೊರೆಗೆ ತನ್ನ ತಪ್ಪು ತಿಳಿಯಿತು. ಆ ಪಂಡಿತನ ಹೆಣವನ್ನು ಹುಡುಕಲು ಅಪ್ಪಣೆಮಾಡಿದ. ಆದರೆ ಏನು ಲಾಭ?

ಆದ್ದರಿಂದ ಪ್ರತಿವರ್ಷವೂ ಐದನೆಯ ತಿಂಗಳಿನ ಐದನೆಯ ದಿನ ಆ ಪಂಡಿತನ ನೆನಪಿಗಾಗಿ ಒಂದು ಉತ್ಸವವನ್ನು ನಡೆಸಬೇಕೆಂದು ದೊರೆ ನಿಶ್ಚಯಿಸಿದ ಆ ನಿಶ್ಚಯವೇ ಈ ದೋಣಿ ಪಂದ್ಯಗಳಿಗೆ ಬೀಜ. "ಈ ಉತ್ಸವದ ದಿನ

ದೋಣಿಗಳು ಸರೋವರದಲ್ಲಿ ಜೊತೆ ಜೊತೆಗಾಗಿ ಪ್ರವಾಹಕ್ಕೆ ಎದುರಾಗಿ, ಮತ್ತೆ ಕೆಳಗಡೆಗೆ, ಹೀಗೆ ಸುತ್ತುತ್ತಾ ಇರುತ್ತವೆ. ಹೊಳೆಯಲ್ಲಿ ಮುಳುಗಿ ಹೋದವರ ಹೆಣವನ್ನು ಹುಡುಕುತ್ತಿದ್ದಂತೆ ಈ ದೋಣಿಗಳು ತಿರುಗುತ್ತಿರು ತ್ತವೆ. ಜಲ ದೇವತೆಯ ಸಹಾಯದಿಂದ ಹೆಣ ಸಿಗುತ್ತದೆ ಎಂಬ ನಂಬಿಕೆ ಯಿಂದ ತಿರುಗುತ್ತಿರುತ್ತವೆ" ಎಂದು ಹೇಳಿದರು ತಂದೆ.

ಈ ಕಥೆಗೂ ಈಗ ನಡೆಯುವ ಉತ್ಸವಕ್ಕೂ ಸನ್ನಿಹಿತ ಸಂಬಂಧ ಏನೂ ಕಾಣದೆ ಹೋದರೂ ಆಶ್ಚರ್ಯ ಪಡಬೇಡ ಎಂದೂ ಹೇಳಿದರು.

ಆ ಪಂಡಿತ ಕಿಯು – ಕಿಯಾಂಗಿನವನಲ್ಲವಲ್ಲ ? ಈ ಕ್ಯಾಂಟಾಂಗ್ ಸರೋವರದಲ್ಲಿ ಮುಳುಗಲಿಲ್ಲವಲ್ಲ ? ಜನರು ಈ ಉತ್ಸವವನ್ನು ಮಾಡುವು ದೇಕೆ ? ಹೀಗೆಲ್ಲ ನಮಗೆ ಅಚ್ಚರಿ ಎನಿಸಿದರೂ ತಂದೆಯವರು ಹೇಳಿದ ಕಥೆ ಯನ್ನು ಬಹಳ ಅಕ್ಕರೆಯಿಂದ ಕೇಳಿದೆವು

ಕೆರೆಯ ಕಟ್ಟಿಗೆ ಬಂದೆವು. ಆ ವೇಳೆಗಾಗಲೇ ಜನ ಕಿಕ್ಕಿರಿದು ಇದ್ದರು. ನಮಗೆ ನಿಲ್ಲಲು ಕೂಡಾ ಸ್ಥಳ ಸಿಗಲಿಲ್ಲ. ಐದಾರು ಪಂದ್ಯದ ದೋಣಿಗಳು ಸಿದ್ಧವಾಗಿವೆ. ಸಾಧಾರಣ ದೋಣಿಗಳಂತೆಯೇ ಇವೆ. ಸ್ವಲ್ಪ ಉದ್ದ ಹೆಚ್ಚು, ಅಗಲ ಕಡಮೆ. ಮುಂದುಗಡೆ ಚೆನ್ನಾಗಿ ಸಿಂಗರಿಸಿದ ದೆವ್ವದ ತಲೆಯನ್ನು ಕಟ್ಟಿದಾರೆ. ಕಡೆಯಲ್ಲಿ ಚುಕ್ಕಾಣಿಯ ಹತ್ತಿರ ಒಂದು ಬಾಲ ಕೂಡ ಇತ್ತು. ಹದಿನೈದು ಇಪ್ಪತ್ತು ಮಂದಿ ದೋಣಿಯ ಎರಡೂ ಬದಿಯಲ್ಲಿ ಕೂತು ಹುಟ್ಟು ಹಾಕುತ್ತಿದಾರೆ. ಪ್ರತಿಯೊಂದು ದೋಣಿಯಲ್ಲೂ ಮಧ್ಯೆ ಒಂದು ಮಂಟಪ ಕಟ್ಟಿದೆ. ಅದರಲ್ಲಿ ಒಬ್ಬ ದೊಡ್ಡ ನಗಾರಿ ಬಾರಿಸುತ್ತಾ, ಇನ್ನೊಬ್ಬ ದೊಡ್ಡ ಗಂಟೆ ಬಾರಿಸುತ್ತಾ ಇದಾರೆ. ಇನ್ನೊಬ್ಬ ದೋಣಿಯ ಮುಂದೆ ದೊಡ್ಡ ಬಿದಿರು ಬೆತ್ತವನ್ನು ಹಿಡಿದು ನಿಂತಿದಾನೆ. ದಡದಲ್ಲಿರುವ ಜನಸಮೂಹದಲ್ಲಿ ಅಲ್ಲಲ್ಲಿ ಒಂದು ಉದ್ದನೆಯ ಬಿದಿರು ಕಟ್ಟಿಗೆಗೆ ಕೆಂಪು ರೇಷ್ಮೆ ಬಾವುಟವನ್ನು ಕಟ್ಟಿ ಒಬ್ಬ ನಿಂತಿರುತ್ತಾನೆ. ಎರಡು ದೋಣಿ ಪೋಟಿಮಾಡಿ ಈ ಬಾವುಟ ಇರುವ ಸ್ಥಳಕ್ಕೆ ಬಂದು ಈ ಬಾವುಟವನ್ನು ಹಿಡಿದುಕೊಳ್ಳಲು ಪ್ರಯತ್ನಿಸು ತ್ತವೆ. ಬಾವುಟವನ್ನು ತೆಗೆದುಕೊಂಡವರು ಗೆದ್ದಂತೆ. ಈ ಪಂದ್ಯಕ್ಕೆ ಕೊನೆಯೆ ಇಲ್ಲ. ಬಾವುಟವನ್ನು ತೆಗೆದುಕೊಂಡ ಕೂಡಲೆ ಆ ದೋಣಿ ಹಿಂದಕ್ಕೆ ಮರಳುತ್ತದೆ. ಒಂದೊಂದು ಪಂದ್ಯ ನಡೆಯುವಷ್ಟು ಹೊತ್ತು

ವಾದ್ಯಗಳು, ಗಂಟೆಯ ನಾದ, ದೋಣಿಗೆ ಹುಟ್ಟು ಹಾಕುವವರೂ ನೋಡುವ ವರು ಹಾಕುವ ಕೇಕೆಗಳು-ಎಲ್ಲವೂ ಕೋಲಾಹಲವಾಗಿ ಇರುತ್ತದೆ. ದೋಣಿ ಗಳು ಬಾವುಟದ ಹತ್ತಿರಕ್ಕೆ ಬಂದ ಹಾಗೆಲ್ಲ ಬಾಣ ಬಿರುಸುಗಳನ್ನು ಬಿಡು ತ್ತಾರೆ. ಈ ಪಂದ್ಯದಲ್ಲಿ ಯಾವಾಗಲೂ ಒಂದೇ ದೋಣಿಯಿರದು ಹುಟ್ಟು ಹಾಕುವವರೂ ಬದಲಾಗುತ್ತ ಇರುತ್ತಾರೆ ದೋಣಿಗಳನ್ನು ಬದಲಾಯಿಸಿ ಪಂದ್ಯಗಳನ್ನು ನಡೆಸುತ್ತಾರೆ.

ಈ ಉತ್ಸವ ನಡೆಯುವಾಗ ವಾತಾವರಣ ಬಹಳ ಅನುಕೂಲವಾಗಿರು ತ್ತದೆ. ನಾವು ನೋಡಿದ ದಿನ ಸೂರ್ಯಾಸ್ತಮಯದ ವೇಳೆಯಲ್ಲಿ ಸೂರ್ಯಕಿರಣ ಗಳು ಸರೋವರದ ನೀರಿನ ಮೇಲೆ ಬಿದ್ದು ಆ ಕೆಂಬಣ್ಣವೂ ಅಂದವಾಗಿತ್ತು. ದೋಣಿ ನಡಸುವವರದೆಲ್ಲಾ ಒಂದೇ ಬಗೆಯ ಉಡುಪು. ನೀಲಿ, ಎಲೆ ಹಸಿರು ಅಥವಾ ಬೂದಿಗಂದು. ದೋಣಿಗಳಿಗೆ ಕೂಡ ಬಂಗಾರಗೆಂಪು ಬಣ್ಣ ಬಳಿದು ಬಣ್ಣ ಬಣ್ಣದ ಬಾವುಟಗಳನ್ನು ಕಟ್ಟಿರುತ್ತಾರೆ. ನೋಡಲು ಬಂದವರಲ್ಲಿ ಬಹಳ ಜನ ಕೆಂಪು ಬಾವುಟಗಳನ್ನೂ ಪಟಾಕಿಗಳನ್ನೂ ತಂದಿದ್ದರು. ನಾವೂ ಬಾವುಟ ಹಿಡಿದುಕೊಂಡು ಹೋಗಿದ್ದೆವು. ನಮ್ಮ ಅಣ್ಣನ ಮಗ ಬಾವುಟವನ್ನು ಗಟ್ಟಿ ಯಾಗಿ ಕಟ್ಟಲು ಮರೆತಿದ್ದ. ದೋಣಿಗಳು ಬಾವುಟಕ್ಕೆ ತೀರ ಹತ್ತಿರ ಬರುವ ಹೊತ್ತಿಗೆ ಆ ಬಾವುಟ ನೀರಿನಲ್ಲಿ ಬಿದ್ದು ಹೋಯಿತು. ನಮ್ಮ ಸುತ್ತಲೂ ಇದ್ದವರೆಲ್ಲ ನಿಶ್ಶಬ್ದವಾಗಿ ಅದನ್ನು ನೋಡುತಿದ್ದರು. ಬಾವುಟ ನೀರಿನಲ್ಲಿ ಬೀಳುವುದು ಶುಭ ಸೂಚಕವಲ್ಲ. ಅಣ್ಣನಿಗೆ ಬಹಳ ಅವಮಾನವಾದ ಹಾಗಾಯಿತು. ದೋಣಿಯಲ್ಲಿದ್ದವರ ಕ್ಷಮೆ ಬೇಡಿಕೊಂಡ. ಈ ಸಂಗತಿ ನಡೆದಮೇಲೆ ನಾವು ಅಲ್ಲಿ ಬಹಳ ಹೊತ್ತು ಇರಲಿಲ್ಲ!

ಈ ಉತ್ಸವಕ್ಕೆ ಮಾಡುವ ಭಕ್ಷ್ಯ ಭೋಜ್ಯಗಳಿಗೂ ಚೌ ಯುವಾನ್ ಪಂಡಿತನ ವಿಷಾದ ಮರಣಕ್ಕೂ ಸಂಬಂಧವಿದೆ. 'ಟ್ಸಂಗ್ ಟಜ್' ಎಂಬ ಕಡುಬನ್ನು ಈ ಹಬ್ಬಕ್ಕೆ ತನಿಯಾಗಿ ಮಾಡುತ್ತಾರೆ. ತ್ರಿಕೋಣಾಕಾರದ ತುಂಡುಗಳಾಗಿ ಮಾಡಿ ಅಗಲವಾದ ಹಸಿ ಎಲೆಗಳಲ್ಲಿ ಇದನ್ನು ಇಟ್ಟು ಕೊಡು ತ್ತಾರೆ. ಇದು ಆವಿಯಲ್ಲಿ ಬೇಯುತ್ತದೆ. ಅದರ ಸುತ್ತ ಕೆಂಪು ರೇಷ್ಮೆ ರಿಬ್ಬನುಗಳನ್ನು ಕಟ್ಟುತ್ತಾರೆ. ಜನರು ಈ ಕಡುಬನ್ನು ನದಿಯ ಬಳಿಗೆ ತಂದು ಆ ಪಂಡಿತನಿಗೆ ನೈವೇದ್ಯವಾಗಿ ನೀರಿನಲ್ಲಿ ಬಿಡುತ್ತಾರೆ. ನಾವು ಚಿಕ್ಕವ

ರಾಗಿದ್ದಾಗಲೇ ಈ ಆಹಾರ ಹಿಂದೆ ಬಿದ್ದಿತ್ತು. ಈ ದೋಣಿ ಪಂದ್ಯಗಳ ಸಮಯಕ್ಕೇ ಆ ಕಡುಬನ್ನು ಮಾಡುವುದು. ವರ್ಷದಲ್ಲಿ ಬೇರೆ ಯಾವಾಗಲೂ ಮಾಡರು. ತಿನ್ನಲು ಎಷ್ಟೋ ರುಚಿಯಾಗಿದ್ದರೂ, ಸಿದ್ಧಮಾಡಲು ವೆಚ್ಚ ಹೆಚ್ಚು. ನಾವು ಆ ಕಡುಬನ್ನು ಎರಡು ಬಗೆಯಲ್ಲಿ ಮಾಡಿ ಒಂದಕ್ಕೆ ಸಕ್ಕರೆ ತುಂಬಿಸಿ, ಇನ್ನೊಂದಕ್ಕೆ ಕಾರತುಂಬಿಸಿ ತಿನ್ನುತ್ತಿದ್ದೆವು.

ಈ ಉತ್ಸವ ಸಮಯದಲ್ಲಿ ಮಾಡುವ ಇನ್ನೊಂದು ಅಡಿಗೆ ನನಗೆ ಬಹಳ ಇಷ್ಟ. ಹಂದಿಯ ಮಾಂಸವನ್ನು ಚಿಕ್ಕಚಿಕ್ಕ ತುಂಡುಗಳಾಗಿ ಕತ್ತರಿಸಿ ಉಪ್ಪಿನಲ್ಲಿಟ್ಟದ್ದನ್ನು ಸೋಯಾ ಬೇಳೆ–ಹಿಟ್ಟು ಕಲಸಿ ಹಸಿ ತಾವರೆ ಎಲೆಯಲ್ಲಿಟ್ಟು, ಅದನ್ನು ಹುಲ್ಲಿನಲ್ಲಿ ಬಿಗಿದು ಸುತ್ತಿ, ಆವಿಯಲ್ಲಿ ಬೇಯಿಸಿದರೆ ನನಗೆ ಬಹಳ ಇಷ್ಟ. ಆ ಪದಾರ್ಥ ಹಸಿ ತಾವರೆ ಎಲೆಗಳ ಸುವಾಸನೆಯಿಂದ ಕೂಡಿ ಬಹಳ ರುಚಿಯಾಗಿರುತ್ತಿತ್ತು.

ಈ ಹಬ್ಬ ನಡೆಯುವ ಕಾಲ ವಸಂತ ಮಾಸ ಆರಂಭವಾಯಿತೆಂಬ ಸೂಚನೆ. ಕೈಸಾಲೆಯ ಗೋಡೆಗಳಿಗೆ ವಸಂತಕ್ಕೆ ಸಂಬಂಧಿಸಿದ ಚಿತ್ರಗಳನ್ನು ನೇತುಹಾಕುವ ಕಾಲ. ತಾವರೆ ಹೂ, ದಾಳಿಂಬೆ ಹಣ್ಣುಗಳ ಚಿತ್ರಗಳಿಂದ ಗೋಡೆ ಸಿಂಗಾರವಾಗುತ್ತಿತ್ತು. ನಮ್ಮ ತಂದೆಗೆ ಓದು ಹೇಳಿದ ಗುರುಗಳು ಒಂದು ದೊಡ್ಡ ತಾವರೆ ಹೂ, ಅದರ ದಂಟಿನ ಮೇಲೆ ಒಂದು ಹಕ್ಕಿ. ಇಂಥ ಚಿತ್ರವನ್ನು ಬರೆದಿದ್ದರು. ನಮ್ಮ ಕೈಸಾಲೆಯಲ್ಲಿ ಆ ದೊಡ್ಡ ಚಿತ್ರಪಟ ಈಗಲೂ ಇದೆ. ಆ ಚಿತ್ರದಲ್ಲಿನ ಕೆಂಪು, ಎಲೆ ಹಸಿರು ಬಣ್ಣಗಳನ್ನು ನೋಡಿ ನಾನು ಮುಗ್ಧನಾಗಿ ನಿಲ್ಲುತ್ತಿದ್ದೆ. ವಸಂತ ಕಾಲದಲ್ಲೆಲ್ಲಾ ಈ ಚಿತ್ರ ನಮ್ಮ ಕೈಸಾಲೆಯಲ್ಲೇ ಇರುತ್ತಿತ್ತು.

ನಮ್ಮ ತೋಟದಲ್ಲಿ ತಾವರೆ ಹೂ ಇಲ್ಲ. ಈ ಹಬ್ಬಕ್ಕೆ ಹೂವಿನ ಜಾಡಿಗಳಲ್ಲಿ ಅಲಂಕಾರಮಾಡಲು ರೈತರಿಂದಲೋ ಹೂಗಳನ್ನು ಮಾರುವವರಿಂದಲೋ ಕೊಂಡುಕೊಳ್ಳುತ್ತಿದ್ದೆವು. ನಮ್ಮ ಹಿತ್ತಿಲಲ್ಲಿ ಇದ್ದ ದಾಳಿಂಬೆ ಗಿಡವೇನೋ ಈ ಉತ್ಸವದ ಹೊತ್ತಿಗೆ ಸರಿಯಾಗಿ ತಪ್ಪದೆ ಹೂ ಬಿಡುತ್ತಿತ್ತು. ಆ ಒಂದೊಂದು ದಾಳಿಂಬೆ ಹೂವೂ ನನಗೆ ಎಷ್ಟೋ ಸಂತೋಷ ಕೊಡುತ್ತಿತ್ತು. ನಮ್ಮ ಮೂರನೆ ದೊಡ್ಡಪ್ಪ ಈ ಉತ್ಸವದ ದಿನ ಈ ದಾಳಿಂಬೆ ಹೂಗಳನ್ನೆಲ್ಲ ಆರಿಸಿಕೊಂಡು ನಮ್ಮ ಮನೆಯ ಹುಡುಗಿಯರೆಲ್ಲ ಮುಡಿದುಕೊಳ್ಳಬೇಕು

ಎನ್ನುತ್ತಿದ್ದರು. ಹುಡುಗಿಯರು ತಮ್ಮ ಮುಡಿಯಲ್ಲಿ ಆ ಹೂಗಳನ್ನು ಸೆಕ್ಕಿಸಿಕೊಂಡು ಬಹಳ ಅಂದವಾಗಿ ಕಾಣುತ್ತಿದ್ದರು.

ಚೀನಾ ಪಂಡಿತನ ವಿಷಾದಮರಣ ಈ ಆನಂದದ ಉತ್ಸವಕ್ಕೆ ಹೇಗೆ ಕಾರಣವಾಯಿತೋ! ನಾನು ಸದಾ ಆಲೋಚಿಸುತ್ತೇನೆ. ಚೀನಾ ಸಾಹಿತ್ಯದಲ್ಲಿ ಆ ಪಂಡಿತನಿಗೆ ಅಗ್ರಸ್ಥಾನ ಇದೆ. ಪಂಡಿತರಿಗೆ ಕೂಡ ಆತನ ರಚನೆ ಅರ್ಥವಾಗುವುದು ಕಷ್ಟ. ಆತನ ಸಾಹಿತ್ಯ-ಸೇವೆಗಿಂತ ಆತ ತೋರಿಸಿದ ದೇಶಭಕ್ತಿ ಮಾತ್ರ ಪ್ರಜಾ ಹೃದಯದಲ್ಲಿ ಆತನಿಗೆ ಒಂದು ಪ್ರತ್ಯೇಕ ಸ್ಥಾನವನ್ನು ಕಲ್ಪಿಸಿದೆ.

---



ಬಾತುಗಳನ್ನು ಮಾರುವವನು



ಮಕ್ಕಳ ಆಟದ ಸಾಮಾನು

## ೨೪. ಪಕ್ಷಿವಾಹನ

ನಮ್ಮ ದೇಶದ ಜನರಿಗೆ ಹದ್ದು ಬಹಳ ಪವಿತ್ರವಾದ ಅಮೂಲ್ಯವಾದ ಪಕ್ಷಿ. ತಾವೋ ಪಂಥದ ಪುರಾಣಗಳಲ್ಲಿ ಹದ್ದಿಗೆ ಬಹಳ ಮುಖ್ಯ ಸ್ಥಾನವಿದೆ. ಆ ಹಕ್ಕಿ ಎಷ್ಟು ಯುಗಗಳಿಂದ ಬರುತ್ತಿದೆಯೋ ಹೇಳಲು ಸಾಧ್ಯವಿಲ್ಲ. ಸ್ವರ್ಗ ಲೋಕದಲ್ಲಿರುವ ದೇವತೆಗಳೇ ಮುಂತಾದವರು ಈ ಹದ್ದನ್ನೇ ವಾಹನ ವಾಗಿ ಮಾಡಿಕೊಂಡು ತಿರುಗುತ್ತಾರೆಂದು ನಮ್ಮ ಪುರಾಣಗಳಲ್ಲಿ ಹೇಳಿದೆ. 'ಷೋಕಾಂ ಚೀ' ಎಂಬ ಸುಪ್ರಸಿದ್ಧ ವ್ಯಕ್ತಿಯೊಬ್ಬ ಇದ್ದ. ಒಂದುದಿನ ಮಧ್ಯಾಹ್ನ ಆತ ಸಣ್ಣದಾಗಿ ತೂಕಡಿಸಿ ಎದ್ದ! ಎದ್ದು ಹೀಗೆ ಹೇಳಿದ. 'ನನಗೆ ಒಂದು ಕನಸು ಬಿತ್ತು. ಆ ಕನಸಿನಲ್ಲಿ ಸ್ವರ್ಗದಿಂದ ಒಂದು ಹದ್ದು ಭೂಮಿಗೆ ಬಂತು. ನಾನು ಆ ಹದ್ದಿನ ವಾಹನವನ್ನು ಹತ್ತಿ ಗುಡ್ಡಗಳ ಮೇಲೆ ಎಲ್ಲಿಗೋ ಹೋದೆ. ನನ್ನ ಆತ್ಮ ಇಲ್ಲಿಂದ ಹೊರಟು ಹೋಯಿತು. ನಾನು ಇನ್ನು ಮದ್ದನ್ನು ತೆಗೆದು ಕೊಳ್ಳಬೇಕಾದ್ದೇ ಇಲ್ಲ.' ಹೀಗೆ ಹೇಳಿದ ಸ್ವಲ್ಪ ಹೊತ್ತಿಗೇ ಅವನ ಪ್ರಾಣ ಹೋಯಿತು. ನಮ್ಮ ಸಾಹಿತ್ಯದಲ್ಲಿ ಇಂಥ ಕಥೆಗಳು ಲೆಕ್ಕವಿಲ್ಲದಷ್ಟು ಇವೆ. 'ಪಕ್ಷಿವಾಹನ ಹತ್ತಿ ದೇವತೆಗಳನ್ನು ಸೇರುವುದು' ಎಂದು ನಮ್ಮಲ್ಲಿ ನಾಣ್ಣುಡಿಯೆ ಆಗಿದೆ. ನರಕದಲ್ಲಿ ಬಾಧೆ ಪಡದಂತೆ ಹಾಯಾಗಿ ಸ್ವರ್ಗದಲ್ಲಿ ಸುಖವನ್ನು ಅನುಭವಿಸುವುದು ಎಂದು ಅದಕ್ಕೆ ಅರ್ಥ.

ನಮ್ಮ ಅಜ್ಜ ತನ್ನ ಎಂಬತ್ತೆರಡನೆ ವರ್ಷದಲ್ಲಿ ಪಕ್ಷಿವಾಹನ ಏರಿ ದೇವ ತೆಗಳಲ್ಲಿ ಸೇರಿಹೋದರು. ಅವರಿಗೆ ಆ ವಯಸ್ಸಿನಲ್ಲೂ ಏನೂ ಬಾಧೆಯಿರಲಿಲ್ಲ; ಅಷ್ಟೇ ಅಲ್ಲ. ಆವತ್ತು ಬೆಳಗ್ಗೆ ಕೂಡ ತನಗೆ ಗಟ್ಟಿಯಾಗಿ ಅಗಿಯುವ ತಿಂಡಿ ಕೊಡೆಂದು ನಮ್ಮ ಸೇವಕನನ್ನು ಕೇಳಿದರು. ಪರಿಚಾರಕ ಅವರು ಕೇಳಿದ ಆಹಾರವನ್ನು ತಂದಿಟ್ಟು ಆ ಅಡಿಗೆಯ ರುಚಿ ನೋಡುತ್ತಾ ಏನೋ ಹೇಳುತ್ತಾ ಹಾಗೇ ಪ್ರಾಣ ಬಿಟ್ಟರು ಅಜ್ಜ.

ನಮ್ಮ ಅಜ್ಜಿಯನ್ನು ಮನೆಯಲ್ಲಿದ್ದ ಇತರ ಹಿರಿಯರನ್ನು ಕೂಡಲೇ ಕರೆದರು. ಕೆಲಸದ ಮೇಲೆ ಪೇಟೆಗೆ ಹೋಗಿದ್ದವರಿಗೆಲ್ಲ ಹೇಳಿಕಳಿಸಿದರು. ಅವರೆಲ್ಲರೂ ಗೋಳೋ ಎಂದು ಅಜ್ಜನ ಕೋಣೆಗೆ ಬಂದರು. ನಮ್ಮ ಕುಟುಂಬ ದವರೆಲ್ಲರೂ ಸೇರಿ ಮಾತಾಡಿ, ಯಾರು ಯಾರು ಏನು ಮಾಡಬೇಕೋ ನಿಶ್ಚ ಯಿಸಿದರು. ನಮ್ಮ ಅಜ್ಜಿಯ ಪಕ್ಕದಲ್ಲೇ ಇದ್ದು ನಮ್ಮ ಬೊಡ್ಡಮ್ಮಂದಿರು ಇಬ್ಬರು ಆಕೆಯನ್ನು ಸಂತೈಸುತ್ತಿದ್ದರು. ಬಹಳ ದಿನಗಳ ಕೆಳಗೆಯೆ ಶವದ ಪೆಟ್ಟಿಗೆ, ಸತ್ತವರಿಗೆ ಹೊದಿಸುವ ಬಟ್ಟೆಗಳು, ಉಡಿಸುವ ಬಟ್ಟೆಗಳು ಎಲ್ಲವೂ ಸಿದ್ಧವಾಗಿದ್ದವು. ಈಗ ಮಾಡಬೇಕಾದ್ದೆಲ್ಲಾ ನಮ್ಮ ಆಚಾರ ಸಂಪ್ರದಾಯ ಗಳ ಪ್ರಕಾರ ಉತ್ತರಕ್ರಿಯೆಗಳನ್ನು ಮಾಡುವುದೊಂದೇ. ಮನೆಯಲ್ಲೆಲ್ಲ ಬಿಳಿ ಬಟ್ಟೆಯ ತೆರೆಗಳನ್ನು ಕಟ್ಟಿದೆವು. ನಮ್ಮಲ್ಲಿ ಶೋಕದ ಬಣ್ಣ ಕಪ್ಪು ಅಲ್ಲ, ಬಿಳುಪು, ಸಿಂಪಿಗಳನ್ನು ಕರೆದು ನಮಗೆಲ್ಲರಿಗೂ ಬಿಳಿಯ ಉಡುಪನ್ನು ಹೊಲೆಸಿದರು. ನಮ್ಮ ದೊಡ್ಡಮ್ಮಂದಿರು, ಅಕ್ಕಂದಿರು ಕಲೆತು ನಮಗೆ ಬಿಳೀ ಟೋಪಿಗಳನ್ನು ಸಿದ್ಧಮಾಡಿದರು. ನಾನೂ ನನ್ನ ಓರಗೆಯ ಹುಡುಗರೂ ಸೇರಿ ದೊಡ್ಡ ಬಿಳೀ ಕಾಗದಗಳ ಮೇಲೆ ಅಜ್ಜನ ಸಾವಿನ ಸುದ್ದಿಯನ್ನು ಬರೆದು ಊರುಬಾಗಿಲಿಗೆಲ್ಲಾ ಅಂಟಿಸಿದೆವು. ಅಜ್ಜನ ಸಾವಿನ ಸುದ್ದಿಯನ್ನು ಊರಿನ ಪತ್ರಿಕೆಗಳು ಪ್ರಕಟಿಸಿದವು.

ಅಜ್ಜನ ಮೈಗೆ ಕಟ್ಟಕಡೆಯ ಸ್ನಾನ ಮಾಡಿಸಿದ್ದಾಯಿತು. ಕಚ್ಚಾ ರೇಷ್ಮೆ ಬಟ್ಟೆಯನ್ನು ಮೈಗೆ ಹಲವು ಸುತ್ತು ಸುತ್ತಿದರು. ಅದರ ಮೇಲೆ ಈ ಸಂದರ್ಭಕ್ಕೆ ಹೊಲಿಸಿದ ರೇಷ್ಮೆ ಉಡುಪನ್ನು ಉಡಿಸಿದರು. ಅವರಿಗೆ ಉಡಿಸಿದ ಉಡುಪು ಮಿಂಗ್ ವಂಶದ ಸಂಪ್ರದಾಯದ್ದು. ಅಜ್ಜನಿಗೆ ಆ ಪದ್ಧತಿ ಬಹಳ ಇಷ್ಟ. ಮಿಂಗ್ ವಂಶದ ಒಬ್ಬ ಪಂಡಿತ ತನ್ನ ಕೊಠಡಿಯಲ್ಲಿ ಹಾಯಾಗಿ ನಿದ್ದೆ ಹೋಗುತ್ತಿದ್ದಂತೆ ಕಾಣ ಬಂದರು ನಮ್ಮ ಅಜ್ಜ. ಅವರ ತಲೆಯ ಕಡೆ ಒಂದು ಧೂಪಪಾತ್ರವನ್ನು ಇಟ್ಟು ಸದಾ ಅದರಲ್ಲಿ ಧೂಪ ಹಾಕುತ್ತಾ ಇದ್ದರು. ಆವತ್ತು ಸಂಜೆ ಒಬ್ಬ ಪುರೋಹಿತನನ್ನು ಕರೆದು ಶವದ ಪೆಟ್ಟಿಗೆಯನ್ನು ಮುಚ್ಚಿದ ವಿಧಿಯನ್ನು ಮುಗಿಸಿದರು. ಮೂರನೆಯ ನಡುಮನೆಯಲ್ಲಿ ಮಧ್ಯೆ ಪೆಟ್ಟಿಗೆಯನ್ನು ತಂದಿಟ್ಟರು. ಕುಟುಂಬದವರೆಲ್ಲಾ ವಿಷಾದ ಸೂಚಕವಾದ ಬಿಳೀ ಉಡುಪನ್ನು ಉಟ್ಟು ಬಂದು ಶವದ ಪೆಟ್ಟಿಗೆಯ

ಮುಂದೆ ನಮಸ್ಕರಿಸಿದರು. ನಾಲ್ವರು ವಾಹಕರು ಅಜ್ಜನ ಕಳೇಬರವನ್ನು ಒಂದು ದೊಡ್ಡ ಬಿಳಿಯ ಹಚ್ಚಡದಲ್ಲಿ ಇಟ್ಟುಕೊಂಡು ಶವದ ಪೆಟ್ಟಿಗೆಯ ಬಳಿಗೆ ತಂದರು. ಶರೀರವನ್ನು ಆ ಪೆಟ್ಟಿಗೆಯಲ್ಲಿಟ್ಟು ಅಜ್ಜನಿಗೆ ಇಷ್ಟವಾದ ಅನೇಕ ಪದಾರ್ಥಗಳನ್ನು ಅದರಲ್ಲಿ ತುಂಬಿದರು. ಹೃದಯವನ್ನು ಅಲು ಗಾಡಿಸುವ ಶೋಕ ಸ್ವರವನ್ನು ಬಾರಿಸಿದರು. ಪುರೋಹಿತ ಮಂತ್ರಗಳನ್ನು ಹೇಳಿ . ವಾಹಕರು ಶವದ ಪೆಟ್ಟಿಗೆಯಲ್ಲಿದ್ದ ಕಳೇಬರಕ್ಕೆ ಹೊದಿಸಿದರು. ಪೆಟ್ಟಿಗೆಯ ಮುಚ್ಚಳವನ್ನು ಹಾಕಿ ಮೊಳೆ ಹೊಡೆದು ಸಂದುಗಳಿಗೆಲ್ಲಾ ಚೆನ್ನಾಗಿ ಬಣ್ಣ ಬಳಿದರು. ಅಜ್ಜನ ಮುಖವನ್ನು ಇನ್ನು ಮುಂದೆ ನೋಡ ಲಾರೆವಲ್ಲಾ ಎಂದು ನಮಗೆಲ್ಲರಿಗೂ ದುಃಖವಾಯಿತು.

ನಮ್ಮ ಹಿರಿಯರ ಸ್ಮಾರಕಗಳು ಇರುವ ಸ್ಥಳದಲ್ಲಿ ಅಷ್ಟೇ ಎತ್ತರವಾಗಿ ಒಂದು ಜಗಲಿಯನ್ನು ಕಟ್ಟಿದರು. ಎಲ್ಲವನ್ನೂ ಬಿಳಿಯ ಬಟ್ಟೆಯಿಂದ ಹೊದಿಸಿದರು. ಅದರ ಮೇಲೆ ನಮ್ಮ ತಂದೆ ಚಿತ್ರಿಸಿದ ಅಜ್ಜನ ಚಿತ್ರಪಟ ವನ್ನು ಇಟ್ಟರು. ಪಟದ ಕೆಳಗಡೆ ಸತ್ತವರ ಹೆಸರಿನ ಒಂದು ಹಲಗೆ, ಅದರ ಕೆಳಗೆ ಒಂದು ಮಣೆಯ ಮೇಲೆ ನೈವೇದ್ಯಕ್ಕಾಗಿ ಭಕ್ಷ-ಭೋಜ್ಯ, ರೊಟ್ಟಿ ಇರಿಸಿದರು. ಎರಡು ಬಿಳಿ ಮೇಣದ ಬತ್ತಿ, ಧೂಪ ಹಾಕುವ ಒಂದು ಪಾತ್ರೆ ಇಟ್ಟರು.

ಮೂರನೆಯ ದಿನ ಬೆಳಗ್ಗೆ ನಮ್ಮ ಬಳಗದವರೂ, ಗೆಳೆಯರೂ ಅನೇಕರು ಅಜ್ಜನ ಕಟ್ಟಕಡೆಯ ದರ್ಶನಕ್ಕಾಗಿ ಬಂದರು. ಹೀಗೆ ಮಾತನಾಡಿಸಲು ಬರುವಾಗ ನೀಲಿ ಬಣ್ಣದ ರೇಷ್ಮೆ ಬಟ್ಟೆಯ ಮೇಲೆ "ಪಕ್ಷಿ ವಾಹನದ ಮೇಲೆ ದೇವತೆಗಳ ಬಳಿ ಸಾರುವುದು" ಎಂದು ಬಂಗಾರದ ಬಣ್ಣದಲ್ಲಿ ಬರೆದು ತರುವುದು ನಮ್ಮ ಆಚಾರ. ಇಲ್ಲದಿದ್ದರೆ ಬಿಳಿಯ ರೇಷ್ಮೆ ಬಟ್ಟೆಯ ಮೇಲೆ ಸತ್ತು ಹೋದವರ ಗುರುಗಳನ್ನು ವರ್ಣಿಸುವ ಪದ್ಯವೊಂದನ್ನಾದರೂ ಬರೆದು ತರು ತ್ತಾರೆ. ಸತ್ತು ಹೋದವರ ಮಕ್ಕಳು ಬಿಳಿಯ ತೆರೆಯ ಹಿಂದೆ ಇದ್ದು ಆಗಾಗ ಬಳಗದವರಿಗೂ, ಗೆಳೆಯರಿಗೂ ಕೃತಜ್ಞತೆಯನ್ನು ತಿಳಿಸುತ್ತಾ ಇರುತ್ತಾರೆ. ನಮ್ಮ ಭಾವನಂಥ ಹತ್ತಿರದ ಬಂಧುಗಳು ಮಾತಾಡಿಸಲು ಬಂದವರನ್ನು ಒಳಕ್ಕೆ ಕರೆತರುವುದು ಮುಂತಾದ ಕೆಲಸಗಳಲ್ಲಿ ಇದಾರೆ.

ನಾನೂ ನನ್ನ ತಮ್ಮಂದಿರೂ ಜಗಲಿಯ ಹತ್ತಿರ ನಿಂತು ಮಾತಾಡಿಸಲು ಬಂದವರನ್ನು ವರಸೆಯಾಗಿ ಕಳಿಸುತ್ತಿದೇವೆ. ಮಾತಾಡಿಸಲು ಯಾರಾದರೂ ಬಂದರೆ ಸಿಂಹದ್ವಾರದಲ್ಲೇ ಇರುವ ವಾದ್ಯಗಳನ್ನು ಬಾರಿಸುತ್ತಾರೆ. ಬಂದವರು ನೇರಾಗಿ ಜಗುಲಿಯ ಬಳಿಗೆ ಹೋಗುತ್ತಾರೆ. ಹೊಸ ಹೊಸದಾಗಿ ಒಬ್ಬೊಬ್ಬರು ಬಂದಾಗಲೆಲ್ಲಾ ಎರಡು ಊದಿನ ಕಡ್ಡಿಗಳನ್ನು ಹಚ್ಚುವುದು ನನ್ನ ಕೆಲಸ. ಬಂದವರು ಜಗಲಿಗೆ ನಮಸ್ಕಾರ ಮಾಡಿ, ಸತ್ತವರ ಮಕ್ಕಳು ಮೊಕ್ಕುವ ಸ್ಥಳವನ್ನು ನಮಸ್ಕರಿಸಿ ಹೊರಟು ಹೋಗುತ್ತಾರೆ. ಪಕ್ಕದಲ್ಲಿರುವ ನಮ್ಮನ್ನು ನೋಡಿ ಬಾಗುತ್ತಾರೆ. ನಾವು ಕೂಡ ಅವರಿಗೆ ಬಗ್ಗಿ ನಮಸ್ಕಾರ ಮಾಡುತ್ತೇವೆ. ಮಾತು ಇಲ್ಲವೇ ಇಲ್ಲ. ಹೀಗೆ ಬಂದು ಹೋಗುವವರಿಗೆ ಹೋಗುವಾಗ ಮಡಿಸಿಟ್ಟ ಒಂದು ಬಿಳಿಯ ಬಟ್ಟೆಯನ್ನು ಕೊಡುತ್ತಾರೆ. ಮಾತನಾಡಿಸಲು ಬಂದುದಕ್ಕೆ ಅದು ಗುರುತು. ಎರಡನೆಯ ಹಜಾರದಲ್ಲಿ ಇದು ನಡೆಯುತ್ತದೆ. ಅಲ್ಲೇ ನಮ್ಮ ಕುಟುಂಬದವರಿಬ್ಬರು ಮಾತನಾಡಿಸಲು ಬಂದವರನ್ನು ಊಟಕ್ಕೆ ನಿಲ್ಲಬೇಕೆಂದು ಕರೆಯುತ್ತಾರೆ. ಮೊದಲನೆಯ ಹಜಾರದಲ್ಲೂ ಇದೇ ರೀತಿ ಆಹ್ವಾನಿಸುತ್ತಾರೆ ಇರಲು ಸಾಧ್ಯವಿಲ್ಲದೆ ಹೊರಟು ಹೋದರೆ ಹೆಬ್ಬಾಗಿಲಿನಲ್ಲಿರುವ ವಾದ್ಯಗಳು ಧ್ವನಿಮಾಡುತ್ತವೆ. ಈ ಬೀಳುಕೊಳವೆಯಲ್ಲಿ ಮೊಳಗುವ ವಾದ್ಯ ಬೇರೆ ರೀತಿ.

ಈ ವಾದ್ಯದ ರೀತಿಯಿಂದಲೇ ಒಳಕ್ಕೆ ಬರುತ್ತಿದಾರೋ ಹೊರಕ್ಕೆ ಹೋಗುತ್ತಿದಾರೋ ತಿಳಿಯಬೇಕು. ಆದ್ದರಿಂದಲೇ ಇವುಗಳ ಬಗೆ ಬೇರೆ ಬೇರೆ. ಮಾತನಾಡಿಸಲು ಬಂದವರು ಕರಿಯ ಜುಬ್ಬಾ ಒಂದನ್ನು ತೊಟ್ಟು ಬರುತ್ತಾರೆ. ಈ ಸಂತೈಸುವ ಕೆಲಸ ಆವತ್ತು ಹಗಲೂ ಇರುಳೂ ನಡೆಯುತ್ತವೆ. ನಮ್ಮ ಕುಟುಂಬಕ್ಕೆ ಬಂಧುಗಳೂ ಗೆಳೆಯರೂ ಹೆಚ್ಚು. ಅಲ್ಲದೆ ಅಣ್ಣನಿಗೆ ಊರಿನಲ್ಲಿ ಮಾತುಬಾರಿ ಹೆಚ್ಚು. ಆತ ವಾರಶಾಲೆಯ ನಿರ್ವಾಹಕ ಸಮಿತಿಗೆ ಅಧ್ಯಕ್ಷ. ಆದ್ದರಿಂದ ಬಂದು ಹೋಗುವವರು ಇನ್ನೂ ಹೆಚ್ಚು. ಹತ್ತಿರದ ಬಂಧುಗಳೂ ಮುಖ್ಯವಾದ ಗೆಳೆಯರೂ ಕೆಲವರು ಊಟಕ್ಕೆ ಉಳಿದರು. ಮದುವೆಯ ಸಮಯದಲ್ಲಿ ನಡೆಯುವಷ್ಟು ವೈಭವವಾಗಿ ಇದು ನಡೆಯದು. ಅಷ್ಟು ಹೆಚ್ಚು ಜನರೂ ಬಾರರು.

ಮಾತನಾಡಿಸಲು ಬರಬೇಕಾದವರೆಲ್ಲಾ ಬಂದರು ಎನಿಸಿದ ಮೇಲೆ ಹಿರಿಯರಿಗೆ ನಿವೇದನ ಮಾಡುವ ಕಾರ್ಯಕ್ರಮವನ್ನು ಮೊದಲಿಡುತ್ತಾರೆ. ಆಗ ಜಗಲಿಯನ್ನು ತೆಗೆದು ಹಾಕಿ ಹಿರಿಯರ ಸ್ಮಾರಕಗಳ ಎದುರಿಗೆ ಧೂಪ ಹಾಕುತ್ತಾರೆ. ಕುಟುಂಬದವರೆಲ್ಲಾ ಅಲ್ಲಿಗೆ ಬಂದು ನಮಸ್ಕರಿಸಬೇಕು. ಹಳೆಯ ಕಾಲದ ಹಾಡುಗಳ ಧಾಟಿಯಲ್ಲಿ ನಮ್ಮ ಅಣ್ಣ ಬರೆದ ಈ ಮರಣ ವೃತ್ತಾಂತವನ್ನು ನಮ್ಮ ಬಂಧುವೊಬ್ಬ ಗಟ್ಟಿಯಾಗಿ ಓದಿ ಹೇಳಿದ ಅಜ್ಜನೂ ಹಿರಿಯರೊಂದಿಗೆ ಸೇರಿದನೆಂದು ಶವದ ಪೆಟ್ಟಿಗೆಯನ್ನು ನಮ್ಮ ಹಿರಿಯರ ಸಮಾಧಿಗಳ ಬಳಿಗೆ ಮರು ದಿನ ತಂದಿಡುತ್ತಾರೆಂದು ಅದರಲ್ಲಿ ಹೇಳಿತ್ತು.

ಅಂತ್ಯಕ್ರಿಯೆಗಳಿಗೆ ಏರ್ಪಾಟು ಮುಂದಿನ ಕೆಲಸ ಇದೇ ಬಹಳ ಕಷ್ಟದ್ದು. ನಮ್ಮ ಹಿರಿಯರಿಗೆ ಯಾರಿಗೂ ಆ ರಾತ್ರಿ ನಿದ್ದೆ ಇರಲಿಲ್ಲವೆಂದು ನನಗೆ ಚೆನ್ನಾಗಿ ನೆನಪಿದೆ.

ಮಾರನೆಯ ಬೆಳಗ್ಗೆ ಬಂಧುಗಳೂ ಗೆಳೆಯರೂ ಅಲ್ಲದೆ ಮೆರವಣಿಗೆಗೆ ಬರಬೇಕಾದವರೆಲ್ಲಾ ಬಾಗಿಲ ಮುಂದೆ ಬಂದು ಸೇರಿದರು. ಬಂದವರಿಗೆಲ್ಲಾ ತಮ್ಮ ಅಂಗಿಗಳಿಗೆ ಚುಚ್ಚಿಕೊಳ್ಳಲು ಒಂದೊಂದು ಬಿಳಿಯ ಕಾಗದದ ಹೂವನ್ನು ಕೊಟ್ಟರು. ಅದಕ್ಕೆ ಮಧ್ಯೆ ಅರಿಶಿಣದ್ದೋ ಅಥವಾ ನೀಲಿಯದೋ ಒಂದು ಚುಕ್ಕೆ ಇರುತ್ತಿತ್ತು. ಮೆರವಣಿಗೆಯಲ್ಲಿ ಯಾರು ಯಾರು ಎಲ್ಲೆಲ್ಲಿ ನಿಲ್ಲಬೇಕೋ ತಿಳಿಸಿದರು. ಪುರೋಹಿತ ಬಂದ. ಮಂತ್ರಪಠನೆ ಆದಮೇಲೆ ಕಟ್ಟಿಗೆಗಳ ಮೇಲೆ ಇಟ್ಟಿದ್ದ ಶವದ ಪೆಟ್ಟಿಗೆಯನ್ನು ೧೬ ಜನ ಹೊತ್ತುಕೊಂಡು ಹೊರಟರು.

ಮೆರವಣಿಗೆ ನಮ್ಮ ಮನೆಯಿಂದ ಮೆಲ್ಲನೆ ಮುಂದೆ ನಡೆಯಿತು. ಎಲ್ಲಕ್ಕೂ ಮೊದಲು ಕಾಗದದಲ್ಲಿ ಮಾಡಿದ ಒಂದು ದೊಡ್ಡ ದೇವತೆಯ ಗೊಂಬೆಯನ್ನು ಒಬ್ಬ ಆಳು ಗಾಲಿಗಳ ಮೇಲೆ ಕೂಡಿಸಿ ನೂಕುತ್ತಾ ಹೊರಟ. ಅದರ ಹಿಂದೆ ನಮ್ಮ ಅಜ್ಜನ ಹೆಸರೂ ವಯಸ್ಸೂ ಬಂಗಾರದ ಅಕ್ಷರಗಳಲ್ಲಿ ಬರೆದ ಒಂದು ಕೆಂಪು ರೇಷ್ಮೆ ಬಾವುಟವನ್ನು ಹಿಡಿದು ಒಬ್ಬ ನಡೆದ. ಕಾಗದ ದಿಂದ ಮಾಡಿದ ೪ ಮೃಗಗಳು-ಒಂದು ನೀಲಿ ಬಣ್ಣದ ಸಿಂಹ, ೧ ಬಿಳಿಯ, ಆನೆ ೧ ಹುಲಿ, ಒಂದೇ ಕೊಂಬುಳ್ಳ ಒಂದು ವಿಚಿತ್ರ ಮೃಗ—ಎಲ್ಲವೂ ಮೆರವಣಿಗೆ ಹೊರಟವು. ಇವೆಲ್ಲದರ ಹಿಂದೆ ನಮ್ಮ ಭಾವ ಸಿಂಗರಿಸಿದ ಒಂದು ಕುದುರೆ

ಯನ್ನೇರಿ ಹೊರಟ. ೭ ಮಂದಿ ಬೌದ್ಧ ಸಂನ್ಯಾಸಿಗಳು ಕಾಷಾಯ ವಸ್ತ್ರ ಗಳನ್ನು ಧರಿಸಿ ನಡೆದರು. ಅವರ ಹಿಂದೆ ೧೨ ಹೂವಿನ ದೇವತೆಗಳ ಗೊಂಬೆ ಗಳನ್ನು ಹಿಡಿದು ೧೨ ಮಂದಿ, ಅವರ ಹಿಂದೆ ೮ ಮಂದಿ ಪುರೋಹಿತರು, ಅಜ್ಜನ ಚಿತ್ರಪಟ, ಆತನ ಹೆಸರೂ ವಯಸ್ಸೂ ಬರೆದ ಹಲಗೆ-ಎಲ್ಲವೂ ವರಸೆ ಯಾಗಿ ಸಾಗಿದವು. ಸತ್ತವರಿಗೆ ಮೊಮ್ಮಗನಾದುದರಿಂದ ಅಣ್ಣ ಸಮಾಧಿಯ ಮೇಲೆ ಇಡುವ ಹಲಗೆ ಹೊತ್ತು ಹೊರಟ. ಬಳಗದವರೂ, ಅವರ ಹಿಂದೆ ಕುಟುಂಬದವರೂ ಬಿಳಿಯ ಬಟ್ಟೆ ಉಟ್ಟು ಕತ್ತಿಗೆ ಬಿಳಿಯ ಪಟ್ಟೆಗಳನ್ನು ಸುತ್ತಿಕೊಂಡು ನಡೆದರು. ಅವೆಲ್ಲಕ್ಕೂ ಹಿಂದೆ ಕಡೆಯಲ್ಲಿ ಶವದ ಪೆಟ್ಟಿಗೆ ಯನ್ನು ಹೊತ್ತು ೧೬ ಜನ. ಪೆಟ್ಟಿಗೆಗೆ ರೇಷ್ಮೆಯ ಬಟ್ಟೆ ಹೊದಿಸಿದ್ದರು. ಅದರ ಮೇಲೆ ಮಧ್ಯೆ ಹದ್ದಿನ ಗೊಂಬೆ, ಒಂದು ಕಡೆಗೆ ದೆವ್ವದ ತಲೆ, ಇನ್ನೊಂದು ಕಡೆಗೆ ಅದರ ಬಾಲಗಳನ್ನು ಹೊಲೆದಿದಾರೆ. ನಡೆಯಲಾರದ ಹೆಂಗಸರೆಲ್ಲಾ ಶವದ ಪೆಟ್ಟಿಗೆಯ ಹಿಂದೆ ಮೆಣೆಯಲ್ಲಿ ಬಂದರು. ಅಜ್ಜಿ ಮಾತ್ರ ಮನೆಯಲ್ಲೇ ಉಳಿದಳು. ಆಕೆಯನ್ನು ಸಮಾಧಾನಪಡಿಸಲು ದೊಡ್ಡಮ್ಮಂದಿರು ಇಬ್ಬರು ಹಿಂದೆ ನಿಂತರು.

ಮೆರವಣಿಗೆ ಊರಿನ ದೊಡ್ಡ ಪೇಟೆಯಲ್ಲಿ ಸಾಗಿತು. ದಾರಿಯ ಎಡಬಲದಲ್ಲೂ ಜನ ಕಿಕ್ಕಿರಿದಿದ್ದರು. ದಾರಿಯಲ್ಲಿ ಇದ್ದವರು ಅಲ್ಲಲ್ಲಿ ತಮ್ಮ ಮನೆಯ ಮುಂದೆ ಅಜ್ಜನಿಗೆ ಗೌರವವನ್ನು ಸಲ್ಲಿಸಲು ನಡು ನಡುವೆ ನಿಲ್ಲ ಬೇಕಾಯಿತು ಅದರಿಂದ ಮುಂದಕ್ಕೆ ಬೇಗ ಸಾಗಲಾಗಲಿಲ್ಲ. ಊರಿನ ಮೂಡಲು ಬಾಗಿಲಿಗೆ ಹೋದೆವು. ಅಲ್ಲಿಂದ ಶವದ ಪೆಟ್ಟಿಗೆ ನಮ್ಮ ಪೂರ್ವ ಜರ ಸಮಾಧಿಗಳ ಬಳಿಗೆ ಹೋಗಬೇಕು. ಆ ಸಮಾಧಿಗಳು ಬಹಳ ದೂರದಲ್ಲಿ ಬೆಟ್ಟಗಳ ಮೇಲಿವೆ. ಮೆರವಣಿಗೆಯ ಜೊತೆಗೆ ಇಲ್ಲಿಯವರೆಗೆ ಬಂದ ಬಂಧು ಗಳು ಹಿಂದಕ್ಕೆ ಮರಳಿದರು. ಅವರಿಗೆ ಕೃತಜ್ಞತೆ ತಿಳಿಸುತ್ತಾ ದೊಡ್ಡವ ರೆಲ್ಲರೂ ನಮಸ್ಕರಿಸಿದರು. ಅವರೆಲ್ಲಾ ಹಿಂದಿರುಗಿದ ಮೇಲೆ ವಿಗ್ರಹಗಳನ್ನೂ ಬೊಂಬೆಗಳನ್ನೂ ಹಿಂದಕ್ಕೆ ಕಳಿಸಿದರು.

ಶವದ ಪೆಟ್ಟಿಗೆಯ ಹಿಂದೆ ದೊಡ್ಡವರಾದ ಗಂಡಸರು ಮಾತ್ರ ಹೊರ ಟರು. ನಮ್ಮ ಪೂರ್ವಜರ ಸಮಾಧಿಗಳ ಬಳಿಗೆ ಈ ಪೆಟ್ಟಿಗೆ ಹೋಗಬೇಕು. ಅಲ್ಲಿ ಸಮಾಧಿ ಮಾಡುತ್ತಾರೆ.

ನಮ್ಮ ಮನೆಯ ಬಳಿ ಪೂರ್ವಜರ ಸ್ಮಾರಕಗಳು ಇರುವ ಸ್ಥಳದಲ್ಲಿ ಅಜ್ಜನ ಬಗ್ಗೆ ಬರೆದ ಹಲಗೆಯನ್ನು ಇಟ್ಟರು. ಒಂದು ದೀಪ ಹಚ್ಚಿದರು. ಧೂಪ ಪಾತ್ರೆಯನ್ನು ಇಟ್ಟರು. ಇವೆರಡೂ ನಂದದಂತೆ, ಸದಾ ಇರುವಂತೆ ಏರ್ಪಾಟು ಮಾಡಿದರು. ಮನೆಯಲ್ಲಿ ಪ್ರತಿಯೊಬ್ಬರೂ ಈ ದೀಪ ಧೂಪಾ ರಾಧನೆ ನಂದಿಹೋಗದಂತೆ ನೋಡಿಕೊಳ್ಳಬೇಕು ಎಂದು ತಿಳಿಸಿದರು. ಒಂದು ವರ್ಷ ಹೀಗೆ ನಡೆಯಬೇಕು. ಆ ಮೇಲೆ ಈ ಹಲಗೆಯನ್ನು ಹಿರಿಯರ ಪವಿತ್ರ ಗೃಹದಲ್ಲಿ ಇಡುತ್ತಾರೆ. ಅದಕ್ಕೇ ಒಂದು ಪ್ರತ್ಯೇಕ ತಂತ್ರ ಇದೆ. ಇದೆ. ದೀರ್ಘವಾದುದು. ಕನ್‌ಫ್ಯೂಷಿಯಸ್ ಸಿದ್ಧಾಂತದ ಪ್ರಕಾರ ಮೂರು ವರ್ಷ ಈ ದುಃಖ ಪ್ರದರ್ಶನ ನಡೆಯಬೇಕು. ಈಗ ಅದು ಒಂದು ವರ್ಷಕ್ಕೆ ತಗ್ಗಿ ಹೋಗಿದೆ.

ಈ ವರ್ಷದೊಳಗಾಗಿ ಕುಟುಂಬದ ಹೆಂಗಸರಾರೂ ಒಡವೆ ಇಡಲಾಗದು, ಹೊಸ ಬಟ್ಟೆ ತೊಡಕೂಡದು, ಯಾವ ಹಬ್ಬ ಹರಿಸವೂ ಕೂಡದು. ಮನೆಯಲ್ಲಿ ಮದುವೆ ನಡೆಯಬಾರದು ಸಂವತ್ಸರಾದಿ ಹಬ್ಬವೂ ಎಂದಿನಂತೆ ನಡೆಯಬಾರದು. ಕುಟುಂಬವೆಲ್ಲಾ ದುಃಖದಲ್ಲಿ ಮುಳುಗಿರುತ್ತದೆ.

ಈ ಕರ್ಮ ಕಾಂಡವನ್ನೆಲ್ಲಾ ನೋಡಿದರೆ ಇನ್ನೊಂದು ಮುಂದಿನ ಜನ್ಮದಲ್ಲಿ ನಂಬಿಕೆ ಇರುವುದು ಸ್ಪಷ್ಟವಾಗುತ್ತದೆ. ಸತ್ತು ಹೋದಮೇಲೆ ಏನಾಗುತ್ತದೆಯೋ ಯಾರಿಗೂ ಗೊತ್ತಿಲ್ಲ ಎನಿಸುತ್ತದೆ ನನಗೆ. ಆದರೂ ಹಿರಿಯರೊಬ್ಬರು ಸತ್ತುಹೋದಾಗ ಚಿಕ್ಕವರೆಲ್ಲರೂ ಆ ಹಿರಿಯರಿಗೆ ಗೌರವವನ್ನು ಸಲ್ಲಿಸುವುದು ಒಂದು ವಿಧಿ ಎಂದು ನನ್ನ ನಂಬಿಕೆ. ಹಿಂದಿನವರ ಆಚಾರ-ಶ್ರದ್ಧೆಗಳನ್ನು ಪೂರ್ತಿಯಾಗಿ ಖಂಡಿಸುವ ಈಗಿನ ಚೀನೀ ಯುವಕರೊಡನೆ ನಾನು ಏಕೀಭವಿಸಲಾರೆ ಪೂರ್ವ ಸಂಪ್ರದಾಯದಲ್ಲಿ ಬೆಳೆದ ಹಿರಿಯರು ತಮ್ಮ ಕಾಲದಲ್ಲಿ ತೀರಿಕೊಂಡ ಹಿರಿಯರಿಗೆ ತಾವು ನಡೆಸಿದ ರೀತಿಯಲ್ಲೇ ತಮ್ಮ ಅಂತ್ಯಕ್ರಿಯೆಗಳು ಕೂಡ ನಡೆಯುತ್ತವೆ ಎಂಬ ತೃಪ್ತಿ ಅವರಿಗೆ ಇರಬೇಕು. ಹೊಸ ಭಾವಗಳಲ್ಲಿ ಬೆಳೆದ ತರುಣರು ತಮಗೆ ಇಷ್ಟು ಅಟ್ಟಹಾಸದಿಂದ ಅಂತ್ಯಕ್ರಿಯೆ ನಡೆಯಬೇಕಾಗಿಲ್ಲ ಎಂದರೆ ಸರಿಯೆ. ನನ್ನ ಮಟ್ಟಿಗೆ ನನ್ನನ್ನು ದಹನ ಮಾಡಬೇಕೆಂದೇ ನನ್ನ ಇಷ್ಟ. ಆದರೆ ನಮ್ಮ ಪೂರ್ವಜರ ಅಭಿಪ್ರಾಯಗಳನ್ನು ಪೂರ್ತಿಯಾಗಿ ತಳ್ಳಿಹಾಕುವುದೂ ಒಳ್ಳೆಯ

ದಲ್ಲ. ನಮ್ಮ ತಂದೆಯ ಹಿಳಿಗೆಯವರು ಅಜ್ಜನ ಅಂತ್ಯಕ್ರಿಯೆಗಳನ್ನು ಪೂರ್ವ ಸಂಪ್ರದಾಯದ ಪ್ರಕಾರ ನಡೆಸಿದುದು ಬರೀ ಆಡಂಬರಕ್ಕಲ್ಲ.

ಅಂದಿನ ಆಚಾರದಂತೆ ಆ ರೀತಿ ನಡೆಸಬೇಕಾದದ್ದೇ. ಸಂಪ್ರದಾಯ ದಂತೆ ಅಂತ್ಯಕ್ರಿಯಗಳನ್ನು ನಡೆಸದಿದ್ದರೆ ತಮ್ಮ ತಂದೆಯ ಋಣವನ್ನು ತೀರಿಸದಿದ್ದಂತೆ ಎಂದು ಅವರು ಮನಸಾರೆ ನಂಬಿದ್ದರು. ಆದ್ದರಿಂದಲೇ ಹಾಗೆ ನಡೆಸಿದರು.

---



ಕಾಗದದ ಹೂ ಮಾರುವವನು.



ಪೊರಕೆ ಮಾರುವವನು.



